Laxman Babani Pai Memorial Publications, Jaichamraj Nagar, Hubli

INDOLOGICAL SERIES

KANNADA EDITIONS ] I [ *Editor:* Prof. B. S. Pai

ಮೂಲಮಂತ್ರಗಳು ಶಾಸ್ತ್ರೀಯ ಪಠಣದ ವಿವರಣೆಯೊಡನೆ ಕನ್ನಡಲಿಪಿಯಲ್ಲಿದ್ದ, ಕನ್ನಡ ಅನುವಾದದೊಡನೊಡಗೂಡಿದ,

# ಕನ್ನಡ ಋಗ್ವೇದ

## ಸಂಹಿತೆಯು

ಭಾಗ ೧.

ಅನುವಾದಕರು

ಲಕ್ಷ್ಮಣ ಬಾಬಣಿ ಪೈ

ಸಂಪುಟ — ಒಂದು

ಲಕ್ಷ್ಮಣ ಬಾಬಣಿ ಪೈ ಮೆಮೋರಿಯಲ್ ಪಬ್ಲಿಕೇಶನ್ಸ್,
ಘೋಡಕೆ ಬಿಲ್ಡಿಂಗ, ಜಯಚಾಮರಾಜ ನಗರ,
ಹುಬ್ಬಳ್ಳಿ.

# ನಮ್ಮ ಮಾತು

ಶ್ರೀ ಲಕ್ಷ್ಮಣ ಬಾಬಣಿ ಪೈ(೧೮೫೩-೧೯೨೭)ಯವರು ಉತ್ತರ ಕನ್ನಡ ಜಿಲ್ಲೆಯ, ಅಂಕೋಲೆಯಲ್ಲಿಯ ಆಗರ್ಭಶ್ರೀಮಂತ ಗೌಡಸಾರಸ್ವತ ಬ್ರಾಹ್ಮಣ ಮನೆತನದಲ್ಲಿ ಜನ್ಮವೆತ್ತಿದರು. ಅವರಿಗೆ ಚಿಕ್ಕಂದಿನಿಂದಲೂ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳ ಬಗ್ಗೆ ಶ್ರದ್ಧಾಸಕ್ತಿ ಬಹಳವಾಗಿದ್ದಿತು.

ಶ್ರೀ ಲಕ್ಷ್ಮಣ ಪೈಗಳವರು ತುಂಬ ರಸಿಕರಾಗಿದ್ದರೆಂದೂ, ಆಗಿನ ಕಾಲದಲ್ಲಿ ಅವರು ಯಕ್ಷಗಾನ ಬಯಲಾಟಗಳಲ್ಲಿ ಸ್ವತಃ ಭಾಗವಹಿಸುತ್ತಿದ್ದರೆಂದೂ, ಹಲವರಿಗೆ ಯೋಗ್ಯ ಮಾರ್ಗದರ್ಶನ ಮಾಡುತ್ತಿದ್ದರೆಂದೂ ಅಂಕೋಲೆಯ ಕಡೆಯ ನಾಡವರ ಹಳಬರು ಇಂದಿಗೂ ಹೇಳುತ್ತಾರೆ. ಅವರು ತಮ್ಮ ತಂದೆಯವರಾದ, ಶ್ರೀಮಂತ ಅಂಕೋಲಾ ಬಾಬಣಿ ಶೇಷಗಿರಿ ಪೈ(೧೮೨೩-೧೯೦೩)ಯವರು ಕಟ್ಟಿಸಿದ ಭವ್ಯಸೌಧವನ್ನು ಇನ್ನೂ ಭವ್ಯತರವನ್ನಾಗಿ ಮಾಡಿ, ಅದನ್ನು ಕನ್ನಡ ಜಿಲ್ಲೆಯಲ್ಲಿಯೇ ದೊಡ್ಡದಾದ ಪ್ರಾಸಾದವನ್ನಾಗಿ ಮಾಡಿದರು. ಅವರಿಗೆ ಸರಕಾರದ ದೊಡ್ಡ ಹುದ್ದೆಗಳು ಬಹುಸುಲಭವಾಗಿಯೇ ಸಿಗುತ್ತಿದ್ದವಾದರೂ, ಸ್ವಾತಂತ್ರ್ಯಪ್ರಿಯರಾಗಿದ್ದ ಅವರು ನೌಕರಿಗಳನ್ನೊಲ್ಲದೇ ಹಳ್ಳಿಗಾಡಿನ ಜನರ ಸೇವೆಯನ್ನೇ ಗುರಿಯಾಗಿಟ್ಟುಕೊಂಡರು. ಅವರು ಆಗಿನ ಕಾಲದಲ್ಲಿ ಆ ಭಾಗದ ಎಲ್ಲ ವಿಧದ ಪಂಚಾಯತಿಕೆಗಳಿಗೂ ಅಧ್ಯಕ್ಷರಾಗಿ, ನ್ಯಾಯನಿರ್ಣಯ ಕೊಡುವವರಾಗಿದ್ದರು.

ಶ್ರೀ ಲಕ್ಷ್ಮಣ ಪೈಗಳವರು ಹತ್ತೊಂಬತ್ತನೆಯ ಶತಮಾನದ ಮುಕ್ತಾಯ ಕಾಲದಲ್ಲಿ ರಚಿಸಿದ, ಭಾರತೀಯ ತಾತ್ವಿಕ ಹೆಬ್ಬೊತ್ತಿಗೆ (Great Indological Books) ಗಳಾದ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಮತ್ತು ಮಹಾಭಾರತಗಳನ್ನು ಪ್ರಕಟಿಸುವದೇ ನಮ್ಮ ಮುಖ್ಯೋದ್ದೇಶವು.

ಹದಿನಾರು (೧೬) ಸಂಪುಟಗಳಲ್ಲಿ ಸಂಪೂರ್ಣಗೊಳ್ಳುವ ಋಗ್ವೇದವನ್ನು ಕನ್ನಡದಲ್ಲಿ ಪ್ರಕಟಿಸುವ ಕಾರ್ಯವು ಈಗ ಪ್ರಾರಂಭವಾಗಿದೆ. ಇದು ಕೇವಲ ಅನುವಾದವಷ್ಟೇ ಅಲ್ಲ; ಋಗ್ವೇದದ ೧೦೫೫೨ ಮೂಲಮಂತ್ರಗಳು ಕನ್ನಡ ಲಿಪಿಯಲ್ಲಿ ಕೊಡಲ್ಪಟ್ಟು, ಅವುಗಳ ಶಾಸ್ತ್ರೀಯ ಪಠಣದ ವಿವರಣೆಯೂ ಇಲ್ಲಿದೆ. ಈ ಕೃತಿ ಪೂರ್ಣಗೊಂಡು ಪ್ರಕಟವಾದಾಗ್ಗೆ, ಜಗತ್ತಿನ ಮಹಾಗ್ರಂಥಗಳ ಮಾಲಿಕೆಯಲ್ಲೊಂದಾಗುವದು.

ಮುಂದಿನ ಪ್ರಕಟಣೆಯೇ ಶ್ರೀಕೃಷ್ಣ-ದ್ವೈಪಾಯನ-ವೇದವ್ಯಾಸ-ಮುನಿ-ರಚಿತವಾದ ಒಂದು ಲಕ್ಷ (೧,೦೦,೦೦೦), ಕನ್ನಡಲಿಪಿಯಲ್ಲಿರುವ ಸಂಸ್ಕೃತ ಶ್ಲೋಕಗಳಿಂದಲೂ, ಅವುಗಳ ಕನ್ನಡ ಅನುವಾದದಿಂದಲೂ ಕೂಡಿದ ಐವತ್ತು (೫೦) ಸಂಪುಟಗಳಲ್ಲಿ ಪೂರ್ಣವಾಗುವ ಮಹಾಭಾರತವು. ಈ ಮಹಾಕೃತಿಯು ಜಾಗತಿಕ ಸಂಸ್ಕೃತಿಗೆ ನಮ್ಮ ಉತ್ಕೃಷ್ಟವಾದ ಕಾಣಿಕೆ.

ಇದರಂತೆಯೇ ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳು ಶಾಸ್ತ್ರೀಯ ಪಠಣದ ವಿವರಣೆಯೊಡನೊಡಗೂಡಿದ ಮತ್ತು ಕನ್ನಡಲಿಪಿಯಲ್ಲಿ

ಕೊಡಲ್ಪಟ್ಟ ಮೂಲಮಂತ್ರಗಳೊಡನೆಯೂ, ಅವುಗಳ ಅತ್ಯಂತ ಸಮರ್ಪಕ ಕನ್ನಡ ಅನುವಾದದೊಡನೆಯೂ, ಹದಿನಾಲ್ಕು (೧೪) ಸಂಪುಟಗಳಲ್ಲಿ ಪ್ರಕಟವಾಗಲಿರುವವು.

ದೇವಭಾಷೆಯಲ್ಲಿರುವ ಈ ಮಹದ್ಗ್ರಂಥಗಳ ಜ್ಞಾನವು ದೇವಭಾಷೆಯನ್ನರಿಯದ ಕನ್ನಡಿಗರಿಗೂ, ದೇವಭಾಷೆಯನ್ನರಿಯುವ ಕನ್ನಡಿಗರಿಗೂ ಅತ್ಯಗತ್ಯವಾಗಿದೆ. ಆದ್ದರಿಂದಲೇ, ಕನ್ನಡ ಸಾಹಿತ್ಯದಲ್ಲಿರುವ ಅತ್ಯಂತ-ಪ್ರಾಚೀನ-ಸಾಹಿತ್ಯದ-ಕೊರತೆಯನ್ನು ಈ ಪ್ರಕಾಶನವು ಖಂಡಿತವಾಗಿ ತುಂಬುತ್ತದೆ. ಕನ್ನಡಕ್ಕೆ ಇದೊಂದು ನಮ್ಮ ಮಹತ್ತರವಾದ ಶಾಶ್ವತ-ಕಾಣಿಕೆಯೇ ಸರಿ.

ಈ ಬೃಹತ್ ಪ್ರಕಾಶನ ಕಾರ್ಯವು ತುಂಬ ವೆಚ್ಚದ್ದಾಗಿರುವದರಿಂದ ನಾವು ಈ ಕೆಳಗಿನ ಯೋಜನೆಯನ್ನು ಕೈಕೊಂಡಿದ್ದೇವೆ. ಎಂಬತ್ತು (೮೦) ಸಂಪುಟಗಳಲ್ಲಿ ಪ್ರಕಟವಾಗಲಿರುವ ಈ ಭಾರತೀಯ ಗ್ರಂಥಗಳ ಪ್ರಕಾಶನಕ್ಕೆ ನೂರು ರೂಪಾಯಿ (ರೂ. ೧೦೦) ಗಳನ್ನು ಕೊಟ್ಟು ಆಜೀವ ಸದಸ್ಯರಾಗುವವರು ವೈದಿಕ-ಸಂಸ್ಕೃತ-ಮೂಲದಿಂದಲೂ, ಕನ್ನಡ ಅನುವಾದದಿಂದಲೂ ಕೂಡಿದ ಎಂಬತ್ತು (೮೦) ಸಂಪುಟಗಳನ್ನು ಪಡೆಯುತ್ತಾರೆ. ಪ್ರತಿ ಸಂಪುಟದಲ್ಲಿಯೂ ಡೆಮಿ ಒಕ್ಟೆವೊ (೮½″ × ೫⅝″) ಆಕಾರದ ೨೦೦-೩೨೦ ಪುಟಗಳಿದ್ದು, ಈ ಸಂಪುಟಗಳು ನಾಲ್ಕು ತಿಂಗಳಿಗೊಮ್ಮೆ ಪ್ರಕಟವಾಗುತ್ತವೆ. ಪ್ರತಿಯೊಂದು ಸಂಪುಟದ ಬೆಲೆ ಐದು ರೂಪಾಯಿ (ರೂ. ೫) ಗಳು. ಅಂದರೆ ಆಜೀವ ಸದಸ್ಯರು ನಾನ್ನೂರು ರೂಪಾಯಿ (ರೂ. ೪೦೦) ಬೆಲೆ ಬಾಳುವ ಈ ಮಹಾಗ್ರಂಥಗಳನ್ನು ಕೇವಲ ಒಂದು ನೂರು ರೂಪಾಯಿ(ರೂ. ೧೦೦)ಗಳಿಗೆ ಪಡೆಯುತ್ತಾರೆ.

ಇದೂ ಅಲ್ಲದೆ, ಆಜೀವ-ಸದಸ್ಯರ ಹೆಸರುಗಳು ಪ್ರಕಟವಾಗಲಿರುವ ಎಲ್ಲ ವೇದಗಳಲ್ಲಿಯೂ, ಮಹಾಭಾರತದ ಸರ್ವ ಸಂಪುಟಗಳಲ್ಲಿಯೂ, ಅಂದವಾಗಿ ಮುದ್ರಿಸಲ್ಪಟ್ಟು, ಶಾಶ್ವತವಾಗಿ ಪ್ರಸಿದ್ಧಗೊಳಿಸಲ್ಪಡುವವೆಂಬುದನ್ನು ಚೆನ್ನಾಗಿ ಲಕ್ಷದಲ್ಲಿಟ್ಟುಕೊಂಡು, ಆಜೀವ-ಸದಸ್ಯರಾಗಬಯಸುವವರು ಮನಿಯಾರ್ಡರ ದಿಂದಾಗಲಿ, ಕ್ರೊಸ್ಡ ಚೆಕ್ಕಿ (Crossed Cheque) ನ ಮುಖಾಂತರವಾಗಲಿ ನೂರು ರೂಪಾಯಿ(ರೂ. ೧೦೦)ಗಳನ್ನು ನಮ್ಮ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ, ಈ ಪುಣ್ಯಸಲಿಲೆಯಾದ ಜ್ಞಾನಗಂಗೆಯನ್ನು ಸೇವಿಸುವ ಮಹಾಭಾಗ್ಯವನ್ನು ಪಡೆದು ಧನ್ಯರಾಗಬೇಕಾಗಿ ವಿನಂತಿ.

**ಲಕ್ಷ್ಮಣ ಬಾಬಣಿ ಪೈ ಮೆಮೋರಿಯಲ್ ಪಬ್ಲಿಕೇಶನ್ಸ್,**
ಜಯಚಾಮರಾಜ ನಗರ, ಹುಬ್ಬಳ್ಳಿ.

# ಆಜೀವ ಸದಸ್ಯರ ಹೆಸರುಗಳು

೧. ಶ್ರೀ. ರಂಗರಾವ ದಿವಾಕರ, ಹುಬ್ಬಳ್ಳಿ.
೨. ,, ಎಚ್. ಲಕ್ಷ್ಮೀನಾರಾಯಣ ಕಾಮತ, ಗಂಗೊಳ್ಳಿ.
೩. ,, ಡಿ. ವ್ಹಿ. ಚಿತ್ತಾಳ, ಹುಬ್ಬಳ್ಳಿ.
೪. ,, ಎಚ್. ವೆಂಕಟ್ರಾಯ ಕಾಮತ, ಉಡುಪಿ.
೫. ,, ಏ. ಎಸ್. ಕಾಮತ, ಮಂಗಳೂರು.
೬. ,, ಕಟ್ಟಂಗೆರೆ ನಾರಾಯಣ ನಾಯಕ, ಕಾರ್ಕಳ.
೭. ಶ್ರೀ ವೆಂಕಟ್ರಮಣ ದೇವಸ್ಥಾನ, ಕಾರ್ಕಳ.
೮. ಶ್ರೀ. ಬಸ್ತಿ ಶ್ರೀಧರ ದೇವಪ್ಪಾ ಶೇಣೈ, ಮಂಗಳೂರು.
೯. ಡಾ. ಕೇ. ಶ್ರೀನಿವಾಸ ಕಾಮತ, ಕರಿಂಗಣ.
೧೦. ಹಿಂದು ಏಡೆಡ್ ಹಾಯರ್ ಎಲಿಮೆಂಟರಿ ಸ್ಕೂಲ್, ಬಸ್ರೂರು.
೧೧. ಶ್ರೀ. ಗಣಪತಿ ರಾಮಕೃಷ್ಣ ಭಟ್ಟ ಹಾಸಣಗಿ, ಮಂಚೀಕೇರಿ.
೧೨. ಶ್ರೀ ವೆಂಕಟ್ರಮಣ ದೇವಸ್ಥಾನ, ಮುಲ್ಕಿ.
೧೩. ಶ್ರೀ. ಗೋವಿಂದರಾಯ ನಾರಾಯಣ ಕಾಮತ, ರಿಪ್ಪನಪೇಟೆ.
೧೪. ಶ್ರೀ ಮಾರಿಕಾಂಬಾ ದೇವಸ್ಥಾನ, ಶಿರಸಿ.
೧೫. ಶ್ರೀ. ಬಿ. ಶ್ರೀಪತಿ ಉಪಾಧ್ಯಾಯ, ನರೆಗಲ್.
೧೬. ,, ಜಿ. ಕೇ. ಪೈ ಮಂಜೈನ, ಸಿದ್ದಾಪುರ.
೧೭. ,, ವೆಂಕಟೇಶ ಶೇಷೂ ಹೊದಲೂರ, ಹುಬ್ಬಳ್ಳಿ.
೧೮. ಶ್ರೀ ಲಕ್ಷ್ಮೀವೆಂಕಟೇಶ ದೇವಸ್ಥಾನ, ಸಿದ್ದಾಪುರ.
೧೯. ಜೈ ಹಿಂದ ಹಾಯ್ ಸ್ಕೂಲ್, ಅಂಕೋಲಾ.
೨೦. ಶ್ರೀ. ಪಿ. ಎನ್. ನರಸಿಂಹಯ್ಯಾ, ಹೊಳೆನರಸಿಪುರ.

# ಮುನ್ನುಡಿ

## ೧. ವೇದಗಳು

'ವಿದ್' ಧಾತುವಿನಿಂದ 'ವೇದ'ವೆಂಬ ಶಬ್ದವು ಹುಟ್ಟಿರುವದು. ವೇದವೆಂದರೆ 'ದರ್ಶನ'ವು ಮತ್ತು ಯಾರಿಗೆ 'ದರ್ಶನ'ವಾಗಿರುವದೋ, ಅವರೇ ಋಷಿಗಳು, ಅವರೇ 'ಮಂತ್ರದ್ರಷ್ಟಾರ'ರು. ಆಕಾಶದಲ್ಲಿ ವ್ಯಾಪ್ತವಾದ ನಿತ್ಯಶಬ್ದಗಳು ನಾವು ಕಂಠ, ಜಿಹ್ವೆ ಮೊದಲಾದವುಗಳಿಂದ ಹೇಗೆ ಅಭಿವ್ಯಕ್ತಗೊಳಿಸುವೆವೋ, ಹಾಗೆಯೇ ಶಬ್ದಮಯವಾದ ನಿತ್ಯವೇದಗಳನ್ನು ಪರಮಪೂಜ್ಯರೂ, ನಮ್ಮ ಪೂರ್ವಜರೂ ಆದ ಋಷಿಗಳು ಸಮಾಧ್ಯವಸ್ಥೆಯಲ್ಲಿ ಪರಮಾತ್ಮನಿಂದ ಪಡೆದು, ಆ ವೇದಗಳನ್ನು ವಿಶ್ವಕಲ್ಯಾಣಕ್ಕಾಗಿ ಪ್ರಕಟಗೊಳಿಸಿದರು.

ಪರಮಾತ್ಮನು ನಿತ್ಯನು, ಸನಾತನನು. ಆತನ ಉಸಿರಾದ ವೇದವಾದರೂ ನಿತ್ಯವೇ. ಮಹಾಪ್ರಲಯದಲ್ಲಿ ಅವ್ಯಕ್ತವಾಗಿದ್ದ ವೇದನ್ನು ಸೃಷ್ಟಿಯ ಆದಿಯಲ್ಲಿ ಬ್ರಹ್ಮನು ದೊರಕಿಸುತ್ತಾನೆ. ಹೀಗೆ ವೇದವು ಅಪೌರುಷೇಯವಾಗಿರುವದು. ಈ ಅಪೌರುಷೇಯವಾದ ವೇದವನ್ನು ಸಾಕ್ಷಾತ್ ಪರಮಾತ್ಮನಿಂದಲೇ 'ಶ್ರವಣ' ಮಾಡಿ, ಅದನ್ನವರು ತಮ್ಮ ಪ್ರಿಯಶಿಷ್ಯರಿಗೆ 'ಶ್ರವಣ' ಮಾಡಿಸಿದರು. ಆದ್ದರಿಂದಲೇ ವೇದಕ್ಕೆ 'ಶ್ರುತಿ'ಯೆಂತಲೂ ಹೆಸರು ಬಿದ್ದಿರುವದು.

ಪಾಂಡುರೋಗಿಗೆ ಸಮಸ್ತಸಂಸಾರವು ಹಳದೀಬಣ್ಣದ್ದಿರುವದಾಗಿ ತೋರುವದು; ಕೆಂಪು ಕನ್ನಡಕವನ್ನು ಧರಿಸಿದ ವ್ಯಕ್ತಿಗೆ ಅದು ಕೆಂಪಾಗಿ ಕಾಣುವದು. ಆದರೆ ವಸ್ತುಸ್ಥಿತಿಯು ಹಾಗಿರುವದಿಲ್ಲ. ಆದ್ದರಿಂದಲೇ ಪ್ರತ್ಯಕ್ಷಪ್ರಮಾಣವು ನಿರ್ದೋಷವಾಗಲಾರದು. ಅದರಂತೆಯೇ, ಮೋಡಗಳನ್ನು ನೋಡಿ ಮಳೆಯ ಅನುಮಾನವನ್ನು ಮಾಡುವೆವಾದರೂ, ಎಲ್ಲ ಮೋಡಗಳೂ ಮಳೆಸುರಿಸಲಾರವು. ಪರ್ವತದ ಬಾಷ್ಪವನ್ನು ಹೊಗೆಯೆಂದು ಭ್ರಮಿಸಿ, ಆ ಪ್ರದೇಶದಲ್ಲಿ ಬೆಂಕಿಯಿರಲೇಬೇಕೆಂದು ಅನುಮಾನಿಸಿದರೆ, ಅದು ಮಹಾಭ್ರಾಂತಿಯೇ ಸರಿ. ಆದ್ದರಿಂದ ಅನುಮಾನ-ಪ್ರಮಾಣವೂ ದೋಷಯುಕ್ತವಾಗಿರುವದು. ಈ ಪ್ರತ್ಯಕ್ಷ ಮತ್ತು ಅನುಮಾನಪ್ರಮಾಣಗಳಿಗಿಂತ ಶ್ರೇಷ್ಠವಾದ ಶಬ್ದಪ್ರಮಾಣದಲ್ಲಿ ಎಳ್ಳಷ್ಟೂ ದೋಷವಿಲ್ಲದಿರುವದರಿಂದಲೂ, ಸಮಾಧ್ಯವಸ್ಥೆಯಲ್ಲಿ ಸಾಕ್ಷಾತ್ ಪರಮಾತ್ಮನ ದರ್ಶನ ಪಡೆದು ಆತನ ಮುಖದಿಂದಲೇ ಶ್ರವಣಮಾಡಿದ ಋಷಿಗಳ ಶಬ್ದವಾಗಿರುವದರಿಂದಲೂ, ವೇದವು ವಿಶುದ್ಧವಾದ ಜ್ಞಾನವೂ, ಅತ್ಯಂತಮಹಿಮಾಯುತವಾದ ಪ್ರಮಾಣಶಾಸ್ತ್ರವೂ ಆಗಿರುವದು. ಅದು ಕಾರಣವೇ, ಧರ್ಮಾಧರ್ಮಗಳ ಸಂದಿಗ್ಧಕಾಲದಲ್ಲಿಯೂ, ಕರ್ತವ್ಯಾಕರ್ತವ್ಯಗಳ ನಿರ್ಣಯವನ್ನು ಮಾಡುವಾಗಲೂ ನಮ್ಮ ಸಮಸ್ತಶಾಸ್ತ್ರಗಳೂ ವೇದವನ್ನೇ ಪ್ರಮಾಣವಾಗಿ ಗ್ರಹಿಸಿರುವವು.

ಶಬ್ದವು ಯಾರಿಂದಲೂ ಹುಟ್ಟಿಸಲ್ಪಡುವದಿಲ್ಲ; ಅದು ನಿತ್ಯವೂ, ಸದಾ ಶಾಶ್ವತವೂ ಆಗಿರುವದು. ಉಚ್ಚಾರಣೆಗಿಂತ ಮುಂಚೆ ಶಬ್ದವು ಅವ್ಯಕ್ತಾವಸ್ಥೆಯಲ್ಲಿದ್ದು, ಉಚ್ಚರಿಸುವಾಗ್ಗೆ ವ್ಯಕ್ತವಾಗಿ, ಉಚ್ಚರಿಸಿದ ಮೇಲೆ ತಿರುಗಿ ಅವ್ಯಕ್ತ

ವಾಗುವದಾದರೂ ಆ ಶಬ್ದವು ನಷ್ಟವಾಗುವದಿಲ್ಲ. ಆದ್ದರಿಂದಲೇ ಶಬ್ದಮುದ್ರಿತ (Gramophone) ದ ಸಹಾಯದಿಂದ ಮುದ್ರಿತವಾದ ಶಬ್ದವನ್ನು ನಾವು ಕಾಲಾಂತರಗಳ ಮೇಲೆಯೂ ಕೇಳಬಲ್ಲೆವು. ಶಬ್ದವು ಧ್ವನಿಯಿಂದ ಅಭಿವ್ಯಕ್ತ ವಾಗುವದಾದರೂ, ಅದು ಧ್ವನಿಗಿಂತ ಭಿನ್ನವಾಗಿರುವದು. ಧ್ವನಿಯು ಗಾಳಿಯಿಂದ ಹುಟ್ಟುತ್ತದೆ; ಆದರೆ ಈ ಸೃಷ್ಟಿಯ ಯಾವುದೇ ಪದಾರ್ಥವೂ ತಿಳಿಯಾದ, ನಿರಾ ಲಂಬವಾದ ಶಬ್ದವನ್ನು ಹುಟ್ಟಿಸಲಾರದು. ಭ್ರಮೆ, ಪ್ರಮಾದ, ಇಂದ್ರಿಯ ದೋಷ, ವಿಪ್ರಲಿಪ್ಸೆ—ಇವೇ ಮೊದಲಾದ ಕಾರಣಗಳಿಂದ ಸಾಮಾನ್ಯ ಮಾನವರ ಶಬ್ದವು ದೋಷಯುಕ್ತವೂ, ಅಪ್ರಮಾಣವೂ ಆಗಿರುವದು. ಆದರೆ ಸಮಾಧ್ಯ ವಸ್ಥೆಯಲ್ಲಿದ್ದ ಋಷಿಗಳ ವಿಮಲಾಂತಃಕರಣದಲ್ಲಿ ಸಾಕ್ಷಾತ್ ಪರಮಾತ್ಮನಿಂದಲೇ ಪ್ರಕಟಗೊಳಿಸಲ್ಪಟ್ಟ ವೈದಿಕ ಶಬ್ದವು ದೋಷಶೂನ್ಯವೂ, ಪ್ರಮಾಣವೂ ಆಗಿರುವದು.

ಅನಂತಕಾಲದ, ಅನಂತ ಋಷಿಗಳ, ಅನಂತ ಉಚ್ಚತಮವಾದ ಮತ್ತು ಜ್ಞಾನಮಯವಾದ ವಿಚಾರಧಾರೆಗಳು, ಅನಂತ ಗಿರಿ-ಪರ್ವತ, ದರಿ-ಕಂದರಗಳಲ್ಲಿ ದ್ರುತಗತಿಯಿಂದ ಪ್ರವಹಿಸಿ, ಪ್ರತಿಧ್ವನಿಗೊಳಿಸುತ್ತ, ವಿಶಾಲವೂ, ಸಸ್ಯಶ್ಯಾಮಲವೂ ಆದ ಈ ಭಾರತಭೂಮಿಯಲ್ಲಿ ಹರಿದು ವೇದವೆಂಬ ಸಾಗರದಲ್ಲಿ ಬಂದು ಸಮ್ಮಿಲಿತ ವಾಗಿರುವವು. ವೇದದಲ್ಲಿಯ ವಾಣಿಯು ದಿವ್ಯವೂ, ಮರ್ಮಸ್ಪರ್ಶಿಯೂ, ಪ್ರತಿಭಾಶಾಲಿಯೂ, ನವಜೀವನ-ಸಂಜೀವನ-ದಾಯಕವೂ, ನಿರಾಶಾನಾಶಕವೂ, ಉತ್ಸಾಹವರ್ಧಕವೂ, ಅನನ್ಯವೂ ಆಗಿರುವದು. ಲೋಕಮಾನ್ಯ ಬಾಲ ಗಂಗಾ ಧರ ಟಿಲಕರ ಮಾತಿನಲ್ಲಿ ಹೇಳುವದಾದರೆ "ಸಭ್ಯತಮ ಮಾನವನ ಯಾವುದೇ ಕಾಲದ, ಯಾವುದೇ ದೇಶದ ಸ್ವತಂತ್ರ ವಿಚಾರಗಳು ವೇದಗಳಲ್ಲಿ ಹೇಳಿರುವ ಅತಿಮಾನವ ವಿಚಾರಗಳನ್ನು ಎಂದಾದರೂ ಸರಿಗಟ್ಟಲಾರವು." ಆದುದರಿಂದಲೇ ವೇದವು ನಮಗೆ ನಿತ್ಯವೂ ಪೂಜನೀಯವಾದ ಗ್ರಂಥವಾಗಿರುವದು.

ಯಾಸ್ಕನು "ಆಧಿದೈವತ, ಆಧ್ಯಾತ್ಮಿಕ, ಆಖ್ಯಾನ—ಸಮಯಪರಕ, ಐತಿ ಹಾಸಿಕ, ನೈದಾನ, ನೈರುಕ್ತ, ಪರಿವ್ರಾಜಕ, ಪೂರ್ವಯಾಜ್ಞಿಕ ಮತ್ತು ಯಾಜ್ಞಿಕ" ಗಳೆಂಬ ನವವಿಧವಾದ ವೇದಾರ್ಥಮಾಡುವ ರೀತಿಯನ್ನು ಬಣ್ಣಿಸಿರುವನು. ಹೀಗೆ ವೇದದಲ್ಲಿಯ ಶಬ್ದ-ಶಬ್ದಕ್ಕೆ ವಿಧ-ವಿಧವಾದ ಅರ್ಥವು ಉಂಟಾಗ ಬಲ್ಲದು. ಆದುದರಿಂದಲೇ, ಅನಾದಿಕಾಲದಿಂದಲೂ ಪ್ರತಿಭಾಶಾಲಿಯಾದ ವೇದ ಭಾಷ್ಯಕಾರರು ಅನೇಕ ತರದಲ್ಲಿ ವೇದದ ಅರ್ಥವನ್ನು ಮಾಡಿರುವರು. ಇವರಲ್ಲಿ ಸ್ಕಂದಸ್ವಾಮಿ, ವೆಂಕಟ ಮಾಧವ, ಮಧ್ವಾಚಾರ್ಯ, ಸಾಯಣಾಚಾರ್ಯ, ಉದ್ಗೀಥ, ನಾರಾಯಣ, ರಾವಣ, ಮುದ್ಗಲ, ದಯಾನಂದ ಸರಸ್ವತೀ, ರಾಥ, ಬೋಟಲಿಂಗ್ಕ, ಎಗಲಿಂಗ, ಮೆಕ್ಸಮೂಲರ, ಗಿಲ್ಡನರ, ವಿಲ್ಸನ, ಗ್ರಿಫಿಥ, ಮೆಕಡೊನಲ, ಬ್ಲೂಮಫೀಲ್ಡ, ಕಾಯೆಗಿ, ಲುಡ್ವಿಗ, ಬೆರಗಾಯನೆ, ವೆಬರ, ಶ್ಲೆಗನ ಮೊದಲಾದವರು ಪ್ರಮುಖರಾಗಿರುವರು.

ಅತಿಪ್ರಾಚೀನಕಾಲದಲ್ಲಿ ಋಗ್ವೇದಮಾತ್ರವೇ ಇದ್ದಿತು. ಇದರಿಂದಲೇ ಸಾಮವೇದವೂ, ತರುವಾಯ ಯಜುರ್ವೇದವೂ ಪ್ರಕಟವಾದವು. ಋಗ್ವೇದ,

ಯಜುರ್ವೇದ ಮತ್ತು ಸಾಮವೇದಗಳಿಗೆ "ವೇದತ್ರಯೀ" ಎಂಬ ಹೆಸರು. ಇವೆಲ್ಲವುಗಳಿಗಿಂತ ಭಿನ್ನವಾದ ವೇದವೇ ಅಥರ್ವಣ ವೇದವು. ಹೀಗೆ ವೇದಗಳು ನಾಲ್ಕು.

ಪ್ರತಿಯೊಂದು ವೇದದಲ್ಲಿಯೂ ಸಂಹಿತೆ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳೆಂಬ ನಾಲ್ಕು ಭಾಗಗಳಿವೆ. ಬೇರೆ ಬೇರೆ ಋಷಿಗಳು ರಚಿಸಿದ ಮಂತ್ರಗಳನ್ನು ಒಂದು ಕ್ರಮದಲ್ಲಿ ಸೇರಿಸಿ, ಒಂದೇ ಕಡೆಯಲ್ಲಿ ಒಟ್ಟು ಗೂಡಿಸಿರುವ ಭಾಗವೇ—ಸಂಹಿತೆಯು. ಯಾವ ಯಾವ ಕಾಲದಲ್ಲಿ ಯಾವ ಯಾವ ಕರ್ಮಗಳನ್ನಾಚರಿಸಬೇಕೆಂಬುದನ್ನು ವಿಸ್ತಾರವಾಗಿ ತಿಳಿಸುವ ಭಾಗವೇ ಬ್ರಾಹ್ಮಣವು. ಬಹುರಹಸ್ಯವಾದ ವೇದಾಂತವಿಷಯಗಳನ್ನು ಬೋಧಿಸುವ ಭಾಗವೇ ಆರಣ್ಯಕವು. ಆರಣ್ಯಕಗಳ ಕೊನೆಯ ಭಾಗವೇ ಉಪನಿಷತ್ತುಗಳು.

ಋಗ್ವೇದಕ್ಕೆ ಶಾಕಲಸಂಹಿತೆಯೇ ಮುಖ್ಯವಾಗಿರುವದು. ಋಗ್ವೇದ ಸಂಹಿತೆಯಲ್ಲಿ ಹತ್ತು ಮಂಡಲಗಳಿವೆ. ಪ್ರತಿಯೊಂದು ಮಂಡಲವೂ ಅನುವಾಕ ಮತ್ತು ಸೂಕ್ತಗಳೆಂದು ಮತ್ತೆ ವಿಭಾಗಿಸಲ್ಪಟ್ಟಿರುವದು. ಋಗ್ವೇದವನ್ನು ಈ ಮಂಡಲಗಳಲ್ಲಿ ವಿಭಾಗಿಸುವ ಕ್ರಮವು ಅತಿಪ್ರಾಚೀನವಾದುದಾದರೂ, ಎಲ್ಲ ಮಂಡಲಗಳು ಸಮವಾಗಿ ವಿಭಾಗಿಸಲ್ಪಟ್ಟಿಲ್ಲವಾದ್ದರಿಂದ ಈ ಸಂಹಿತೆಯನ್ನು ಎಂಟು ಅಷ್ಟಕಗಳಲ್ಲಿಯೂ, ಪ್ರತಿಯೊಂದು ಅಷ್ಟಕವನ್ನು ಎಂಟು ಅಧ್ಯಾಯ ಗಳಲ್ಲಿಯೂ, ಪ್ರತಿಯೊಂದು ಅಧ್ಯಾಯವನ್ನು ವರ್ಗಗಳಲ್ಲಿಯೂ, ಮಂತ್ರ ಗಳಲ್ಲಿಯೂ ವಿಭಾಗಿಸಿರುವರು. ಈ ಋಗ್ವೇದಸಂಹಿತೆಯಲ್ಲಿರುವ ಒಟ್ಟೂ ಮಂತ್ರಗಳ ಸಂಖ್ಯೆ ೧೦೫೫೨.

ಋಗ್ವೇದಕ್ಕೆ ಸಂಬಂಧಪಟ್ಟ ಐತರೇಯ ಮತ್ತು ಕೌಶೀತಕೀ ಬ್ರಾಹ್ಮಣಗಳಲ್ಲಿ "ಐತರೇಯ" ಬ್ರಾಹ್ಮಣವೇ ಮುಖ್ಯವಾದದ್ದು ಮತ್ತು ಪ್ರಾಚೀನವಾದದ್ದು.

ಋಗ್ವೇದಕ್ಕೆ ಐತರೇಯಾರಣ್ಯಕವೂ, ಐತರೇಯೋಪನಿಷತ್ತೂ ಮತ್ತು ಕೌಶೀತಕೀ ಆರಣ್ಯಕವೂ, ಕೌಶೀತಕೀ ಉಪನಿಷತ್ತೂ ಮುಖ್ಯವಾದವುಗಳು.

ವೇದಗಳನ್ನು ಸರಿಯಾಗಿ ತಿಳಿದುಕೊಳ್ಳಲು ಮತ್ತು ಪಠನಮಾಡಲು ಅನುಕೂಲವಾಗುವಂತೆ ಉಪಯುಕ್ತವಾದ ವಿಷಯಗಳನ್ನು ವಿವರಿಸುವ ಗ್ರಂಥ ಗಳೇ ವೇದಾಂಗಗಳು—ಈ ವಿಧವಾದ ಗ್ರಂಥಗಳು ಆರು:—೧. ಶಿಕ್ಷಾ, ೨. ವ್ಯಾಕರಣ, ೩. ಛಂದಸ್ಸು, ೪. ನಿರುಕ್ತ, ೫. ಜ್ಯೋತಿಷ ಮತ್ತು ೬. ಕಲ್ಪ.

ವೇದಮಂತ್ರಗಳನ್ನು ಸ್ವರಸಹಿತವಾಗಿಯೂ, ಸ್ಪಷ್ಟವಾಗಿಯೂ ಉಚ್ಚಾರಣೆ ಮಾಡುವ ವಿಧಾನವನ್ನು ಬೋಧಿಸುವ ಶಾಸ್ತ್ರಕ್ಕೆ "ಶಿಕ್ಷಾ" ಎಂದು ಹೇಳುವರು. ಶೌನಕಮಹರ್ಷಿಯು ಋಗ್ವೇದದ ಶಾಕಲಸಂಹಿತೆಯ "ಪ್ರಾತಿಶಾಖ್ಯ"ವೆಂಬ ಶಿಕ್ಷಾಗ್ರಂಥವನ್ನು ರಚಿಸಿರುವನು.

ವೇದಕ್ಕೆ ಸಂಬಂಧಪಟ್ಟ ವ್ಯಾಕರಣಶಾಸ್ತ್ರವು ಈಗ ಲುಪ್ತವಾಗಿರುವ ದಾದರೂ, ವೈಯಾಕರಣಿಗಳಲ್ಲಿ ಪ್ರಮುಖನಾದ ಪಾಣಿನಿಯು ರಚಿಸಿದ "ಅಷ್ಟಾಧ್ಯಾಯಿ"ಯೆಂಬ ವ್ಯಾಕರಣದಲ್ಲಿರುವ ವೈದಿಕಪ್ರಕ್ರಿಯೆಯೆಂಬ ಭಾಗವು ವೇದ ಗಳಲ್ಲಿಯ ಶಬ್ದನಿಷ್ಪತ್ತಿಗೆ ಸಂಬಂಧಪಟ್ಟಿರುವದು.

ವೇದಮಂತ್ರಗಳ ವೃತ್ತಗಳನ್ನು ವಿವರಿಸುವ ಶಾಸ್ತ್ರಕ್ಕೆ "ಛಂದಶ್ಶಾಸ್ತ್ರ"ವೆಂದು ಹೇಳುವರು. ಪಿಂಗಲ ಋಷಿಯಿಂದ ರಚಿತವಾದ ಶಾಸ್ತ್ರವೇ ಈಗ ಬಳಕೆಯಲ್ಲಿದೆ.

"ನಿರುಕ್ತ" ಮತ್ತು "ನಿಘಂಟು"ವೆಂಬ ಎರಡು ಭಾಗಗಳುಳ್ಳ ನಿರುಕ್ತ ಶಾಸ್ತ್ರವು ಯಾಸ್ಕಋಷಿಯಿಂದ ರಚಿತವಾಗಿದೆ. ಇದು ವೇದದ ಅರ್ಥನಿರ್ಣಯಕ್ಕಾಗಿಯೇ ಹುಟ್ಟಿರುವ ಶಾಸ್ತ್ರವು.

ಜ್ಯೋತಿಷದ ಉದ್ದೇಶವು ಕಾಲ ಮತ್ತು ಮುಹೂರ್ತಗಳನ್ನು ಚಂದ್ರನ ಗತಿಯ ಸಹಾಯದಿಂದ ನಿಶ್ಚಯಿಸುವದು. "ಜ್ಯೋತಿಷವೇದಾಂಗ"ವೆಂಬ ಗ್ರಂಥದಲ್ಲಿ ಇವುಗಳ ರೂಪರೇಷೆಯು ಕೊಡಲ್ಪಟ್ಟಿರುವದು.

ವೇದಮಂತ್ರೋಚ್ಚಾರಣೆ ಮೊದಲಾದವುಗಳ ನಿಯಮಗಳು, ವಿಧಿನಿಷೇಧಗಳು ಮೊದಲಾದವುಗಳನ್ನು ಬೋಧಿಸುವ ಗ್ರಂಥಗಳಿಗೆ ಕಲ್ಪಸೂತ್ರಗಳೆಂದು ಹೇಳುವರು. ಇವುಗಳಲ್ಲಿ ಶ್ರೌತ್ರಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ ಮತ್ತು ಶುಲ್ವಸೂತ್ರಗಳೆಂಬ ನಾಲ್ಕು ವಿಭಾಗಗಳಿರುವವು.

## ೨. ವೇದಕಾಲ

ವೇದಕಾಲವನ್ನು ನಿರ್ಣಯಿಸುವದು ಸುಲಭವಲ್ಲ. ಆದರೂ ವೇದಕಾಲ ನಿರ್ಣಯವನ್ನು ಮಾಡುವದರಲ್ಲಿ ನಿಷ್ಣಾತರಾದ ಇಬ್ಬರು ಭಾರತಸುಪುತ್ರರ ಅಭಿಪ್ರಾಯವನ್ನು ಇಲ್ಲಿ ಕೊಡಲಾಗಿದೆ.

ಲೋಕಮಾನ್ಯ ಬಾಲ ಗಂಗಾಧರ ಟಿಲಕರು ವಿದೇಶಿಗಳ ಅಂಧಾನುಕರಣವನ್ನು ಮಾಡದೆ, ತಮ್ಮದೇ ಆದ ಸ್ವತಂತ್ರರೀತಿಯಲ್ಲಿ ತಮ್ಮ 'ಓರಾಯನ' (Orion) ಎಂಬ ಗ್ರಂಥದಲ್ಲಿ ವೇದಕಾಲಾನ್ವೇಷಣವನ್ನು ಮಾಡಿದರು. ಅವರ ಅಭಿಪ್ರಾಯದಲ್ಲಿ, ಋಗ್ವೇದದ ಐತರೇಯ-ಬ್ರಾಹ್ಮಣ ಗ್ರಂಥದಲ್ಲಿ ಹೇಳಲ್ಪಟ್ಟ ಕೃತಿಕಾ ನಕ್ಷತ್ರದಿಂದಲೇ ನಕ್ಷತ್ರಗಳ ಗಣನೆಯು ವೇದಕಾಲದಲ್ಲಿ ಪ್ರಾರಂಭವಾಗುತ್ತಿತ್ತು. ಆಗ್ಗೆ ಕೃತಿಕಾನಕ್ಷತ್ರದಲ್ಲಿಯೇ ದಿನರಾತ್ರಿಗಳು ಸರಿ (vernal equinox) ಯಾಗಿರುತ್ತಿದ್ದವು. ಈಗಿನ ಕಾಲದಲ್ಲಿ, ಅಶ್ವಿನೀ ನಕ್ಷತ್ರದಿಂದ ನಕ್ಷತ್ರಗಳ ಗಣನೆಯಾಗಿ, ಮಾರ್ಚ ೨೧ ರಲ್ಲಿಯೂ, ಸೆಪ್ಟಂಬರ ೨೩ ರಲ್ಲಿಯೂ ದಿನರಾತ್ರಿಗಳು ಸರಿಯಾಗಿರುತ್ತವೆ. ಖಗೋಲಶಾಸ್ತ್ರ ಮತ್ತು ಜ್ಯೋತಿಷದ ಸಿದ್ಧಾಂತಾನುಸಾರವಾಗಿ ಈ ಪರಿವರ್ತನವು ಇಂದಿನಿಂದ ೪೫೦೦ ವರ್ಷಗಳಿಗಿಂತ ಮುಂಚೆ ಸಂಭವಿಸಿತು. ಆದ್ದರಿಂದಲೇ ೪೫೦೦ ವರ್ಷಗಳಿಗಿಂತ ಮುಂಚಿನ ಕಾಲವೇ ವೇದಕಾಲವು. ಇದು ಟಿಲಕರ ಮತವು.

ಡಾ. ಅವಿನಾಶಚಂದ್ರ ದಾಸರು ಭೂಗರ್ಭವಿದ್ಯೆ(Geology)ಯ ಸಹಾಯದಿಂದ ವೇದಕಾಲ— ನಿರ್ಣಯವನ್ನು ಮಾಡಿರುವರು. ಋಗ್ವೇದದಲ್ಲಿ ಹೇಳಲ್ಪಟ್ಟ "ಸಪ್ತ-ಸಿಂಧು" ದೇಶದ ಉತ್ತರಕ್ಕೂ, ದಕ್ಷಿಣಕ್ಕೂ, ಪೂರ್ವಕ್ಕೂ, ಪಶ್ಚಿಮಕ್ಕೂ ಸಾಗರಗಳಿದ್ದವು. (ಈ "ಸಪ್ತಸಿಂಧು"ದೇಶದಲ್ಲಿ ಈಗಿನ ಕಾಶ್ಮೀರಕೊಳ್ಳ, ಉತ್ತರ ಪ್ರದೇಶ, ರಾಜಪುತಾನಾ ಪ್ರಾಂತ ಮತ್ತು ಪಂಜಾಬಗಳು ಬರುತ್ತವೆ.) ಆ ಕಾಲ

ದಲ್ಲಿ ಹಿಮಾಲಯ ಪರ್ವತವು ಕ್ರಮಕ್ರಮವಾಗಿ ಸಾಗರತಲದಿಂದ ಮೇಲಕ್ಕೆ ಬರ ತೊಡಗಿತ್ತು. ಪೃಥ್ವಿಯು ಕಂಪನಶೀಲವೂ, ಪರ್ವತಗಳು ಚಂಚಲವೂ ಆಗಿ ಅಸ್ಥಿರವಾಗಿದ್ದವು. ಭೂಗರ್ಭ — ವಿದ್ಯಾಶಾಸ್ತ್ರಿಗಳ ಮತದಲ್ಲಿ ಈ ಅಸ್ಥಿರಾವಸ್ಥೆಯು ಐವತ್ತು ಸಾವಿರ (೫೦,೦೦೦) ವರ್ಷಗಳಿಂದೀಚೆಗೆ, ಆದರೆ ಇಪ್ಪತ್ತೈದು ಸಾವಿರ (೨೫,೦೦೦) ವರ್ಷಗಳಿಗಿಂತ ಮುಂಚಿತವಾಗಿ ಆಗಿರಬೇಕು. ಪೃಥ್ವಿಯ ಈ ಅದ್ಭುತವಾದ ಅಸ್ಥಿರಾವಸ್ಥೆಯನ್ನು ನಮ್ಮ ಪೂರ್ವಜರಾದ ವೈದಿಕ ಋಷಿಗಳು ಸ್ವತಃ ತಮ್ಮ ಕಣ್ಣಿನಿಂದ ನೋಡಿದ್ದರು. ಇದರ ವಿವರಣೆಯನ್ನು ಋಗ್ವೇದದ ಕೆಲವು ಮಂತ್ರಗಳು ಸುಂದರವಾಗಿ ವರ್ಣಿಸುತ್ತವೆ.

ಮೇಲೇಳಿದಂತೆ "ಸಪ್ತಸಿಂಧು" ದೇಶದ ನಾಲ್ಕೂ ಬದಿಗೆ ಸಾಗರಗಳಿದ್ದವು. ವ್ಯಾಸ (ಈಗಿನ ಬಿಯಾಸ) ಮತ್ತು ಶತದ್ರು (ಈಗಿನ ಸತಲಜ) ನದಿಗಳು ರಾಜಪುತಾನಾದ ಸಮೀಪದಲ್ಲಿರುವ ದಕ್ಷಿಣಸಮುದ್ರದಲ್ಲಿ ಬಂದು ಸೇರುತ್ತಿದ್ದವು. ಆ ಸಮುದ್ರಕ್ಕೆ ಭೂಗರ್ಭವಿದ್ಯಾಶಾಸ್ತ್ರಿಗಳು "ರಾಜಪುತಾನಾ-ಸಮುದ್ರ"ವೆಂದು ಕರೆಯುತ್ತಾರೆ. ಈ ಸಮುದ್ರವೀಗ ಬತ್ತಿಹೋಗಿದೆ. ಆದರೂ ಅದರ ಅವಶೇಷಗಳಾಗಿ ಸಾಂಬರ ಮೊದಲಾದ ಉಪ್ಪುನೀರಿನ ಸರೋವರಗಳು ಇಂದಿಗೂ ರಾಜಪುತಾನಾದಲ್ಲಿವೆ. ಪಶ್ಚಿಮ ಸಮುದ್ರದಲ್ಲಿ ಸಿಂಧೂ ಮತ್ತು ವಿತಸ್ತಾ (ಜೆಹಲಮ್) ನದಿಗಳು ಈಗಿನಂತೆಯೇ ಬಂದು ಸೇರುತ್ತಿದ್ದವು. ಪೂರ್ವ ಸಮುದ್ರವು ಈಗಿನ ಪ್ರಯಾಗದಿಂದ ಹಿಡಿದು ಪೂರ್ವದಿಶೆಯಲ್ಲಿ ವಿಶಾಲವಾಗಿ ಹಬ್ಬಿತ್ತು. ಸರಸ್ವತೀ, ಗಂಗಾ ಮತ್ತು ಯಮುನಾ ನದಿಗಳು ಇಲ್ಲಿಯೇ ಸಮುದ್ರಕ್ಕೆ ಬಂದು ಕೂಡುತ್ತಿದ್ದವು.

ಆದರೆ "ಸಪ್ತಸಿಂಧು" ದೇಶದ ಉತ್ತರದಿಕ್ಕಿನಲ್ಲಿರುವ ಉತ್ತರ ಸಮುದ್ರ ವಾವುದೆಂಬುದೇ ನಮ್ಮ ಮುಂದಿರುವ ಪ್ರಶ್ನೆಯು.

ಬಲ್ಖ ಮತ್ತು ಇರಾನದ ಉತ್ತರದಲ್ಲಿ ವಿಶಾಲವಾದ ಸಾಗರವಿತ್ತೆಂದೂ, ಅದರ ಹೆಸರು "ಏಶಿಯಾಯಿ ಭೂಮಧ್ಯಸಾಗರ "(Asian Mediteranean) ವೆಂದೂ ಭೂಗರ್ಭಶಾಸ್ತ್ರಿಗಳು ಹೇಳುತ್ತಾರೆ. ಉತ್ತರದಲ್ಲಿ ಆರ್ಕ್ಟಿಕ ಮಹಾಸಾಗರವನ್ನು ಈ ಏಶಿಯಾಯಿ ಭೂಮಧ್ಯಸಾಗರವು ಸಂಬಂಧಿಸಿತ್ತು. ಇದರ ಬಳಿಯಲ್ಲಿಯೇ ನೈಋತ್ಯ ದಿಕ್ಕಿನಲ್ಲಿ ಈಗಿನ ಯುರೋಪದ ಭೂಮಧ್ಯಸಾಗರವಿದ್ದು, ಅವಕ್ಕೂ, ಇದಕ್ಕೂ ನಡುವೆ ಎತ್ತರವಾದ ಭೂಪ್ರದೇಶವಿತ್ತು. ಆದರೆ ಕಾಲಾಂತರದಿಂದ ಪೃಥ್ವಿಯ ಪರಿವರ್ತನಗಳ ಮೂಲಕ, ನಡುವಿನ ಭೂಪ್ರದೇಶದಲ್ಲಿ ಘಾಸ್ಪರಸ ಸಾಮುದ್ರಧುನಿಯಾಗಿ, ಉತ್ತರಪ್ರದೇಶದಲ್ಲಿರುವ ಏಶಿಯಾಯಿ ಮಧ್ಯಸಾಗರದ ನೀರೆಲ್ಲ ಯುರೋಪೀಯ ಭೂಮಧ್ಯಸಾಗರದಲ್ಲಿ ಬಂದಿಳಿದು, ಋಗ್ವೇದಕಾಲದ "ಸಂಪ್ತಸಿಂಧು" ದೇಶದ ಉತ್ತರಕ್ಕಿದ್ದ ಸಾಗರವು ನಷ್ಟವಾಯಿತು. ಆದರೂ ಕೆಲಕಡೆಗೆ ಆ ಸಾಗರದ ಅಂಶವು ಉಳಿದು ಅದೇ ಈಗಿನ ಕೃಷ್ಣ ಸಮುದ್ರ (Black sea) ವೂ, ಕಾಶ್ಯಪ ಸಮುದ್ರ (Caspean sea) ವೂ, ಅರಾಲ ಸಮುದ್ರ (Aral sea) ವೂ, ಬಲ್ಖಶ ಸರೋವರ (Lake Balkash) ವೂ ಆಗಿರುವದು. ಹೀಗೆ "ಸಪ್ತಸಿಂಧು" ದೇಶದ ನಾಲ್ಕು ಬದಿ

ಗಿರುವ ಈ ನಾಲ್ಕೂ ಸಾಗರಗಳಾಚೆಯಲ್ಲಿರುವ ದೇಶಗಳೊಂದಿಗೆ ವೈದಿಕ ಜನರು ಸಂಪರ್ಕ ಬೆಳೆಸಿ ವ್ಯಾಪಾರ ಮಾಡುತ್ತಿದ್ದರು. ಇದರ ಉಲ್ಲೇಖವನ್ನು ಋಗ್ವೇದದ ಕೆಲವು ಮಂತ್ರಗಳು ಮನೋವೇಧಕವಾಗಿ ಮಾಡುತ್ತವೆ. ಶ್ರೀ. ಎಚ್. ಜಿ. ವೆಲ್ಸ (H. G. Wells) ರ ಮತದಲ್ಲಿ, ಈ ನಾಲ್ಕೂ ಸಾಗರಗಳ ಅಸ್ತಿತ್ವವು ಸುಮಾರು ಐವತ್ತು ಸಾವಿರ ವರ್ಷಗಳ ಹಿಂದಿನದು. ಈ ಪ್ರಮಾಣದಿಂದ ವೇದಕಾಲವು ಐವತ್ತು ಸಾವಿರ ವರ್ಷಗಳಿಗಿಂತ ಹಿಂದಿನದಾಗುತ್ತದೆ.

ಆದರೆ, ವೇದಾಧ್ಯಯನದಲ್ಲಿಯೇ ತಮ್ಮ ಜೀವನವನ್ನೆಲ್ಲ ವ್ಯತಿಸಿದ ಜರ್ಮನಿಯ ವೆಬರರು ಹೇಳುವಂತೆ "ವೇದಕಾಲವನ್ನು ಸರಿಯಾಗಿ ನಿರ್ಣಯಿಸಲು ನಮ್ಮ ಹತ್ತರ ವೈಜ್ಞಾನಿಕವಾದ ಸಾಧನಗಳಿಲ್ಲದಿರುವದರಿಂದ, ಆ ಮಹೋನ್ನತವಾದ ವೇದಕಾಲವನ್ನು ನಿರ್ಣಯಿಸಲು ನಾವು ಅಸಮರ್ಥರಾಗಿರುವೆವು." ಇದನ್ನೇ ಮೆಕ್ಸಮುಲರರೂ ಸಮರ್ಥಿಸುತ್ತಾರೆ.

ನಮ್ಮ ಮತದಲ್ಲಿ, ನಿತ್ಯವಾದ ವೇದಕ್ಕೆ ಕಾಲವೆಂಬುದೇ ಇಲ್ಲ. ಅದು ಅನಾದಿಯೂ, ಅನಂತವೂ, ಚಿರಂತನವೂ ಆಗಿ ಕಾಲಾತೀತವಾಗಿರುವದು.

**(ಈ ಮುನ್ನುಡಿಯು ನಮ್ಮ "ಕನ್ನಡ ಋಗ್ವೇದ—ಭಾಗ ೨" ರಲ್ಲಿ ಮುಂದುವರೆಯುವುದು).**

ಹುಬ್ಬಳ್ಳಿ,
೧೫—೧೦—೧೯೫೬.

B. B. Pai

# ಅನುಕ್ರಮಣಿಕೆ

## ಮೊದಲನೆಯ ಅಧ್ಯಾಯವು

### ಸೂಕ್ತ: ೧

ದಿಂದ ಶಸ್ತ್ರಾಸ್ತ್ರಯುಕ್ತವಾದ ಸೇನೆಯನ್ನು ಜಯಿಸುವದು, ೭೫. ಸರ್ವ ಶ್ರೇಷ್ಠನಾದ ಇಂದ್ರನ ವಿಶಾಲವಾದ ಸೈನ್ಯವು . . . ೧೫

೭೬. ಜ್ಞಾನಾಕಾಂಕ್ಷೆಯಲ್ಲಿ ತತ್ಪರರಾಗಿರುವ ವಿಶೇಷಜ್ಞರು ಇಂದ್ರನನ್ನು ಸ್ತುತಿಸಿ ಸಿದ್ಧಿಯನ್ನು ಗಳಿಸುವದು, ೭೭. ಸಮುದ್ರದಂತೆ ವಿಶಾಲವಾದ ಇಂದ್ರನ ಉದರದೇಶವು, ೭೮. ಪಕ್ವವಾದ ಫಲದಿಂದ ಕೂಡಿದ ವೃಕ್ಷಶಾಖೆಗೆ ಸಮಾನವಾಗಿರುವ ಇಂದ್ರನ ವಾಕ್ಯವು, ೭೯. ಇಂದ್ರನ ಐಶ್ವರ್ಯವು, ೮೦. ಸೋಮಪಾನದ ಸಲುವಾಗಿ ಹಾಡಬೇಕಾದ ಮತ್ತು ಇಂದ್ರನಿಗೆ ಪ್ರಿಯವಾದ ಸಾಮವೇದೀಯ ಮತ್ತು ಋಗ್ವೇದೀಯ ಮಂತ್ರಗಳು . . ೧೬

## ಸೂಕ್ತ: ೯

೮೧. ಸೋಮರಸದಿಂದ ಮಹಾಬಲಶಾಲಿಯಾಗುವದು, ೮೨. ಉದ್ಯಮವನ್ನು ಯೋಗ್ಯರೀತಿಯಲ್ಲಿ ನೆರವೇರಿಸಲು ಉತ್ಸಾಹದಾಯಕವಾದ ಸೋಮರಸವು, ೮೩. ಸಕಲ ಚರಾಚರದ ಅಧೀಶ್ವರನು, ೮೪. ಇಚ್ಛಿತವರ್ಷಕನೂ, ಪಾಲನ ಕರ್ತೃವೂ, ೮೫. ವರೇಣ್ಯನೂ, ವಿಭುವೂ, ಪ್ರಭುವೂ . . ೧೭

೮೬. ಉದ್ಯೋಗದಲ್ಲಿ ತೊಡಗಿ ಯಶಸ್ವಿಗಳಾಗುವದು, ೮೭. ಅಖಂಡ-ಆಯುಷ್ಯವನ್ನು ಮರ್ಯಾದೆಯಿಂದ ನಡೆಸಲು ಯೋಗ್ಯವಾದ ಅಕ್ಷಯಧನವು, ೮೮. ಅನಂತ-ರಥ-ಪೂರ್ಣವಾದ ಅನ್ನವು, ೮೯. ಧನರಕ್ಷಕನೂ, ಋಚಾಪ್ರಿಯನೂ, ೯೦. ಸದಾಧಿವಾಸಿಯೂ, ಪ್ರೌಢನೂ ಆಗಿರುವ ಇಂದ್ರನ ಮಹಾಪರಾಕ್ರಮದ ಪ್ರಶಂಸೆಯು . . . . ೧೮

## ಸೂಕ್ತ: ೧೦

೯೧. ನರ್ತಕರು ಕುಣಿಯುವಾಗ ಕೊಳಲನ್ನು ಮೇಲೇರಿಸುವಂತೆ ಬ್ರಾಹ್ಮಣರು ಇಂದ್ರನನ್ನು ಉನ್ನತನನ್ನಾಗಿ ಮಾಡುವದು, ೯೨. ಸೋಮಲತೆಗಾಗಿ ಹಿಮಾಲಯದಲ್ಲಿ ಅಲೆಯುವದು, ೯೩. ಇಂದ್ರನು ತನ್ನ ಸ್ತುತಿಶ್ರವಣಕ್ಕಾಗಿ ಬರುವದು, ೯೪. ಜನತೆಗೆ ಆಶ್ರಯವನ್ನು ಕೊಡುವ ಇಂದ್ರನು . . ೧೯

೯೫. ಅನಂತಶತ್ರು-ನಿವಾರಕನಾದ ಇಂದ್ರನ ಉದ್ದೇಶ್ಯದಿಂದ ರಚಿಸಿರುವ ಋಗ್ವೇದದ ಗೀತಗಳು, ೯೬. ಗೆಳೆತನ, ಧನ ಮತ್ತು ಶಕ್ತಿಗಳನ್ನು ಸಂಪಾದಿಸುವದಕ್ಕಾಗಿ ಇಂದ್ರನ ಬಳಿಗೆ ಬರುವದು, ೯೭. ಇಂದ್ರನು ಗೋವುಗಳ ವಸತಿದ್ವಾರದ ಉದ್ಘಾಟನೆಯನ್ನು ಮಾಡುವದು, ೯೮. ಶತ್ರುವಧೆಯ ಸಮಯದಲ್ಲಿ ಅಗಾಧವಾಗಿ ಬೆಳೆಯುವ ಇಂದ್ರನ ಮಹಿಮೆಯು, ೯೯. ಎಲ್ಲ ಕಡೆ ಕಡೆಗಳಿಂದ ಆಲೈಸುತ್ತಿರುವ ಇಂದ್ರನ ಕಿವಿಗಳು . . . ೨೦

೧೦೦. ಇಷ್ಟಸಾಧಕನಾದ ಇಂದ್ರನನ್ನು ಅಶೇಷ-ಸುಖ-ಸಾಧಕವಾದ ರಕ್ಷಣೆಗಾಗಿ ಪ್ರಾರ್ಥಿಸುವದು, ೧೦೧. ಸೋಮರಸವನ್ನು ಕುಡಿದು ಕಾರ್ಯಕಾರಿಣೀ ಶಕ್ತಿಯನ್ನು ಬೆಳೆಸುವದು, ೧೦೨. ಇಂದ್ರನೇ! ಈ ಸ್ತುತಿಯು ನಿನಗೆ ಆನಂದದಾಯಕವಾಗಿ, ನಮಗೆ ಪ್ರೀತಿಕರವಾಗಲಿ . . . ೨೧

## ಸೂಕ್ತ: ೧೧

೧೦೩. ಅನ್ನಾದ್ಯಾಹಾರಗಳ ಪತಿಯು, ೧೦೪. ಯಾರಿಂದಲೂ ಭಯಪಡದಂತೆ ಶಕ್ತಿಶಾಲಿಯಾಗುವದು . . . . . ೨೧

೧೦೫. ಚಿರಪ್ರಸಿದ್ಧವಾದ ಧನದಾನದಿಂದ ಪ್ರಾಣಿಗಳ ರಕ್ಷಣೆಯು, ೧೦೬. ಅಸುರರ ನಗರಗಳನ್ನು ಧ್ವಂಸಮಾಡಿರುವ ಇಂದ್ರನು, ೧೦೭. ಗೋಹರಣ ಮಾಡಿದ

## ಸೂಕ್ತ: ೧೨



## ಸೂಕ್ತ: ೧೩



## ಸೂಕ್ತ: ೧೪



## ಸೂಕ್ತ: ೧೫

## ಸೂಕ್ತ: ೧೬



## ಸೂಕ್ತ: ೧೭



## ಸೂಕ್ತ: ೧೮



## ಸೂಕ್ತ: ೧೯

# ಎರಡನೆಯ ಅಧ್ಯಾಯವು

## ಸೂಕ್ತ: ೨೦



## ಸೂಕ್ತ: ೨೧



## ಸೂಕ್ತ: ೨೨

೨೬೫. ವರುಣದೇವನನ್ನು ಸ್ತುತಿಸುವದು, ೨೬೬. ವರುಣನ ಪುರಾತನಕಾಲದ ದಿವ್ಯವಾದ ಆಚರಣೆಯು, ೨೬೭. ವರುಣದೇವನನ್ನು ಪಾಪವಿಮೋಚನೆಗಾಗಿ ಪ್ರಾರ್ಥಿಸುವದು, ೨೬೮. ಮೂರು ತರದ ಪಾಶಗಳನ್ನು ಬಿಚ್ಚಿ, ವರುಣನು ಜನರನ್ನು ಪಾಪರಹಿತರನ್ನಾಗಿ ಮಾಡುವದು . . . ೫೬

ಸೂಕ್ತ: ೨೫

೨೬೯. ಸಂಸಾರದ ಮಾನವರು ವರುಣನ ವ್ರತಾನುಷ್ಠಾನದಲ್ಲಿ ಭ್ರಾಂತರಾಗುವದು, ೨೭೦. ಸಿಟ್ಟಾಗದಿರುವಂತೆ ವರುಣನನ್ನು ಪ್ರಾರ್ಥಿಸುವದು, ೨೭೧. ಸ್ವಸುಖದ ಸಲುವಾಗಿ ಸ್ತುತಿಯ ಸಹಾಯದಿಂದ ವರುಣನ ಮನಸ್ಸನ್ನು ಪ್ರಸನ್ನಗೊಳಿಸುವದು, ೨೭೨. ಕ್ರೋಧರಹಿತವಾದ ಚಿಂತೆಗಳು ಧನಪ್ರಾಪ್ತಿಯಾಗುವಲ್ಲಿ ಓಡುವದು, ೨೭೩. ಬಲಶಾಲಿಯಾದ ನೇತಾರನೂ, ಅಸಂಖ್ಯ ಜನತೆಗೆ ದ್ರಷ್ಟಾರನೂ ೫೭

೨೭೪. ಯಜ್ಞವನ್ನು ಮಾಡುವ ಹವ್ಯದಾತಾರರ ಮೇಲೆ ಪ್ರಸನ್ನರಾದ ಮಿತ್ರಾವರುಣರು, ೨೭೫. ಅಂತರಿಕ್ಷಮಾರ್ಗವೂ, ನೌಕಾಮಾರ್ಗವೂ, ೨೭೬. ಇನ್ನೂ ಉತ್ಪನ್ನವಾಗದ ಹದಿಮೂರನೇ ತಿಂಗಳು, ೨೭೭. ವಿಸ್ತೃತವಾದ ವಾಯುಪಥವೂ, ಆಕಾಶದಲ್ಲಿ ನಿವಾಸಮಾಡುವ ದೇವತೆಗಳೂ, ೨೭೮. ದೈವೀ ಸಂತಾನಗಳ ಮಧ್ಯದಲ್ಲಿ ಸಾಮ್ರಾಜ್ಯಸಂಸಿದ್ಧಿಗಾಗಿ ಬಂದಿರುವ ವರುಣನು . ೫೮

೨೭೯. ಇಂದು ಆಗುತ್ತಿರುವ ಮತ್ತು ಮುಂದೆ ಜರುಗುವ ಅದ್ಭುತವಾದ ಘಟನೆಗಳನ್ನು ತಿಳಿಯಾಗಿ ನೋಡುವದು, ೨೮೦. ಸುಪಥಗಾಮಿಗಳು, ೨೮೧. ಹಿರಣ್ಯಸ್ಪರ್ಶಿಗಳಾದ ಕಿರಣಗಳು ಮನಮೋಹಕವಾಗಿ ಹರಡುವ ಕಾರಣವು, ೨೮೨. ವರುಣನ ಮಹಿಮೆಯಿಂದ ಆಗುವ ಪರಿಣಾಮಗಳು, ೨೮೩. ಮಾನವರ ಉದರಪೂರ್ತಿಗಾಗಿ ವರುಣನು ಯಥೇಷ್ಟವಾಗಿ ಅನ್ನವನ್ನು ತಯಾರಿಸುವದು . . . . . . ೫೯

೨೮೪. ನಿವೃತ್ತಿರಹಿತವಾದ ವಿಚಾರಗಳು ವರುಣನ ಕಡೆಗೆ ಅಭಿಮುಖವಾಗುವದು, ೨೮೫. ವರುಣನಿಗೆ ಪ್ರಿಯಕರವಾದ ಹವ್ಯವನ್ನರ್ಪಿಸುವದು, ೨೮೬. ಸರ್ವದರ್ಶೀಯನಾದ ವರುಣನೂ, ಅವನ ರಥವೂ, ೨೮೭. ಆಹ್ವಾನವನ್ನು ಅವಧರಿಸುವದಕ್ಕಾಗಿ ವರುಣನನ್ನು ಕರೆಯುವದು, ೨೮೮. ಪ್ರಾರ್ಥನೆಯನ್ನು ಸ್ವೀಕರಿಸಲು ವರುಣನ ಹತ್ತರ ವಿನಂತಿಮಾಡಿಕೊಳ್ಳುವದು, ೨೮೯. ಜೀವಿತರಾಗಿ ಬಾಳುವಂತೆ ವರುಣನನ್ನು ಪ್ರಾರ್ಥಿಸಿಕೊಳ್ಳುವದು . . ೬೦

ಸೂಕ್ತ: ೨೬

೨೯೦. ಯಜ್ಞಪಾತ್ರನೂ, ಅನ್ನಭಾಜನನೂ ಆದ ಅಗ್ನಿದೇವನು, ೨೯೧. ತರುಣನೂ, ಶ್ರೇಷ್ಠನೂ, ತೇಜಸ್ವಿಯೂ ಆದ ಅಗ್ನಿಯನ್ನು ಸ್ವಾಗತಿಸುವದು, ೨೯೨. ತಂದೆ-ಮಕ್ಕಳ, ಬಂಧು-ಬಂಧುಗಳ ಮತ್ತು ಮಿತ್ರ-ಮಿತ್ರರ ಉಪಮೆಯು, ೨೯೩. ಶತ್ರುಂಜಯರಾದ ಮಿತ್ರ, ವರುಣ ಮತ್ತು ಅರ್ಯಮರು, ೨೯೪. ಪುರಾಣಹೋಮಸಂಪಾದಕನೇ! ಸ್ತುತಿ-ವಚನಗಳನ್ನು ಕೇಳಯ್ಯಾ . ೬೧

೨೯೫. ನಿತ್ಯವಾದ ಹವ್ಯವು ಅಗ್ನಿಗೆ ತಲಪುವದು, ೨೯೬. ಅಗ್ನಿಯಿಂದ ಸಂಯುಕ್ತರಾಗಿ ಅಗ್ನಿಗೆ ಪ್ರಿಯರಾಗುವದು, ೨೯೭. ಅಗ್ನಿಯಿಂದ ಸಂಯುಕ್ತರಾಗಿ ಪ್ರಾರ್ಥನೆಯನ್ನು ಪ್ರಾರಂಭಿಸುವದು, ೨೯೮. ಅಮರನಾಗಿರುವ ಅಗ್ನಿಯೂ, ಮರಣಶೀಲರಾದ ಮನುಷ್ಯರೂ, ೨೯೯. ಶಕ್ತಿಪುತ್ರನಾದ ಅಗ್ನಿಯು, ಎಲ್ಲ ಅಗ್ನಿಗಳೊಂದಿಗೆ ಯಜ್ಞಸ್ತೋತ್ರಗಳನ್ನು ಸ್ವೀಕರಿಸಿ, ಅನ್ನಪ್ರದಾನಮಾಡುವದು ೬೨

## ಸೂಕ್ತ: ೨೭

೩೦೦. ಅಗ್ನಿದೇವನಿಗೆ ವಂದನೆಯನ್ನರ್ಪಿಸಲು ಅಗ್ನಿಭಕ್ತರು ಪ್ರವೃತ್ತರಾಗುವದು, ೩೦೧. ಶಕ್ತಿಪುತ್ರನೂ, ಸ್ಥೂಲಗಮನನೂ ಆದ ಅಗ್ನಿಯು ಪ್ರಸನ್ನನಾಗಿ, ಇಚ್ಛಿತವಸ್ತುವನ್ನು ಕರುಣಿಸುವದು, ೩೦೨. ಸರ್ವತ್ರಗಾಮಿಯಾದ ಅಗ್ನಿಯು ಪಾಪಾಚಾರಿಗಳಿಂದ ತನ್ನ ಭಕ್ತರನ್ನು ಕಾಪಾಡುವದು, ೩೦೩. ಅಭಿನವ-ಗಾಯತ್ರೀ ಛಂದಸ್ಸಿನಲ್ಲಿ ವಿರಚಿತವಾದ ಸ್ತೋತ್ರದ ಸಂಗತಿಯನ್ನು ಅಗ್ನಿಯು ದೇವತೆಗಳಲ್ಲಿ ಪ್ರಸಿದ್ಧಗೊಳಿಸುವದು, ೩೦೪. ಪರಮ, ಮಧ್ಯಮ ಮತ್ತು ಅಂತಿಕಸ್ಥವೆಂಬ ಮೂರು ತರಹದ ಧನವು . . . ೬೩

೩೦೫. ಧನದ ವಿಭಾಗಕರ್ತನಾಗಿರುವ ಅಗ್ನಿಯು ಹವ್ಯದಾತಾರನಿಗೆ ಕರ್ಮ-ಫಲ ಪ್ರದಾನ ಮಾಡುವದು, ೩೦೬. ಮನುಷ್ಯನು ನಿತ್ಯವಾದ ಅನ್ನವನ್ನು ಸಂಪಾದಿಸುವ ರೀತಿಯು, ೩೦೭. ರಿಪು-ದಮನನಾದ ಅಗ್ನಿಯ ಹತ್ತಿರವಿರುವ ಪ್ರಸಿದ್ಧವಾದ ಶಕ್ತಿಯು, ೩೦೮. ಅಗ್ನಿಯು ತನ್ನ ಭಕ್ತರನ್ನು ಯುದ್ಧದಿಂದ ಪಾರುಮಾಡುವದು ಮತ್ತು ಮೇಧಾವಿಯಾದ ಋತ್ವಿಜರಿಗೆ ಕರ್ಮದ ಫಲದಾತಾರನಾಗುವದು, ೩೦೯. ಸ್ವಪ್ರಾರ್ಥನೆಯನ್ನು ಸ್ವೀಕರಿಸುವದಕ್ಕಾಗಿ ಅಗ್ನಿಯನ್ನು ಸ್ತುತಿಸುವದು . . . . ೬೪

೩೧೦. ವಿಶಾಲನೂ, ಅಸೀಮನೂ, ಹೊಗೆಯೆಂಬ ಪತಾಕೆಯುಳ್ಳವನೂ, ಅತಿಪ್ರಕಾಶ ಸಂಪನ್ನನೂ ಆದ ಅಗ್ನಿಯನ್ನು ಪ್ರಸನ್ನಗೊಳಿಸುವದು, ೩೧೧. ಅಗ್ನಿಯು ಧನವಂತರಂತೆ ಉದಾರನಾಗಿ ತನ್ನ ಭಕ್ತರ ಸ್ತುತಿಯನ್ನು ಕೇಳುವದು, ೩೧೨. ದೊಡ್ಡವರು, ಬಾಲಕರಾದವರು, ಯುವಕರಾಗಿರುವವರು ಮತ್ತು ವೃದ್ಧರೆಂಬ ನಾಲ್ಕು ತರಗತಿಯ ಎಲ್ಲ ದೇವತೆಗಳಿಗೆ ನಮಸ್ಕಾರಗಳು . ೬೫

## ಸೂಕ್ತ: ೨೮

೩೧೩. ಒರಳಿನಲ್ಲಿ ಸಿದ್ಧವಾದ ಸೋಮರಸವು . . . ೬೫

೩೧೪. ಸೋಮರಸವನ್ನು ಹಿಂಡುವದಕ್ಕಾಗಿ ಎರಡು ಹಲಿಗೆಗಳು, ಸ್ತ್ರೀಯರ ತೊಡೆಗಳಂತೆ, ವಿಸ್ತೃತವಾಗಿರುವದು, ೩೧೫. ಯಜ್ಞದಲ್ಲಿ ಯಜಮಾನನ ಪತ್ನಿಯು ಪ್ರವೇಶಿಸುವದೂ, ಅದರೊಳಗಿಂದ ಹೊರಗೆ ಬರುವದೂ, ೩೧೬. ಯಜ್ಞದಲ್ಲಿ ಕಡಿವಾಣದಂತಿರುವ ಚಿಕ್ಕ ಹಗ್ಗದಿಂದ ಮಂಥನದಂಡವು ಕಟ್ಟಲ್ಪಡುವದು, ೩೧೭. ವಿಜಯಿಗಳಾದ ಜನರು ಮಾಡುವ ದುಂದುಭಿಯಂತೆ ಒರಳು ಯಜ್ಞದಲ್ಲಿ ಸಪ್ಪಳಮಾಡುವದು, ೩೧೮. ಒರಳಿನ ರೂಪದಲ್ಲಿರುವ ಕಟ್ಟಿಗೆಯನ್ನು ಪ್ರಾರ್ಥಿಸುವದು . . . ೬೬

೩೧೯. ಒರಳು ಮತ್ತು ಒನಿಕೆಗಳು ತುಮುಲಧ್ವನಿಯಿಂದ ಯುಕ್ತವಾಗಿ ತಿರುಗಿ ತಿರುಗಿ ವಿಹಾರಮಾಡುವದು, ೩೨೦. ಸುಂದರವಾದ ಅಭಿಷವಮಂತ್ರಗಳ ಸಹಾಯದಿಂದ ಕಾಷ್ಠದ್ವಯಗಳು ಇಂದ್ರನಿಗಾಗಿ ಮಧುರವಾದ ಸೋಮರಸವನ್ನು ಸಿದ್ಧಗೊಳಿಸುವದು, ೩೨೧. ಋತ್ವಿಜನು ಸೋಮರಸವನ್ನು ಗೋಚರ್ಮದಿಂದ ನಿರ್ಮಿತವಾದ ಪಾತ್ರೆಯಲ್ಲಿ ತಂದಿಡುವದು . ೬೭

## ಸೂಕ್ತ: ೨೯

೩೨೨. ಸೋಮಪಾಯಿಯೂ, ಸತ್ಯವಾದಿಯೂ, ಬಹು ಧನಶಾಲಿಯೂ . ೬೭

೩೨೩. ಶಕ್ತಿಶಾಲಿಯೂ, ಸುಂದರವಾದ ಮೂಗುಳ್ಳವನೂ, ಧನರಕ್ಷಕನೂ,

೩೨೪. ಪರಸ್ಪರವಾಗಿ ನೋಡುತ್ತಿರುವ ಯಮದೂತಿಗಳಿಬ್ಬರನ್ನು ಪ್ರಜ್ಞೆತಪ್ಪಿದವರನ್ನಾಗಿ ಮಾಡುವದು, ೩೨೫. ಶತ್ರುಗಳು ನಿದ್ರಿತರಾಗಿರಲಿ, ಆದರೆ ನಾವು ಜಾಗ್ರತರಾಗಿರುವಾ, ೩೨೬. ಪಾಪರೂಪವಾದ ವಚನಗಳಿಂದ ಇಂದ್ರನನ್ನು ನಿಂದಿಸುವ ಗರ್ದಭ-ರೂಪಿಯಾದ ಶತ್ರುವನ್ನು ವಧಿಸುವದು . ೬೮

೩೨೭. ವಿರುದ್ಧವಾದ ಗಾಳಿಯು ವನದಿಂದ ದೂರಹೋಗುವದು, ೩೨೮. ಹೊಟ್ಟೆ ಕಿಚ್ಚು ಮಾಡುವವರನ್ನು ವಧಿಸುವಂತೆ ಇಂದ್ರನನ್ನು ಪ್ರಾರ್ಥಿಸುವದು . ೬೯

## ಸೂಕ್ತ: ೩೦

೩೨೯. ಇಂದ್ರನನ್ನು ಸೋಮರಸದಿಂದ ಚಿಮುಕಿಸುವದು, ೩೩೦. "ಆಶಿರ್" ನಾಮಧೇಯುವುಳ್ಳ ಸಹಸ್ರ-ಕ್ಷಪಣ-ದ್ರವ್ಯಗಳು . . . ೬೯

೩೩೧. ಇಂದ್ರನ ಉದರಪ್ರದೇಶವು, ೩೩೨. ಪಾರಿವಾಳವು ಗರ್ಭಿಣಿಯಾದ ತನ್ನ ಹೆಣ್ಣು ಪಾರಿವಾಳವನ್ನು ಹಿಡಿದು ಉಪಚರಿಸುವ ಉಪಮೆಯು, ೩೩೩. ಇಂದ್ರನಿಗಾಗಿ ರಚಿಸಿದ ಸ್ತೋತ್ರವು ಇಂದ್ರನ ಪ್ರತಿಭಾಪ್ರಿಯವಾಗಿ ಸದಾ ಸತ್ಯವಾಗುವಂತೆ ಇಂದ್ರನನ್ನು ಪ್ರಾರ್ಥಿಸುವದು, ೩೩೪. ಯುದ್ಧದ ಹೊರತು ಇತರ ಕೆಲಸಗಳ ವಿಷಯದಲ್ಲಿ ಇಂದ್ರನೂ, ಇಂದ್ರನ ಭಕ್ತನೂ ಕೂಡಿ ವಿಚಾರಮಾಡುವದು, ೩೩೫. ತರತರದ ಉದ್ಯಮಗಳನ್ನು ಪ್ರಾರಂಭಿಸುವಾಗ ಇಂದ್ರನನ್ನು, ಸಖನನ್ನು ಕರೆಯುವಂತೆ, ಕರೆಯುವದು . . ೭೦

೩೩೬. ಇಂದ್ರನ ಪ್ರಶಂಸೆಯು, ೩೩೭. ಇಂದ್ರನನ್ನು ಪುರಾತನ-ನಿವಾಸವಾದ ಸ್ವರ್ಗದಿಂದ ಆಹ್ವಾನಿಸುವದು, ೩೩೮. ಗೆಳೆಯನೂ, ನಿವಾಸಕ್ಕೆ ಕಾರಣನೂ ಆದ ಇಂದ್ರನು, ೩೩೯. ಉದ್ದವಾದ ಮೂತಿಗಳುಳ್ಳ ದನಕರುಗಳನ್ನು ವೃದ್ಧಿಗೊಳಿಸಲು ಇಂದ್ರನನ್ನು ಪ್ರಾರ್ಥಿಸುವದು, ೩೪೦. ಇಂದ್ರಭಕ್ತರು ಕಲ್ಯಾಣದ ಸಲುವಾಗಿ ಇಂದ್ರನ ಅಭಿಲಾಷೆಯನ್ನು ಮಾಡುವಂತೆ ಇಂದ್ರನ ಆಚರಣೆಯು ೭೧

೩೪೧. ಇಂದ್ರನು ಪ್ರಸನ್ನನಾದರೆ ಗೋವುಗಳು ವಿಪುಲವಾದ ಹಾಲುಳ್ಳವುಗಳಾಗಿ, ಅವುಗಳಿಂದ ಪ್ರಚುರವಾದ ಖಾದ್ಯಗಳನ್ನು ಸಂಪಾದಿಸುವದು, ೩೪೨. ಸಾಹಸಿಯಾದ ಇಂದ್ರನು ಪ್ರಸನ್ನನಾದರೆ, ಅಭೀಷ್ಟವಾದ ಧನವನ್ನು ತಂದುಕೊಡುವದು, ೩೪೩. ಗಾಡಿಯು ಗತಿಯು ಅಚ್ಚುಗಳನ್ನು ತಿರುಗಿಸುವಂತೆ, ಇಂದ್ರನು ತನ್ನ ಸ್ತೋತಾರರಿಗೆ ಅವರ ಕಾಮನೆಗಳಿಗನುಸಾರವಾಗಿ ಧನವನ್ನು ಅರ್ಪಿಸುವದು, ೩೪೪. ಇಂದ್ರನು ಸ್ವರ್ಣರಥವನ್ನು ದಾನಮಾಡುವದು . ೭೨

೩೪೫. ಮನೆಯಲ್ಲಿ ಆಕಳುಗಳೂ, ಧನವೂ ಬರುವಂತೆ ಅಶ್ವಿನೀಕುಮಾರದ್ವಯರನ್ನು ಪ್ರಾರ್ಥಿಸುವದು, ೩೪೬. ಸಮುದ್ರದ ಮೇಲೆಯೂ, ಅಂತರಿಕ್ಷದಲ್ಲಿಯೂ ನಡೆಯುವ ಅಶ್ವಿನೀಕುಮಾರರ ರಥವು, ೩೪೭. ಆಕಾಶದ ನಾಲ್ಕೂ ಬದಿಗೆ ತಿರುಗುತ್ತಿರುವ ಅಶ್ವಿನೀಕುಮಾರರ ರಥದ ಚಕ್ರವು, ೩೪೮. ಸ್ತುತಿಪ್ರಿಯಳೂ, ಅಮರಳೂ ಆದ ಉಷಾದೇವಿಯು, ೩೪೯. ಉಷಾ ಮಹಿಮೆಯು, ೩೫೦. ಸ್ವರ್ಗಪುತ್ರಿಯು . . . ೭೩

## ಸೂಕ್ತ: ೩೧

೩೫೧. ಅಗ್ನಿಯು ಉದ್ಯಮದ ಮೂಲಕ ಮಾರುತರು ಜನ್ಮಗ್ರಹಣ ಮಾಡುವದು, ೩೫೨. ಎರಡು ಕಾಷ್ಠಗಳಿಂದ ಹುಟ್ಟಿರುವ ಸಮಸ್ತ ಸಂಸಾರದ ವಿಭುವು . ೭೪

೩೫೩. ವಾಯುವಿನ ಅಗ್ರಗಾಮಿಯಾದ ಅಗ್ನಿಯು ಶಕ್ತಿಮಹಿಮೆಯು, ೩೫೪. ಅಗ್ನಿಯು ಮನುವಿಗೆ ಸ್ವರ್ಗಲೋಕದ ಕಥೆಯನ್ನು ಹೇಳಿದ್ದೂ, ಪುರೂರವಸನನ್ನು ಅನುಗ್ರಹಿಸಿದ್ದೂ, ೩೫೫. ವಷಟ್ಕಾರದಿಂದ ಯುಕ್ತವಾದ ಆಹುತಿಯು ೭೫

## ಸೂಕ್ತ: ೩೨

# ಮೂರನೆಯ ಅಧ್ಯಾಯವು

## ಸೂಕ್ತ: ೩೩



## ಸೂಕ್ತ: ೩೪



## ಸೂಕ್ತ: ೩೫

## ಸೂಕ್ತ: ೩೮



## ಸೂಕ್ತ: ೩೯



## ಸೂಕ್ತ: ೪೦



## ಸೂಕ್ತ: ೪೧

## ಸೂಕ್ತ: ೪೫



## ಸೂಕ್ತ: ೪೬

# ನಾಲ್ಕನೆಯ ಅಧ್ಯಾಯವು

## ಸೂಕ್ತ: ೪೭



## ಸೂಕ್ತ: ೪೮



## ಸೂಕ್ತ: ೪೯



## ಸೂಕ್ತ: ೫೦

## ಸೂಕ್ತ: ೫೮



## ಸೂಕ್ತ: ೫೯



## ಸೂಕ್ತ: ೬೦



## ಸೂಕ್ತ ೬೧:



---

*

# ಕನ್ನಡ ಋಗ್ವೇದ

## ಪ್ರಥಮ ಮಂಡಲ

(ಪ್ರಥಮ ಅಷ್ಟಕ)

## ಒಂದನೇ ಅನುವಾಕ

## ಮೊದಲನೆಯ ಅಧ್ಯಾಯವು

### ಸೂಕ್ತ: ೧

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ವಿಶ್ವಾಮಿತ್ರನ ಪುತ್ರನಾದ ಮಧುಚ್ಛಂದಸನು; ಛಂದಸ್ಸು: ಗಾಯತ್ರೀ.

[ವರ್ಗ: ೧]

೧. ॥ ಓಂ ॥ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ।
ಹೋತಾರಂ ರತ್ನಧಾತಮಂ ॥ ೧ ॥

ಯಜ್ಞದ ಪುರೋಹಿತನಾದ, ತೇಜೋಮಯ ದೇವತೆಗಳನ್ನು ಆಹ್ವಾನಿಸುವ ಋತ್ವಿಜನಾದ ಮತ್ತು ರತ್ನಧಾರಿಯಾದ ಅಗ್ನಿಯನ್ನು ನಾನು ಸ್ತುತಿಸುತ್ತೇನೆ. ॥ ೧ ॥

೨. ಅಗ್ನಿಃ ಪೂರ್ವೇಭಿರ್ಋಷಿಭಿ—ರೀಡ್ಯೋ ನೂತನೈರುತ ।
ಸ ದೇವಾँ ಏಹ ವಕ್ಷತಿ ॥ ೨ ॥

ಪುರಾಣ ಋಷಿಗಳು ಯಾವಾತನ ಸ್ತುತಿಯನ್ನು ಮಾಡಿದ್ದರೋ, ಈಗಿನ ಋಷಿಗಳು ಯಾವಾತನನ್ನು ಸ್ತುತಿಸುವರೋ, ಅಂಥ ಅಗ್ನಿಯು ದೇವತೆಗಳನ್ನು ಈ ಯಜ್ಞದಲ್ಲಿ ಆಹ್ವಾನಿಸಲಿ. ॥ ೨ ॥

೩. ಅಗ್ನಿನಾ ರಯಿಮಶ್ನವತ್ ಪೋಷಮೇವ ದಿವೇದಿವೇ ।
ಯಶಸಂ ವೀರವತ್ತಮಂ ॥ ೩ ॥

ಅಗ್ನಿಯ ಅನುಗ್ರಹದಿಂದ ಯಜಮಾನನಿಗೆ ಧನವು ಸಿಗುತ್ತದೆ. ಆ ಧನವು ಪ್ರತಿದಿನವೂ ವೃದ್ಧಿಂಗತವಾಗಿ ಕೀರ್ತಿಯನ್ನು ತರುತ್ತದೆ. ಆ ಧನದಿಂದಲೇ ವೀರ ಪುರುಷರು ದೊರಕುತ್ತಾರೆ. ॥ ೩ ॥

೪. ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ ।
ಸ ಇದ್ ದೇವೇಷು ಗಚ್ಛತಿ ॥ ೪ ॥

ಅಗ್ನಿದೇವನೇ! ಯಾವ ಯಜ್ಞವನ್ನು ನೀನು ನಾಲ್ಕೂದಿಕ್ಕುಗಳಿಂದ ಆವರಿಸಿರುವೆಯೋ, ಅದರಲ್ಲಿ ರಾಕ್ಷಸಾದಿಗಳಿಂದ ಹಿಂಸಾಚಾರದ ಸಂಭವವಿಲ್ಲ ಮತ್ತು ಅದೇ ಯಜ್ಞವು ದೇವತೆಗಳ ಸಾಮೀಪ್ಯವನ್ನು ದೊರಕಿಸಿಕೊಡುತ್ತದೆ. ॥ ೪ ॥

೫. ಅಗ್ನಿಹೋತಾ ಕವಿಕ್ರತುಃ ಸತ್ಯಶ್ಚಿತ್ರಶ್ರವಸ್ತಮಃ ।
ದೇವೋ ದೇವೇಭಿರಾ ಗಮತ್ ॥ ೫ ॥

ಅಗ್ನಿಯೇ! ನೀನು ಹೋತಾರನೂ, ವಿಶೇಷ ಬುದ್ಧಿಸಂಪನ್ನನೂ, ಸತ್ಯಪರಾಯಣನೂ, ಅತಿಶಯ ಕೀರ್ತಿಶಾಲಿಯೂ, ದೇದೀಪ್ಯಮಾನನೂ ಆಗಿರುವೆ; ದೇವತೆಗಳೊಂದಿಗೆ ಈ ಯಜ್ಞದಲ್ಲಿ ಬಾರಯ್ಯಾ. ॥ ೫ ॥

## [ವರ್ಗಃ ೨]

೬. ಯದಂಗ ದಾಶುಷೇ ತ್ವ—ಮಗ್ನೇ ಭದ್ರಂ ಕರಿಷ್ಯಸಿ ।
ತವೇತ್ ತತ್ ಸತ್ಯಮಂಗಿರಃ ॥ ೬ ॥

ಅಗ್ನಿದೇವನೇ! ನಿನಗೆ ಹವಿಸ್ಸನ್ನು ಅರ್ಪಿಸುವ ಯಜಮಾನನ ಕಲ್ಯಾಣ ಸಾಧನೆಯನ್ನು ಮಾಡುತ್ತೀ. ಆ ಯಜಮಾನನ ಕಲ್ಯಾಣವನ್ನು ನೋಡಿ, ಅಂಗಿರಸನೇ! ನೀನು ಪ್ರೀತನಾಗು. ॥ ೬ ॥

೭. ಉಪ ತ್ವಾಗ್ನೇ ದಿವೇದಿವೇ ದೋಷಾವಸ್ತರ್ಧಿಯಾ ವಯಂ ।
ನಮೋ ಭರಂತ ಏಮಸಿ ॥ ೭ ॥

ಅಗ್ನಿಯೇ, ನಾವು ಅನುದಿನವೂ, ಹಗಲೂ ಇರುಳೂ, ಮನಸ್ಪೂರ್ವಕವಾಗಿ ನಿನಗೆ ನಮಸ್ಕರಿಸುತ್ತ, ನಿನ್ನ ಬಳಿಗೆ ಸಾರುತ್ತೇವೆ. ॥ ೭ ॥

೮. ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ ।
ವರ್ಧಮಾನಂ ಸ್ವೇ ದಮೇ ॥ ೮ ॥

ಅಗ್ನಿಯೇ! ನೀನು ಪ್ರಕಾಶಮಾನನೂ, ಯಜ್ಞರಕ್ಷಕನೂ, ಕರ್ಮಫಲದ ದ್ಯೋತಕನೂ, ಯಜ್ಞಶಾಲೆಯಲ್ಲಿ ವರ್ಧನಶಾಲಿಯೂ ಆಗಿರುವೆ. ॥ ೮ ॥

೯. ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ ।
ಸಚಸ್ವಾ ನಃ ಸ್ವಸ್ತಯೇ ॥ ೯ ॥

ಮಗನಿಗೆ ತಂದೆಯು ಅನಾಯಾಸವಾಗಿ ದೊರಕುವಂತೆ, ನೀನು ನಮಗೆ ಅನಾಯಾಸವಾಗಿ ಸಿಗುತ್ತಿರು; ನಮ್ಮ ಕಲ್ಯಾಣಕ್ಕಾಗಿ ನಮ್ಮ ಹತ್ತಿರವೇ ವಾಸ ಮಾಡಯ್ಯಾ. ॥ ೯ ॥

## ಸೂಕ್ತ: ೨

ಈ ಸೂಕ್ತದ ದೇವತೆ: ವಾಯು ಇತ್ಯಾದಿಗಳು; ಋಷಿ: ಮಧುಚ್ಛಂದಸನು; ಛಂದಸ್ಸು: ಗಾಯತ್ರೀ.

### [ವರ್ಗ: ೩]

೧೦. ವಾಯವಾ ಯಾಹಿ ದರ್ಶತೇ—ಮೇ ಸೋಮಾ ಅರಂಕೃತಾಃ ।
ತೇಷಾಂ ಪಾಹಿ ಶ್ರುಧೀ ಹವಂ ॥ ೧ ॥

ಪ್ರಿಯದರ್ಶನ ವಾಯುವೇ! ಬಾ. ಸೋಮರಸವು ಸಿದ್ಧವಾಗಿದೆ. ಇದನ್ನು ಕುಡಿ. ಸೋಮರಸಪಾನಕ್ಕಾಗಿ ನಾವು ಮಾಡುವ ಆಹ್ವಾನವನ್ನು ಕೇಳು. ॥ ೧ ॥

೧೧. ವಾಯ ಉಕ್ಥೇಭಿರ್ಜರಂತೇ ತ್ವಾಮಚ್ಛಾ ಜರಿತಾರಃ ।
ಸುತಸೋಮಾ ಅಹರ್ವಿದಃ ॥ ೨ ॥

ವಾಯುದೇವನೇ! ಯಜ್ಞವಿದರಾದ ಸ್ತೋತಾರರು ಅಭಿಷವಾದಿಸಂಸ್ಕಾರದಿಂದ ಪರಿಶೋಧಿತವಾದ ಸೋಮರಸದೊಡನೆ ನಿನ್ನನ್ನು ಕುರಿತು ಸ್ತುತಿವಚನಗಳನ್ನು ಹೇಳಿ ಹೊಗಳುತ್ತಾರೆ. ॥ ೨ ॥

೧೨. ವಾಯೋ ತವ ಪ್ರಪೃಂಚತೀ ಧೇನಾ ಜಿಗಾತಿ ದಾಶುಷೇ ।
ಉರೂಚೀ ಸೋಮಪೀತಯೇ ॥ ೩ ॥

ವಾಯುವೇ! ನಿನ್ನ ಸೋಮಗುಣ-ಪ್ರಕಾಶಕ ವಾಕ್ಯವು ಸೋಮರಸಪಾನಕ್ಕಾಗಿ ಹವ್ಯಗಳನ್ನೀಯುವ ಯಜಮಾನ ಮತ್ತು ಅವನ ಸಂಗಡಿಗರ ಹತ್ತಿರ ಹೋಗುತ್ತದೆ. ॥ ೩ ॥

೧೩. ಇಂದ್ರವಾಯೂ ಇಮೇ ಸುತಾ ಉಪ ಪ್ರಯೋಭಿರಾ ಗತಂ ।
ಇಂದವೋ ವಾಮುಶಂತಿ ಹಿ ॥ ೪ ॥

ಇಂದ್ರ ಮತ್ತು ವಾಯುಗಳೇ! ನೀವಿಬ್ಬರೂ ಅನ್ನವನ್ನು ತಕ್ಕೊಂಡು ಬನ್ನಿರಿ; ಸೋಮರಸವು ಸಿದ್ಧವಾಗಿ ನಿಮ್ಮಿಬ್ಬರ ದಾರಿ ಕಾಯುತ್ತಿದೆ. ॥ ೪ ॥

೧೪.　ವಾಯವಿಂದ್ರಶ್ಚ ಚೇತಥಃ ಸುತಾನಾಂ ವಾಜಿನೀವಸೂ ।
ತಾವಾ ಯಾತಮುಪ ದ್ರವತ್　　　　|| ೫ ||

ವಾಯು ಮತ್ತು ಇಂದ್ರರೇ! ಸೋಮರಸವು ಸಿದ್ಧವಾಗಿದೆಯೆಂಬುದು ನಿಮಗೆ ಗೊತ್ತಿರಲಿ. ಅನ್ನವನ್ನೊಡಗೂಡಿದ ಹವ್ಯದಲ್ಲಿರುವ ನೀವು ಶೀಘ್ರವಾಗಿ ಯಜ್ಞಕ್ಷೇತ್ರದಲ್ಲಿ ಬನ್ನಿರಿ.　　　　|| ೫ ||

## [ವರ್ಗಃ ೪]

೧೫.　ವಾಯವಿಂದ್ರಶ್ಚ ಸುನ್ವತ ಆ ಯಾತಮುಪ ನಿಷ್ಕೃತಂ ।
ಮಕ್ಷ್ವಿತ್ಥಾ ಧಿಯಾ ನರಾ　　　　|| ೬ ||

ವಾಯು ಮತ್ತು ಇಂದ್ರರೇ! ಸೋಮರಸದಾತಾ-ಯಜಮಾನರ ಸು-ಸಂಸ್ಕೃತವಾದ ಸೋಮರಸದ ಸಮೀಪಕ್ಕೆ ಬನ್ನಿರಿ. ದೇವ-ದ್ವಯರೇ! ನಿಮ್ಮ ಆಗಮನದಿಂದ ಈ ಕೆಲಸವು ಶೀಘ್ರಸಂಪನ್ನವಾಗುವದು.　　　　|| ೬ ||

೧೬.　ಮಿತ್ರಂ ಹುವೇ ಪೂತದಕ್ಷಂ ವರುಣಂ ಚ ರಿಶಾದಸಂ ।
ಧಿಯಂ ಘೃತಾಚೀಂ ಸಾಧಂತಾ　　　　|| ೭ ||

ನಾನು ಪವಿತ್ರ-ಬಲನಾದ ಮಿತ್ರನನ್ನೂ, ಹಿಂಸಕ-ರಿಪು-ವಿನಾಶಕನಾದ ವರುಣನನ್ನೂ ಯಜ್ಞದಲ್ಲಿ ಆಹ್ವಾನಿಸುತ್ತೇನೆ. ಇವರಿಬ್ಬರೂ ಘೃತಾಹುತಿ-ದಾನ-ಸ್ವರೂಪವಾದ ಕರ್ಮಗಳನ್ನು ಮಾಡುತ್ತಾರೆ.　　　　|| ೭ ||

೧೭.　ಋತೇನ ಮಿತ್ರಾವರುಣಾ—ವೃತಾವೃಧಾವೃತಸ್ಪೃಶಾ ।
ಕ್ರತುಂ ಬೃಹಂತಮಾಶಾಥೇ　　　　|| ೮ ||

ಯಜ್ಞವರ್ಧಕ ಮತ್ತು ಯಜ್ಞಸ್ಪರ್ಶಿ ಮಿತ್ರನೇ! ಮತ್ತು ವರುಣನೇ! ನೀವು ಯಜ್ಞಫಲವನ್ನು ಕೊಡುವುದಕ್ಕಾಗಿಯೇ ಈ ವಿಶಾಲ ಯಜ್ಞವನ್ನು ವ್ಯಾಪ್ತ ಮಾಡಿರುವಿರಿ.　　　　|| ೮ ||

೧೮.　ಕವೀ ನೋ ಮಿತ್ರಾವರುಣಾ ತುವಿಜಾತಾ ಉರುಕ್ಷಯಾ ।
ದಕ್ಷಂ ದಧಾತೇ ಅಪಸಂ　　　　|| ೯ ||

ಮಿತ್ರ ಮತ್ತು ವರುಣ ಇವರಿಬ್ಬರೂ ಬುದ್ಧಿಸಂಪನ್ನರೂ, ಜನಹಿತಕಾರಿಗಳೂ, ವಿವಿಧ-ಲೋಕಾಶ್ರಯರೂ ಆಗಿರುವರು. ಇವರು ನಮ್ಮ ಬಲ ಮತ್ತು ಕರ್ಮಗಳನ್ನು ರಕ್ಷಿಸಲಿ.　　　　|| ೯ ||

## ಸೂಕ್ತ: ೩

ಈ ಸೂಕ್ತದ ದೇವತೆ: ಅಶ್ವಿದ್ವಯರು; ಋಷಿ: ಮಧುಚ್ಛಂದಸನು;
ಛಂದಸ್ಸು: ಗಾಯತ್ರೀ.

### [ವರ್ಗ: ೫]

೧೯. ಅಶ್ವಿನಾ ಯಜ್ವರೀರಿಷೋ ದ್ರವತ್ಪಾಣೀ ಶುಭಸ್ಪತೀ ।
ಪುರುಭುಜಾ ಚನಸ್ಯತಂ ॥ ೧ ॥

ಕ್ಷಿಪ್ರಬಾಹು, ಸುಕರ್ಮಪಾಲಕ, ಮತ್ತು ವಿಸ್ತೀರ್ಣ-ಭುಜ-ಸಂಯುಕ್ತ ಅಶ್ವಿದ್ವಯರೇ! ನೀವು ಯಜ್ಞೀಯ ಅನ್ನವನ್ನು ಸ್ವೀಕರಿಸಿರಿ. ॥ ೧ ॥

೨೦. ಅಶ್ವಿನಾ ಪುರುದಂಸಸಾ ನರಾ ಶವೀರಯಾ ಧಿಯಾ ।
ಧಿಷ್ಣ್ಯಾ ವನತಂ ಗಿರಃ ॥ ೨ ॥

ನೇತಾರರಾಗಿ ವಿವಿಧ ಕೆಲಸಗಳನ್ನು ಮಾಡಿಸುವ ಪರಾಕ್ರಮಶಾಲಿಗಳಾದ ಅಶ್ವಿದ್ವಯರೇ! ಆದರಯುಕ್ತ-ಬುದ್ಧಿಯಿಂದ ಮಾಡಿದ ಸ್ತುತಿಯನ್ನು ಕೇಳಿರಿ. ॥ ೨ ॥

೨೧. ದಸ್ರಾ ಯುವಾಕವಃ ಸುತಾ ನಾಸತ್ಯಾ ವೃಕ್ತಬರ್ಹಿಷಃ ।
ಆ ಯಾತಂ ರುದ್ರವರ್ತನೀ ॥ ೩ ॥

ಶತ್ರುನಾಶಕರಾದ, ಸತ್ಯಭಾಷಿಗಳಾದ ಮತ್ತು ಶತ್ರುದಮನಕಾರಿಗಳಾದ ಅಶ್ವಿದ್ವಯರೇ! ಸೋಮರಸವು ಛಿನ್ನ-ಕುಶಗಳ ಮೇಲೆ ಸಿದ್ಧವಾಗಿ ಇಡಲ್ಪಟ್ಟಿದೆ; ನೀವು ಬನ್ನಿರಿ. ॥ ೩ ॥

೨೨. ಇಂದ್ರಾ ಯಾಹಿ ಚಿತ್ರಭಾನೋ ಸುತಾ ಇಮೇ ತ್ವಾಯವಃ ।
ಅಣ್ವೀಭಿಸ್ತನಾ ಪೂತಾಸಃ ॥ ೪ ॥

ಪರಮ-ದೀಪ್ತಿಶಾಲಿಯಾದ ಇಂದ್ರನೇ! ಬೆರಳುಗಳಿಂದ ಕರಗಿಸಿ ನಿತ್ಯ ಶುದ್ಧವಾಗಿಡಲ್ಪಟ್ಟ ಈ ಸೋಮರಸವು ನಿನ್ನನ್ನೇ ವಾಂಛಿಸುತ್ತಿದೆ; ನೀನು ಬಾರಯ್ಯಾ. ॥ ೪ ॥

೨೩. ಇಂದ್ರಾ ಯಾಹಿ ಧಿಯೇಷಿತೋ ವಿಪ್ರಜೂತಃ ಸುತಾವತಃ ।
ಉಪ ಬ್ರಹ್ಮಾಣಿ ವಾಘತಃ ॥ ೫ ॥

ಇಂದ್ರನೇ! ಬ್ರಾಹ್ಮಣರಿಂದ ಆಹ್ವಾನಿಸಲ್ಪಟ್ಟು ಮತ್ತು ನಮ್ಮ ವಿಶುದ್ಧವಾದ ಭಕ್ತಿಯಿಂದ ಆಕರ್ಷಿತನಾಗಿ, "ವಾಘತ್" ಎಂಬ ಹೆಸರಿನ ಪುರೋಹಿತನು ಸೋಮರಸವನ್ನು ಕುಡಿದು ಮಾಡುವ ಪ್ರಾರ್ಥನೆಯನ್ನು ಸ್ವೀಕರಿಸಲು ಬಾ. ॥ ೫ ॥

೨೪. ಇಂದ್ರಾ ಯಾಹಿ ತೂತುಜಾನ ಉಪ ಬ್ರಹ್ಮಾಣಿ ಹರಿವಃ

ಸುತೇ ದಧಿಷ್ವ ನಶ್ಚನಃ ॥ ೬ ॥

ಅಶ್ವಶಾಲಿಯಾದ ಇಂದ್ರನೇ! ನಮ್ಮ ಪ್ರಾರ್ಥನೆಗೆ ಓಗೊಡಲು ಶೀಘ್ರವಾಗಿ ಬಾರಯ್ಯಾ. ಸೋಮರಸವಿದ್ದ ಯಜ್ಞದಲ್ಲಿ ನಾವು ಪ್ರೀತಿಪೂರ್ವಕವಾಗಿ ಬಡಿಸಿದ ಅನ್ನವನ್ನು ಸ್ವೀಕರಿಸು. ॥ ೬ ॥

## [ವರ್ಗಃ ೬]

೨೫. ಓಮಾಸಶ್ಚರ್ಷಣೀಧೃತೋ ವಿಶ್ವೇದೇವಾಸ ಆ ಗತ ।

ದಾಶ್ವಾಂಸೋ ದಾಶುಷಃ ಸುತಂ ॥ ೭ ॥

ವಿಶ್ವೇದೇವತೆಗಳೇ! ರಕ್ಷಕರಾಗಿದ್ದು ನೀವು ಜನರನ್ನು ಕಾಪಾಡುವಿರಿ. ಹವ್ಯಗಳನ್ನು ಕೊಡುವ ಯಜಮಾನರು ಹಂಚುವ ಸೋಮರಸಕ್ಕಾಗಿ ಬನ್ನಿರಿ. ॥ ೭ ॥

೨೬. ವಿಶ್ವೇ ದೇವಾಸೋ ಅಪ್ತುರಃ ಸುತಮಾ ಗಂತ ತೂರ್ಣಯಃ ।

ಉಸ್ರಾ ಇವ ಸ್ವಸರಾಣಿ ॥ ೮ ॥

ಪ್ರಭಾತಸಮಯದಲ್ಲಿ ಸೂರ್ಯನ ಕಿರಣಗಳು ಮನಮೋಹಕವಾಗಿ ಬರುವಂತೆ, ವೃಷ್ಟಿದಾತರಾದ ವಿಶ್ವೇದೇವತೆಗಳು ಸಿದ್ಧವಾದ ಸೋಮರಸಕ್ಕಾಗಿ ಶೀಘ್ರ ಆಗಮನ ಮಾಡಲಿ. ॥ ೮ ॥

೨೭. ವಿಶ್ವೇ ದೇವಾಸೋ ಅಸ್ರಿಧ ಏಹಿಮಾಯಾಸೋ ಅದ್ರುಹಃ ।

ಮೇಧಂ ಜುಷಂತ ವಹ್ನಯಃ ॥ ೯ ॥

ಅಕ್ಷಯರಾಗಿದ್ದವರೂ, ಪ್ರತ್ಯುತ್ಪನ್ನ-ಮತಿಯುಳ್ಳವರೂ, ನಿರ್ವೈರರೂ, ಧನವಾಹಕರೂ ಆದ ವಿಶ್ವೇದೇವತೆಗಳು ಈ ಯಜ್ಞದಲ್ಲಿ ಬಿಜಯಂಗೈಯಲಿ. ॥ ೯ ॥

೨೮. ಪಾವಕಾ ನಃ ಸರಸ್ವತೀ ವಾಜೇಭಿರ್ವಾಜಿನೀವತೀ ।

ಯಜ್ಞಂ ವಷ್ಟು ಧಿಯಾವಸುಃ ॥ ೧೦ ॥

ಪತಿತಪಾವನೆಯಾದ ಮತ್ತು ಅನ್ನ-ಧನಗಳ ದಾತ್ರಿಯಾದ ಸರಸ್ವತೀದೇವಿಯು ಧನದಿಂದ ನಮ್ಮ ಯಜ್ಞವನ್ನು ಆಶೀರ್ವದಿಸಲಿ. ॥ ೧೦ ॥

೨೯. ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ ।

ಯಜ್ಞಂ ದಧೇ ಸರಸ್ವತೀ ॥ ೧೧ ॥

ಸತ್ಯಕ್ಕಾಗಿ ಪ್ರೇರಿಸುವವಳೂ, ಸುಬುದ್ಧಿ-ಪುರುಷರಿಗೆ ಯೋಗ್ಯ-ಶಿಕ್ಷಣವನ್ನು ಕೊಡಿಸುವವಳೂ ಆಗಿರುವ ಸರಸ್ವತೀದೇವಿಯು ನಮ್ಮ ಯಜ್ಞವನ್ನು ಅನುಗ್ರಹಿಸಲಿ. ॥ ೧೧ ॥

೩೦. ಮಹೋ ಅರ್ಣಃ ಸರಸ್ವತೀ ಪ್ರ ಚೇತಯತಿ ಕೇತುನಾ ।
ಧಿಯೋ ವಿಶ್ವಾ ವಿ ರಾಜತಿ ॥ ೧೨ ॥

ಪ್ರವಾಹಶಾಲಿಯಾಗಿ ಸರಸ್ವತೀದೇವಿಯು ಜಲರಾಶಿಯನ್ನು ಪ್ರವರ್ಧಿಸಿ, ನಮ್ಮ ಸಮಸ್ತ ಜ್ಞಾನರಾಶಿಗಳನ್ನು ಜಾಗರಿಸಲಿ. ॥ ೧೨ ॥

---

# ಎರಡನೇ ಅನುವಾಕ

## ಸೂಕ್ತ: ೪

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮಧುಚ್ಛಂದಸನು; ಛಂದಸ್ಸು: ಗಾಯತ್ರೀ.

### [ವರ್ಗ: ೭]

೩೧. ಸುರೂಪಕೃತ್ನುಮೂತಯೇ ಸುದುಘಾಮಿವ ಗೋದುಹೇ ।
ಜುಹೂಮಸಿ ದ್ಯವಿದ್ಯವಿ ॥ ೧ ॥

ಯಾವ ರೀತಿಯಲ್ಲಿ ಗವಳಿಗನು ಹಾಲನ್ನು ಹಿಂಡುವದಕ್ಕಾಗಿ ಆಕಳನ್ನು ಕರೆಯುತ್ತಾನೋ, ಅದೇ ಪ್ರಕಾರ ನಾವಾದರೂ ನಮ್ಮ ರಕ್ಷಣೆಗಾಗಿ ಸತ್ಕರ್ಮಶೀಲನಾದ ಇಂದ್ರನನ್ನು ಪ್ರತಿದಿನವೂ ಆಹ್ವಾನಿಸುತ್ತೇವೆ. ॥ ೧ ॥

೩೨. ಉಪ ನಃ ಸವನಾ ಗಹಿ ಸೋಮಸ್ಯ ಸೋಮಪಾಃ ಪಿಬ ।
ಗೋದಾ ಇದ್ ರೇವತೋ ಮದಃ ॥ ೨ ॥

ಸೋಮಪಾನಪ್ರಿಯನಾದ ಇಂದ್ರನೇ! ಸೋಮರಸವನ್ನು ಕುಡಿಯುವದಕ್ಕಾಗಿ ನಮ್ಮ ತ್ರಿಷವಣಗಳ ಸಮೀಪಕ್ಕೆ ಬಾರಯ್ಯಾ. ನೀನು ಧನಶಾಲಿಯಾಗಿರುವೆಯಾದ್ದರಿಂದ ಪ್ರಸನ್ನನಾದರೆ ದನಗಳನ್ನು ಕೊಡುತ್ತೀ. ॥ ೨ ॥

೩೩. ಅಥಾ ತೇ ಅಂತಮಾನಾಂ ವಿದ್ಯಾಮ ಸುಮತೀನಾಂ ।
ಮಾ ನೋ ಅತಿಖ್ಯ ಆ ಗಹಿ ॥ ೩ ॥

ನಿನ್ನ ಸಮೀಪದಲ್ಲಿರುವ ಬುದ್ಧಿಶಾಲಿ-ಜನರ ನಡುವೆ ವಾಸಮಾಡಿ ನಾವು ನಿನ್ನನ್ನು ಅರಿಯಲು ಸಮರ್ಥರಾಗುವಂತೆ ಮಾಡಯ್ಯಾ. ನಮ್ಮ ಉಪೇಕ್ಷೆ ಮಾಡಿ ಬೇರೆಯವರಲ್ಲಿ ಪ್ರಕಾಶಿತನಾಗದಿರು; ನಮ್ಮೊಡನೆಯೇ ಬಾ. ॥ ೩ ॥

೩೪. ಪರೇಹಿ ವಿಗ್ರಮಸ್ತೃತ-ಮಿಂದ್ರಂ ಪೃಚ್ಛಾ ವಿಪಶ್ಚಿತಂ ।
ಯಸ್ತೇ ಸಖಿಭ್ಯ ಆ ವರಂ ॥ ೪ ॥

ಹಿಂಸಾ-ದ್ವೇಷ-ರಹಿತನಾಗಿದ್ದರಿಂದಲೇ ಪ್ರತಿಭಾಶಾಲಿಯಾದ ಇಂದ್ರನ ಹತ್ತರ ಹೋಗಿ, ಮೇಧಾವಿಯಾದ ನನ್ನ ಚರಿತ್ರೆಯನ್ನು ತಿಳಿಯಲು ಪ್ರಯತ್ನಿಸಿರಿ. ಆ ಇಂದ್ರನೇ ನಿಮ್ಮ ಬಂಧು-ಬಳಗದವರಿಗೆ ಉತ್ತಮವಾದ ಸಂಪತ್ತನ್ನು ಕೊಡುವನು. ॥ ೪ ॥

೩೫. ಉತ ಬ್ರುವಂತು ನೋ ನಿದೋ ನಿರನ್ಯತಶ್ಚಿದಾರತ ।
ದಧಾನಾ ಇಂದ್ರ ಇದ್ ದುವಃ ॥ ೫ ॥

ಯಾವಾಗಲೂ ಇಂದ್ರನ ಸೇವೆಯಲ್ಲಿಯೇ ನಿರತರಾಗಿರುವ ನಮ್ಮ ಸಂಬಂಧಿಕರಾದ ಪುರೋಹಿತರು ಇಂದ್ರನನ್ನು ಪೂಜಿಸಲಿ; ಇಂದ್ರನ ನಿಂದಕರು ಈ ದೇಶದಿಂದಲೂ, ಅನ್ಯ ದೇಶಗಳಿಂದಲೂ ದೂರ ತೊಲಗಲಿ. ॥ ೫ ॥

## [ವರ್ಗಃ ೮]

೩೬. ಉತ ನಃ ಸುಭಗಾँ ಅರಿ-ರ್ವೋಚೇಯುರ್ದಸ್ಮ ಕೃಷ್ಟಯಃ ।
ಸ್ಯಾಮೇದಿಂದ್ರಸ್ಯ ಶರ್ಮಣಿ ॥ ೬ ॥

ರಿಪು-ಮರ್ದನಶಾಲಿಯಾದ ಇಂದ್ರನೇ! ನಿನ್ನ ಕೃಪೆಯು ನಮ್ಮ ಮೇಲೆ ಇರುವದರಿಂದಲೇ ನಾವು ಸೌಭಾಗ್ಯಸಂಪನ್ನರಾಗಿದ್ದೇವೆಂದು ನಮ್ಮ ಶತ್ರು-ಮಿತ್ರರಿಬ್ಬರೂ ಹೇಳುತ್ತಾರೆ. ಇಂದ್ರನ ಪ್ರಸಾದದಿಂದ ಪ್ರಾಪ್ತವಾದ ಸುಖದಲ್ಲಿ ನಾವು ನಲಿದಾಡುವಾ. ॥ ೬ ॥

೩೭. ಏಮಾಶುಮಾಶವೇ ಭರ ಯಜ್ಞಶ್ರಿಯಂ ನೃಮಾದನಂ ।
ಪತಯನ್ ಮಂದಯತ್ಸಖಂ ॥ ೭ ॥

ಈ ಸೋಮರಸವು ಶೀಘ್ರಮಾದಕವೂ, ಯಜ್ಞದ ಸಂಪತ್‌ಸ್ವರೂಪವೂ ಆಗಿರುವದು. ಜನರನ್ನು ಪ್ರಫುಲ್ಲರನ್ನಾಗಿ ಮಾಡಿ, ಅವರ ಕಾರ್ಯಸಾಧನಗಳನ್ನು ಸಿದ್ಧಗೊಳಿಸಿ, ಅವರನ್ನು ಸಂತೋಷಿಸುವ ಇಂದ್ರನಿಗೆ ಆ ಸೋಮರಸವು ಅತ್ಯಂತ ಪ್ರಿಯವಾಗಿರುವದರಿಂದ ಇದನ್ನು ಯಜ್ಞವ್ಯಾಪಿಯಾದ ಇಂದ್ರನಿಗೇ ಅರ್ಪಿಸಿರಿ. ॥ ೭ ॥

೩೮. ಅಸ್ಯ ಪೀತ್ವಾ ಶತಕ್ರತೋ ಘನೋ ವೃತ್ರಾಣಾಮಭವಃ ।
ಪ್ರಾವೋ ವಾಜೇಷು ವಾಜಿನಂ ॥ ೮ ॥

ನೂರು ಯಜ್ಞಗಳನ್ನು ಮಾಡಿದ ಇಂದ್ರನೇ! ಇದೇ ಸೋಮರಸಪಾನ ಮಾಡಿ ನೀನು ವೃತ್ರಾಸುರನೇ ಮೊದಲಾದ ಶತ್ರುಗಳನ್ನು ಸಂಹರಿಸಿ ರಣಾಂಗಣದಲ್ಲಿ ನಿನ್ನ ಸೈನಿಕರನ್ನು ಕಾಪಾಡಿದೆ. ॥ ೮ ॥

೩೯. ತಂ ತ್ವಾ ವಾಜೇಷು ವಾಜಿನಂ ವಾಜಯಾಮಃ ಶತಕ್ರತೋ ।
ಧನಾನಾಮಿಂದ್ರ ಸಾತಯೇ ॥ ೯ ॥

ಶತಕ್ರತುವಾದ ಇಂದ್ರನೇ! ಘನಘೋರವಾದ ಸಂಗ್ರಾಮದಲ್ಲಿ ನೀನು ಯುದ್ಧಮಾಡುವೆಯಾದ್ದರಿಂದ ಧನಪ್ರಾಪ್ತಿಗಾಗಿ ನಾವು ನಿನಗೆ ಹವಿಸ್ಸನ್ನು ಅರ್ಪಿಸುತ್ತೇವೆ. ॥ ೯ ॥

೪೦. ಯೋ ರಾಯೋ೩ವನಿರ್ಮಹಾಂತ್ ಸುಪಾರಃ ಸುನ್ವತಃ ಸಖಾ ।
ತಸ್ಮಾ ಇಂದ್ರಾಯ ಗಾಯತ ॥ ೧೦ ॥

ಧನರಕ್ಷಕನೂ, ಮಹಾಪುರುಷನೂ, ಸತ್ಕರ್ಮಪಾಲಕನೂ, ಭಕ್ತವತ್ಸಲನೂ ಆಗಿರುವ ಇಂದ್ರನನ್ನು ಲಕ್ಷಿಸಿ ಹಾಡಿರಿ. ॥ ೧೦ ॥

## ಸೂಕ್ತ: ೫

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮಧುಚ್ಛಂದಸನು; ಛಂದಸ್ಸು: ಗಾಯತ್ರೀ.

### [ವರ್ಗ: ೯]

೪೧. ಆ ತ್ವೇತಾ ನಿ ಷೀದತೇ-ಂದ್ರಮಭಿ ಪ್ರ ಗಾಯತ ।
ಸಖಾಯಃ ಸ್ತೋಮವಾಹಸಃ ॥ ೧ ॥

ಸ್ತುತಿಕಾರಕರಾದ ಗೆಳೆಯರೇ! ಶೀಘ್ರ ಬನ್ನಿರಿ, ಕುಳಿತುಕೊಳ್ಳಿರಿ ಮತ್ತು ಇಂದ್ರನನ್ನು ಕುರಿತು ಹಾಡಿರಿ. ॥ ೧ ॥

೪೨. ಪುರೂತಮಂ ಪುರೂಣಾ—ಮೀಶಾನಂ ವಾರ್ಯಾಣಾಂ ।
ಇಂದ್ರಂ ಸೋಮೇ ಸಚಾ ಸುತೇ ॥ ೨ ॥

ಸೋಮರಸವು ಸಿದ್ಧವಾದ ಮೇಲೆ ಎಲ್ಲರೂ ಒತ್ತಟ್ಟಿಗೆ ಬಂದು, ಬಹು ಶತ್ರು-ವಿಧ್ವಂಸಕನಾದ ಮತ್ತು ಶ್ರೇಷ್ಠ-ಸಂಪತ್ತಿನ ಸ್ವಾಮಿಯಾದ ಇಂದ್ರನನ್ನು ಅನುಲಕ್ಷಿಸಿ ಹಾಡಿರಿ. ॥ ೨ ॥

೪೩. ಸ ಘಾ ನೋ ಯೋಗ ಆ ಭುವತ್ ಸ ರಾಯೇ ಸ ಪುರಂಧ್ಯಾಂ ।
ಗಮದ್ವಾಜೇಭಿರಾ ಸ ನಃ ॥ ೩ ॥

ಅನಂತಗುಣಸಂಪನ್ನನಾದ ಆ ಇಂದ್ರನೇ ನಮ್ಮ ಬಯಕೆಗಳನ್ನು ನೆರವೇರಿಸಲಿ, ನಮಗೆ ಸಂಪತ್ತನ್ನು ಕೊಡಲಿ, ಬಹುವಿಧವಾದ ಬುದ್ಧಿಯನ್ನು ಅನುಗ್ರಹಿಸಲಿ ಮತ್ತು ಅನ್ನಸಹಿತನಾಗಿ ನಮ್ಮಲ್ಲಿಗೆ ಆಗಮಿಸಲಿ. ॥ ೩ ॥

೪೪. ಯಸ್ಯ ಸಂಸ್ಥೇ ನ ವೃಣ್ವತೇ ಹರೀ ಸಮತ್ಸು ಶತ್ರವಃ ।
ತಸ್ಮಾ ಇಂದ್ರಾಯ ಗಾಯತ ॥ ೪ ॥

ಯುದ್ಧಕಾಲದಲ್ಲಿ ಯಾವ ದೇವತೆಯ ರಥಕ್ಕೆ ಹೂಡಿದ ಅಶ್ವಗಳ ಮುಂದೆ ಬರಲು ಶತ್ರುಗಳು ಹಿಂಜರಿಯುವರೋ, ಅಂಥ ಇಂದ್ರನನ್ನು ಅನುಲಕ್ಷಿಸಿ ಹಾಡಿರಿ. ॥ ೪ ॥

೪೫. ಸುತಪಾವ್ನೇ ಸುತಾ ಇಮೇ ಶುಚಯೋ ಯಂತಿ ವೀತಯೇ ।
ಸೋಮಾಸೋ ದಧ್ಯಾಶಿರಃ ॥ ೫ ॥

ಈ ಪವಿತ್ರವಾದ, ವಿಶುದ್ಧವಾದ ಮತ್ತು ಸ್ನೇಹಗುಣದಿಂದ ಕೂಡಿರುವ ಸೋಮರಸವು ಸೋಮರಸಪಾನ ಮಾಡುವವರ ಹತ್ತರ ತನ್ನಿಂದ ತಾನೇ ಬರುವುದು. ॥ ೫ ॥

## [ವರ್ಗಃ ೧೦]

೪೬. ತ್ವಂ ಸುತಸ್ಯ ಪೀತಯೇ ಸದ್ಯೋ ವೃದ್ಧೋ ಅಜಾಯಥಾಃ ।
ಇಂದ್ರ ಜ್ಯೈಷ್ಠ್ಯಾಯ ಸುಕ್ರತೋ ॥ ೬ ॥

ಶೋಭಿಸುವ ಕಾರ್ಯಗಳನ್ನೆಸಗುವ ಇಂದ್ರನೇ! ಯಾವಾಗಲೂ ಶ್ರೇಷ್ಠ ನಾಗಿರುವೆಯಾದ್ದರಿಂದ ಸೋಮಪಾನ ಮಾಡುವ ಕಾಲದಲ್ಲಿ ಎಲ್ಲರಕ್ಕಿಂತ ಮುಂದೆ ನೀನಿರುತ್ತೀ. ॥ ೬ ॥

೪೭. ಆ ತ್ವಾ ವಿಶಂತ್ವಾಶವಃ ಸೋಮಾಸ ಇಂದ್ರ ಗಿರ್ವಣಃ ।
ಶಂ ತೇ ಸಂತು ಪ್ರಚೇತಸೇ ॥ ೭ ॥

ಸ್ತುತಿಗೆ ಯೋಗ್ಯನಾದ ಇಂದ್ರನೇ! ಸವನತ್ರಯದಿಂದೊಡಗೂಡಿದ ಸೋಮ ರಸವು ನಿನಗೆ ಪ್ರಾಪ್ತವಾಗಲಿ ಮತ್ತು ಉಚ್ಚ-ಜ್ಞಾನ-ಸಂಪಾದನೆಯಲ್ಲಿ ನಿನಗೆ ಮಂಗಲಕಾರಿಯಾಗಿ ಪರಿಣಮಿಸಲಿ. ॥ ೭ ॥

೪೮. ತ್ವಾಂ ಸ್ತೋಮಾ ಅವೀವೃಧನ್ ತ್ವಾಮುಕ್ಥಾ ಶತಕ್ರತೋ ।
ತ್ವಾಂ ವರ್ಧಂತು ನೋ ಗಿರಃ ॥ ೮ ॥

ನೂರು ಯಜ್ಞಗಳನ್ನು ಮಾಡಿದ ಇಂದ್ರನೇ! ಸ್ತೋಮಮಂತ್ರ ಮತ್ತು ಋಗ್ಮಂತ್ರ ಇವೆರಡೂ ನಿನ್ನನ್ನು ಪ್ರತಿಷ್ಠಿತನನ್ನಾಗಿ ಮಾಡಿರುವವು. ನಾವು ಹಾಡುವ ಸ್ತುತಿಗಳಾದರೂ ನಿನ್ನನ್ನು ವರ್ಧಿಸಲಿ. ॥ ೮ ॥

೪೯. ಅಕ್ಷಿತೋತಿಃ ಸನೇದಿಮಂ ವಾಜಮಿಂದ್ರಃ ಸಹಸ್ರಿಣಂ ।
ಯಸ್ಮಿನ್ ವಿಶ್ವಾನಿ ಪೌಂಸ್ಯಾ ॥ ೯ ॥

ಜನತೆಯ ರಕ್ಷಣೆಗಾಗಿ ಸದಾ-ತತ್ಪರನಾಗಿರುವ ಇಂದ್ರನು ಸಹಸ್ರ-ವಿಧವಾದ ಈ ಅನ್ನವನ್ನು ಗ್ರಹಿಸಲಿ. ಈ ಸೋಮರಸಯುಕ್ತವಾದ ಅನ್ನದಲ್ಲಿ ಪೌರುಷವಿರುವುದು. ॥ ೯ ॥

೫೦. ಮಾ ನೋ ಮರ್ತಾ ಅಭಿ ದ್ರುಹನ್ ತನೂನಾಮಿಂದ್ರ ಗಿರ್ವಣಃ ।
ಈಶಾನೋ ಯವಯಾ ವಧಂ ॥ ೧೦ ॥

ಸ್ತವನೀಯನಾದ ಇಂದ್ರನೇ! ನೀನು ಬಲಶಾಲಿಯಾಗಿರುವೆಯಾದ್ದರಿಂದ ವಿರೋಧಿಗಳು ನಮ್ಮ ಶರೀರದ ಮೇಲೆ ಆಘಾತಮಾಡದಿರುವಂತೆ ನೋಡಿಕೊಂಡು ನಮ್ಮನ್ನು ಕಾಪಾಡಯ್ಯಾ. ॥ ೧೦ ॥

## ಸೂಕ್ತ: ೬

ಈ ಸೂಕ್ತದ ದೇವತೆ: ಇಂದ್ರನು ಮತ್ತು ಮರುದ್ಗಣವು; ಋಷಿ: ಮಧುಚ್ಛಂದಸನು;
ಛಂದಸ್ಸು: ಗಾಯತ್ರೀ.

### [ವರ್ಗಃ ೧೧]

೫೧. ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ ।
ರೋಚಂತೇ ರೋಚನಾ ದಿವಿ ॥ ೧ ॥

ಯಾವಾತನು ಪ್ರತಾಪಾನ್ವಿತವಾದ ಸೂರ್ಯರೂಪದಿಂದ, ಹಿಂಸಾಶೂನ್ಯವಾದ ಅಗ್ನಿರೂಪದಿಂದ ಮತ್ತು ವಿಹರಣಕರ್ತೃವಾದ ವಾಯುರೂಪದಿಂದ ಅವಸ್ಥಿತನಾಗಿರುವನೋ, ಅಂಥ ಇಂದ್ರನೊಡನೆ ಸರ್ವಲೋಕಗಳಲ್ಲಿ ವಾಸಮಾಡುವ ಜನರು ಸಂಬಂಧವನ್ನು ಸ್ಥಾಪಿಸುತ್ತಾರೆ. ॥ ೧ ॥

೫೨. ಯುಂಜಂತ್ಯಸ್ಯ ಕಾಮ್ಯಾ ಹರೀ ವಿಪಕ್ಷಸಾ ರಥೇ ।
ಶೋಣಾ ಧೃಷ್ಣೂ ನೃವಾಹಸಾ ॥ ೨ ॥

ಆ ಜನರು ಇಂದ್ರನ ರಥದಲ್ಲಿ ಸುಂದರವಾದ, ಕೆಂಪುಬಣ್ಣದ ಮತ್ತು ಪುರುಷವಾಹಕವಾದ 'ಹರಿ'ನಾಮಧೇಯವುಳ್ಳ ಕುದುರೆಗಳನ್ನು ಹೂಡುತ್ತಾರೆ. ॥ ೨ ॥

೫೩. ಕೇತುಂ ಕೃಣ್ವನ್ನಕೇತವೇ ಪೇಶೋ ಮರ್ಯಾ ಅಪೇಶಸೇ ।
ಸಮುಷದ್ಭಿರಜಾಯಥಾಃ ॥ ೩ ॥

ಮಾನವರೇ! ನೋಡಿರಿ—ಸೂರ್ಯಾತ್ಮನಾದ ಇಂದ್ರನು ನಿದ್ರಿತರಾದವರನ್ನು ಜಾಗ್ರತರನ್ನಾಗಿ ಮಾಡಿ, ರೂಪವಿಹೀನರಿಗೆ ರೂಪದಾನವನ್ನು ಕೊಟ್ಟು, ತನ್ನ ಪ್ರಚಂಡ ಕಿರಣಗಳಿಂದ ಮೇಲಕ್ಕೇರುತ್ತಿದ್ದಾನೆ. ॥ ೩ ॥

೫೪. ಆದಹ ಸ್ವಧಾಮನು ಪುನರ್ಗರ್ಭತ್ವಮೇರಿರೇ ।
ದಧಾನಾ ನಾಮ ಯಜ್ಞಿಯಂ ॥ ೪ ॥

ಅದರ ನಂತರ ಮರುದ್ಗಣವು ಯಜ್ಞೋಪಯೋಗಿಯಾದ ಹೆಸರನ್ನು ಧರಿಸಿ, ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಮೋಡಗಳ ನಡುವೆ ನೀರಿನ ಗರ್ಭಾಕೃತಿಯ ರಚನೆಯನ್ನು ಮಾಡಿತು. ॥ ೪ ॥

೫೫. ವೀಳು ಚಿದಾರುಜತ್ನುಭಿ—ರ್ಗುಹಾ ಚಿದಿಂದ್ರ ವಹ್ನಿಭಿಃ ।
ಅವಿಂದ ಉಸ್ರಿಯಾ ಅನು ॥ ೫ ॥

ಇಂದ್ರನೇ! ವಿಕಟಪ್ರದೇಶಗಳನ್ನು ಭೇದಿಸುವಂಥ ಪ್ರವಹಮಾನವಾದ ಮರುದ್ಗಣದೊಡನೆ ಕೂಡಿ ನೀನು ಗುಹೆಯಲ್ಲಿ ಅಡಗಿರುವ ದನಗಳನ್ನು ಹುಡುಕಿ, ಅವುಗಳನ್ನು ಉದ್ಧರಿಸಿದೆ. ॥ ೫ ॥

## [ವರ್ಗ: ೧೨]

೫೬. ದೇವಯಂತೋ ಯಥಾ ಮತಿ—ಮಚ್ಛಾ ವಿದದ್ವಸುಂ ಗಿರಃ ।
ಮಹಾಮನೂಷತ ಶ್ರುತಂ ॥ ೬ ॥

ಸ್ತುತಿಮಾಡುವವರು ದೇವಭಾವದ ಪ್ರಾಪ್ತಿಗಾಗಿ ಸಂಪತ್ಶಾಲಿಯೂ, ವಿಖ್ಯಾತವೂ, ಬಲಿಷ್ಠವೂ ಆದ ಮರುದ್ಗಣವನ್ನು ಅನುಲಕ್ಷಿಸಿ ಇಂದ್ರನನ್ನು ಸ್ತುತಿಸುವಂತೆ ಸ್ತುತಿಸುತ್ತಾರೆ. ॥ ೬ ॥

೫೭. ಇಂದ್ರೇಣ ಸಂ ಹಿ ದೃಕ್ಷಸೇ ಸಂಜಗ್ಮಾನೋ ಅಬಿಭ್ಯುಷಾ ।
ಮಂದೂ ಸಮಾನವರ್ಚಸಾ ॥ ೭ ॥

ಮರುದ್ಗಣವೇ! ನಿಮಗೂ ಇಂದ್ರನಿಗೂ ಸಂಕೋಚರಹಿತವಾದ ಅಭಿನ್ನತೆಯಿದೆ. ನೀವೆಲ್ಲರೂ ಸದಾ—ಪ್ರಸನ್ನರೂ, ಸಮಾನ—ಪ್ರಕಾಶರೂ ಆಗಿರುವಿರಿ. ॥ ೭ ॥

೫೮. ಅನವದ್ಯೈರಭಿದ್ಯುಭಿ—ರ್ಮಖಃ ಸಹಸ್ವದರ್ಚತಿ ।
ಗಣೈರಿಂದ್ರಸ್ಯ ಕಾಮ್ಯೈಃ ॥ ೮ ॥

ದೋಷರಹಿತವಾದ, ಸುರಲೋಕಾಭಿಗತವಾದ ಮತ್ತು ಕಾಮನೆಗಳ ವಿಷಯೀಭೂತವಾದ ಮರುದ್ಗಣದೊಡನೆ ಇದ್ದ ಇಂದ್ರನನ್ನು ಬಲಿಷ್ಠನೆಂದು ತಿಳಿದು ಈ ಯಜ್ಞವು ಪೂಜಿಸುತ್ತಿದೆ. ॥ ೮ ॥

೫೯. ಅತಃ ಪರಿಜ್ಮನ್ನಾ ಗಹಿ ದಿವೋ ವಾ ರೋಚನಾದಧಿ ।
ಸಮಸ್ಮಿನ್ನೃಂಜತೇ ಗಿರಃ ॥ ೯ ॥

ಎಲ್ಲ ದಿಶೆಗಳಲ್ಲಿ ಪಸರಿಸಿರುವ ಮರುದ್ಗಣವೇ! ಅಂತರಿಕ್ಷದಿಂದ, ಆಕಾಶದಿಂದ ಅಥವಾ ಜ್ವಲಂತವಾದ ಸೂರ್ಯಮಂಡಲದಿಂದ ಬನ್ನಿರಿ. ಈ ಯಜ್ಞದಲ್ಲಿ ಪುರೋಹಿತರು ನಿಮ್ಮನ್ನು ಯೋಗ್ಯರೀತಿಯಲ್ಲಿ ಸ್ತುತಿಸುತ್ತಾರೆ. ॥ ೯ ॥

೬೦. ಇತೋ ವಾ ಸಾತಿಮೀಮಹೇ ದಿವೋ ವಾ ಪಾರ್ಥಿವಾದಧಿ ।
ಇಂದ್ರಂ ಮಹೋ ವಾ ರಜಸಃ ॥ ೧೦ ॥

ಪೃಥಿವೀ, ಆಕಾಶ ಮತ್ತು ವಾಯುಮಂಡಲದಿಂದ ನಮಗೆ ಧನವೃಷ್ಟಿಯಾಗಲೆಂದು ನಾವು ಇಂದ್ರನ ಹತ್ತರ ಯಾಚಿಸುತ್ತೇವೆ. ॥ ೧೦ ॥

## ಸೂಕ್ತ: ೭

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮಧುಚ್ಛಂದಸನು; ಛಂದಸ್ಸು: ಗಾಯತ್ರೀ.

### [ವರ್ಗ: ೧೩]

೬೧. ಇಂದ್ರಮಿದ್ಗಾಥಿನೋ ಬೃಹ—ದಿಂದ್ರಮರ್ಕೇಭಿರರ್ಕಿಣಃ ।
ಇಂದ್ರಂ ವಾಣೀರನೂಷತ ॥ ೧ ॥

ಸಾಮವೇದಿಗಳು ಸಾಮಗಾನದಿಂದ, ಋಗ್ವೇದಿಗಳು ಋಗ್ಮಂತ್ರಗಳಿಂದ ಮತ್ತು ಯಜುರ್ವೇದಿಗಳು ಮಾತಿನಿಂದ ಇಂದ್ರನನ್ನು ಸ್ತುತಿಸಿರುವರು. ॥ ೧ ॥

೬೨. ಇಂದ್ರ ಇದ್ಧರ್ಯೋಃ ಸಚಾ ಸಂಮಿಶ್ಲ ಆ ವಚೋಯುಜಾ ।
ಇಂದ್ರೋ ವಜ್ರೀ ಹಿರಣ್ಯಯಃ ॥ ೨ ॥

ಇಂದ್ರನು ತನ್ನ ಎರಡೂ ಕುದುರೆಗಳನ್ನು ಕಣ್ಣು ಮುಚ್ಚುವದರೊಳಗೆ ಹೂಡಿ, ಎಲ್ಲರೊಡನೆ ಕೂಡಿಕೊಳ್ಳುತ್ತಾನೆ. ಇಂದ್ರನು ವಜ್ರಯುಕ್ತನೂ, ಹಿರಣ್ಮಯನೂ ಆಗಿರುವನು. ॥ ೨ ॥

೬೩. ಇಂದ್ರೋ ದೀರ್ಘಾಯ ಚಕ್ಷಸ ಆ ಸೂರ್ಯಂ ರೋಹಯದ್ ದಿವಿ ।
ವಿ ಗೋಭಿರದ್ರಿಮೈರಯತ್ ॥ ೩ ॥

ದೂರದಲ್ಲಿರುವ ಮಾನವರನ್ನು ನೋಡುವದಕ್ಕಾಗಿ ಇಂದ್ರನು ಸೂರ್ಯನನ್ನು ಆಕಾಶದಲ್ಲಿ ಇಟ್ಟಿರುವನು; ತರುವಾಯ ಮಳೆಗೆ ನಿಮಿತ್ತವಾದ ಉದಕಗಳಿಂದ ಮೇಘವನ್ನು ಪ್ರೇರಿಸಿದನು. ॥ ೩ ॥

೬೪. ಇಂದ್ರ ವಾಜೇಷು ನೋಽವ ಸಹಸ್ರಪ್ರಧನೇಷು ಚ ।
ಉಗ್ರ ಉಗ್ರಾಭಿರೂತಿಭಿಃ ॥ ೪ ॥

ಉಗ್ರನಾದ ಇಂದ್ರನೇ! ಅಪ್ರತಿಹತವಾದ ರಕ್ಷಣ-ಶಕ್ತಿಯಿಂದ ಯುದ್ಧಗಳಲ್ಲಿಯೂ, ಲಾಭದಾಯಕವಾದ ಮಹಾಸಮರಗಳಲ್ಲಿಯೂ ನಮ್ಮನ್ನು ಕಾಪಾಡು. ॥ ೪ ॥

೬೫. ಇಂದ್ರಂ ವಯಂ ಮಹಾಧನ ಇಂದ್ರಮರ್ಭೇ ಹವಾಮಹೇ ।
ಯುಜಂ ವೃತ್ರೇಷು ವಜ್ರಿಣಂ ॥ ೫ ॥

ಇಂದ್ರನು ನಮಗೆ ಸಹಾಯಕನಾಗಿ ಶತ್ರುಗಳಿಗೆ ವಜ್ರಧರನಾಗಿರುವದರಿಂದ, ನಾವು ಧನಕ್ಕಾಗಿ, ಮಹಾಧನಕ್ಕಾಗಿ ಇಂದ್ರನನ್ನು ಆಹ್ವಾನಿಸುತ್ತೇವೆ. ॥ ೫ ॥

## [ವರ್ಗಃ ೧೪]

೬೬. ಸ ನೋ ವೃಷನ್ನಮುಂ ಚರುಂ ಸತ್ರಾದಾವನ್ನಪಾ ವೃಧಿ ।
ಅಸ್ಮಭ್ಯಮಪ್ರತಿಷ್ಕುತಃ ॥ ೬ ॥

ಅಭೀಷ್ಟ-ಫಲಗಳನ್ನು ಕೊಡುವ ವೃಷ್ಟಿ-ಪ್ರದನಾದ ಇಂದ್ರನೇ! ನೀನು ನಮಗಾಗಿ ಈ ಮೇಘವನ್ನು ಭೇದಿಸು. ಒಮ್ಮೆಯಾದರೂ ನೀನು ನಮ್ಮ ಪ್ರಾರ್ಥನೆಯ ಅಸ್ವೀಕಾರ ಮಾಡಲಿಲ್ಲ. ॥ ೬ ॥

೬೭. ತುಂಜೇತುಂಜೇ ಯ ಉತ್ತರೇ ಸ್ತೋಮಾ ಇಂದ್ರಸ್ಯ ವಜ್ರಿಣಃ ।
ನ ವಿಂಧೇ ಅಸ್ಯ ಸುಷ್ಟುತಿಂ ॥ ೭ ॥

ಯಾವ ವಿಧವಿಧದ ಸ್ತುತಿವಾಕ್ಯಗಳು ಬೇರೆ ಬೇರೆ ದೇವತೆಗಳಿಗಾಗಿ ಪ್ರಯುಕ್ತವಾಗಿರುವವೋ, ಅವೆಲ್ಲವೂ ವಜ್ರಧಾರಿಯಾದ ಇಂದ್ರನಿಗಾಗಿಯೇ ಸೈ. ಇಂದ್ರನಿಗೆ ಯೋಗ್ಯವಾದ ಸ್ತುತಿಯನ್ನು ತುಚ್ಛನಾದ ನಾನು ಕಾಣೆ. ॥ ೭ ॥

೬೮. ವೃಷಾ ಯೂಥೇವ ವಂಸಗಃ ಕೃಷ್ಟೀರಿಯರ್ತ್ಯೋಜಸಾ ।
ಈಶಾನೋ ಅಪ್ರತಿಷ್ಕುತಃ ॥ ೮ ॥

ಯಾವ ರೀತಿಯಲ್ಲಿ ಶ್ರೇಷ್ಠಗತಿಯುಳ್ಳ ವೃಷಭವು ತನ್ನ ಗೋ-ಸಮೂಹವನ್ನು ಬಲಿಷ್ಠಗೊಳಿಸುತ್ತದೆಯೋ, ಅದೇ ಪ್ರಕಾರ ಇಚ್ಛಿತ-ವಿತರಣೆ ಮಾಡುವ ಯೋಗ್ಯತೆಯುಳ್ಳ ಇಂದ್ರನು ಮಾನವನನ್ನು ಬಲಿಷ್ಠನನ್ನಾಗಿ ಮಾಡುತ್ತಾನೆ. ಶಕ್ತಿಸಂಪನ್ನನಾದ ಇಂದ್ರನು ಯಾರ ಯಾಚನೆಯನ್ನೂ ಸ್ವೀಕರಿಸದೆ ಇರುವದಿಲ್ಲ. ॥ ೮ ॥

೬೯. ಯ ಏಕಶ್ಚರ್ಷಣೀನಾಂ ವಸೂನಾಮಿರಜ್ಯತಿ ।
ಇಂದ್ರಃ ಪಂಚ ಕ್ಷಿತೀನಾಂ ॥ ೯ ॥

ಇಂದ್ರನು ಮಾನವ, ಸಂಪತ್ತು ಮತ್ತು ಪಂಚಕ್ಷಿತಿ ಇವುಗಳ ಮೇಲೆ ಅಧಿಕಾರವನ್ನು ನಡೆಸುತ್ತಾನೆ. ॥ ೯ ॥

೭೦. ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ ।
ಅಸ್ಮಾಕಮಸ್ತು ಕೇವಲಃ ॥ ೧೦ ॥

ಎಲ್ಲರ ಅಗ್ರಣಿಯಾದ ಇಂದ್ರನನ್ನು ನಿಮ್ಮೆಲ್ಲರ ಸಲುವಾಗಿ ನಾವು ಆಹ್ವಾನಿಸುತ್ತೇವೆ; ಯಾಕೆಂದರೆ ಇಂದ್ರನು ನಮ್ಮವನೇ ಆಗಿರುವನು. ॥ ೧೦ ॥

# ಮೂರನೇ ಅನುವಾಕ

## ಸೂಕ್ತ: ೮

ಈ ಸೂಕ್ತದ ದೇವತೆ: ಇಂದ್ರನು; ಋಷಿಯು: ಮಧುಚ್ಛಂದಸನು;
ಛಂದಸ್ಸು: ಗಾಯತ್ರೀ.

### [ವರ್ಗ: ೧೫]

೭೧. ಏಂದ್ರ ಸಾನಸಿಂ ರಯಿಂ ಸಜಿತ್ವಾನಂ ಸದಾಸಹಂ ।
ವರ್ಷಿಷ್ಠಮೂತಯೇ ಭರ ॥ ೧ ॥

ಇಂದ್ರನೇ! ನಮ್ಮ ರಕ್ಷಣೆಯು ಸಲುವಾಗಿಯೂ, ಭೋಗಕ್ಕೆ ಯೋಗ್ಯ ವಾಗಿಯೂ, ವಿಜಯಕ್ಕೆ ಆವಶ್ಯಕವಾಗಿಯೂ, ಶತ್ರುಜಯಕ್ಕೆ ಯಥೇಷ್ಟವಾಗಿಯೂ ಇರುವಂಥ ಧನವನ್ನು ನಮಗೆ ಅನುಗ್ರಹಿಸು. ॥ ೧ ॥

೭೨. ನಿ ಯೇನ ಮುಷ್ಟಿಹತ್ಯಯಾ ನಿ ವೃತ್ರಾ ರುಣಧಾಮಹೈ ।
ತ್ವೋತಾಸೋ ನ್ಯರ್ವತಾ ॥ ೨ ॥

ಆ ಧನದ ಬಲದಿಂದ ಯಾವಾಗಲೂ ಮುಷ್ಟಿಕಾಘಾತ ಮಾಡಿ ನಾವು ಶತ್ರುಗಳನ್ನು ಓಡಿಸುವೆವು; ನಿನ್ನಿಂದ ಸಂರಕ್ಷಿತರಾದ ನಾವು ಕುದುರೆಗಳ ಸಹಾಯದಿಂದ ಶತ್ರುಗಳನ್ನು ದೂರಮಾಡುತ್ತೇವೆ. ॥ ೨ ॥

೭೩. ಇಂದ್ರ ತ್ವೋತಾಸ ಆ ವಯಂ ವಜ್ರಂ ಘನಾ ದದೀಮಹಿ ।
ಜಯೇಮ ಸಂ ಯುಧಿ ಸ್ಪೃಧಃ ॥ ೩ ॥

ಇಂದ್ರನೇ! ನಿನ್ನಿಂದ ರಕ್ಷಿತರಾಗಿ ನಾವು ಕಠಿಣವಾದ ಅಸ್ತ್ರವನ್ನು ಧರಿಸಿ ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ಸೋಲಿಸುವೆವು. ॥ ೩ ॥

೭೪. ವಯಂ ಶೂರೇಭಿರಸ್ತೃಭಿ—ರಿಂದ್ರ ತ್ವಯಾ ಯುಜಾ ವಯಂ ।
ಸಾಸಹ್ಯಾಮ ಪೃತನ್ಯತಃ ॥ ೪ ॥

ಇಂದ್ರನೇ! ನೀನು ನಮಗೆ ಸಹಾಯಮಾಡಿದರೆ, ಶಸ್ತ್ರಾಸ್ತ್ರಯುಕ್ತ—ಸೈನಿಕರಿಂದ ಸುಸಜ್ಜಿತವಾದ ಸೇನೆಯುಳ್ಳ ಶತ್ರುವನ್ನು ಕೂಡ ನಾವು ಜಯಿಸಬಲ್ಲೆವು. ॥ ೪ ॥

೭೫. ಮಹಾँ ಇಂದ್ರಃ ಪರಶ್ಚ ನು ಮಹಿತ್ವಮಸ್ತು ವಜ್ರಿಣೇ ।
ದ್ಯೌರ್ನ ಪ್ರಥಿನಾ ಶವಃ ॥ ೫ ॥

ಇಂದ್ರದೇವನು ದೊಡ್ಡವರಲ್ಲಿ ಸರ್ವಶ್ರೇಷ್ಠನು. ವಜ್ರಧಾರಿಯಾದ ಇಂದ್ರನನ್ನು ಸ್ವತಃ ಮಹತ್ವವೇ ಆಶ್ರಯಿಸುತ್ತಿದೆ. ಇಂದ್ರನ ಸೈನ್ಯವಾದರೊ ವಿಶಾಲವಾದದ್ದು. ॥ ೫ ॥

## [ವರ್ಗಃ ೧೬]

೭೬. ಸಮೋಹೇ ವಾ ಯ ಆಶತ ನರಸ್ತೋಕಸ್ಯ ಸನಿತೌ ।
ವಿಪ್ರಾಸೋ ವಾ ಧಿಯಾಯವಃ ॥ ೬ ॥

ಯಾವ ಪುರುಷರು ರಣಾಂಗಣಕ್ಕೆ ಹೋಗುವಂಥವರಿರುವರೊ, ಯಾರಿಗೆ ಪುತ್ರ-ಪ್ರಾಪ್ತಿಯ ಇಚ್ಛೆಯಿರುವದೊ ಅಥವಾ ಯಾವ ವಿಶೇಷಜ್ಞರು ಜ್ಞಾನಾಕಾಂಕ್ಷೆಯಲ್ಲಿ ತತ್ಪರರಾಗಿರುವರೊ, ಅವರೆಲ್ಲರೂ ಇಂದ್ರನನ್ನು ಸ್ತುತಿಸಿ ಸಿದ್ಧಿಯನ್ನು ಗಳಿಸುತ್ತಾರೆ. ॥ ೬ ॥

೭೭. ಯಃ ಕುಕ್ಷಿಃ ಸೋಮಪಾತಮಃ ಸಮುದ್ರ ಇವ ಪಿನ್ವತೇ ।
ಉರ್ವೀರಾಪೋ ನ ಕಾಕುದಃ ॥ ೭ ॥

ಸೋಮರಸಪಾನಕ್ಕಾಗಿ ತತ್ಪರವಾಗಿರುವ ಇಂದ್ರನ ಉದರದೇಶವು ಸಮುದ್ರದಂತೆ ವಿಶಾಲವಾದದ್ದು. ಆ ಹೊಟ್ಟೆಯು, ಜಿಹ್ವೆಯ ಜಲದಂತೆ, ಯಾವಾಗಲೂ ಬತ್ತಿ ಹೋಗುವದಿಲ್ಲ. ॥ ೭ ॥

೭೮. ಏವಾ ಹ್ಯಸ್ಯ ಸೂನೃತಾ ವಿರಪ್ಶೀ ಗೋಮತೀ ಮಹೀ ।
ಪಕ್ವಾ ಶಾಖಾ ನ ದಾಶುಷೇ ॥ ೮ ॥

ಇಂದ್ರನ ಮುಖದಿಂದ ಹೊರವಂಟ ವಾಕ್ಯವು ಸತ್ಯವಾದದ್ದೂ, ವೈಚಿತ್ರ್ಯ-ವಿಶಿಷ್ಟವೂ, ಮಹತ್ವದ್ದೂ, ಗೋ-ಪ್ರದಾಯಕವೂ ಆಗಿರುವದು. ಹವ್ಯಾದಾತಾ ಯಜಮಾನನಿಗಂತೂ ಆ ವಾಕ್ಯವು ಪಕ್ವವಾದ ಫಲದಿಂದ ಕೂಡಿದ ವೃಕ್ಷಶಾಖೆಗೆ ಸಮಾನವಾಗಿರುವದು. ॥ ೮ ॥

೭೯. ಏವಾ ಹಿ ತೇ ವಿಭೂತಯ ಊತಯ ಇಂದ್ರ ಮಾವತೇ ।
ಸದ್ಯಶ್ಚಿತ್ ಸಂತಿ ದಾಶುಷೇ ॥ ೯ ॥

ಇಂದ್ರನೇ! ನಿನ್ನ ಐಶ್ವರ್ಯವೇ ಈ ಪ್ರಕಾರದ್ದು. ಅದು ನಮ್ಮಂಥ ಹವ್ಯದಾತಾರರ ರಕ್ಷಕವಾಗಿ, ಶೀಘ್ರ-ಫಲದಾಯಕವಾಗುವುದು. ॥ ೯ ॥

೮೦. ಏವಾ ಹ್ಯಸ್ಯ ಕಾಮ್ಯಾ ಸ್ತೋಮ ಉಕ್ಥಂ ಚ ಶಂಸ್ಯಾ ।
ಇಂದ್ರಾಯ ಸೋಮಪೀತಯೇ ॥ ೧೦ ॥

ಇಂದ್ರನಿಗಾಗಿ ರಚಿಸಿದ ಸಾಮವೇದೀಯ ಮತ್ತು ಋಗ್ವೇದೀಯ ಮಂತ್ರಗಳು ಇಂದ್ರನಿಗೆ ಅತ್ಯಂತ ಪ್ರಿಯಕರವಾಗಿರುವುವು; ಇವನ್ನು ಇಂದ್ರನ ಸೋಮಪಾನದ ಸಲುವಾಗಿ ಹಾಡಬೇಕು. ॥ ೧೦ ॥

## ಸೂಕ್ತ: ೯

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮಧುಚ್ಛಂದಸನು;
ಛಂದಸ್ಸು: ಗಾಯತ್ರೀ.

### [ವರ್ಗ: ೧೭]

೮೧. ಇಂದ್ರೇಹಿ ಮತ್ಸ್ಯಂಧಸೋ ವಿಶ್ವೇಭಿಃ ಸೋಮಪರ್ವಭಿಃ ।
ಮಹಾँ ಅಭಿಷ್ಟಿರೋಜಸಾ ॥ ೧ ॥

ಇಂದ್ರನೇ! ಬಾ. ಸಮಸ್ತವಾದ ಸೋಮರಸದಿಂದ ಮತ್ತು ಅನ್ನಗಳಿಂದ ಹರ್ಷಿತನಾಗು. ಮಹಾಬಲಶಾಲಿಯಾಗಿ ಶತ್ರುಗಳನ್ನು ಜಯಿಸು. ॥ ೧ ॥

೮೨. ಏಮೇನಂ ಸೃಜತಾ ಸುತೇ ಮಂದಿಮಿಂದ್ರಾಯ ಮಂದಿನೇ ।
ಚಕ್ರಿಂ ವಿಶ್ವಾನಿ ಚಕ್ರಯೇ ॥ ೨ ॥

ಪ್ರಸನ್ನತೆಯನ್ನು ತಂದು, ಉದ್ಯಮವನ್ನು ಯೋಗ್ಯರೀತಿಯಲ್ಲಿ ನೆರವೇರಿಸಲು ಉತ್ಸಾಹದಾಯಕವಾದ ಸೋಮರಸವು ಸಿದ್ಧವಾಗಿದ್ದರೆ, ಯಾವಾಗಲೂ ಆನಂದಿಯಾಗಿರುವ ಸಕಲಕರ್ಮ-ಸಾಧಕನಾದ ಇಂದ್ರನಿಗೆ ಆ ಸೋಮರಸವನ್ನು ಅರ್ಪಿಸಿರಿ. ॥ ೨ ॥

೮೩. ಮತ್ಸ್ವಾ ಸುಶಿಪ್ರ ಮಂದಿಭಿಃ ಸ್ತೋಮೇಭಿರ್ವಿಶ್ವಚರ್ಷಣೇ ।
ಸಚೈಷು ಸವನೇಷ್ವಾ ॥ ೩ ॥

ಸುಂದರವಾದ ನಾಸಿಕೆಯುಳ್ಳ ಇಂದ್ರನೇ! ನೀನು ಸಕಲ ಚರಾಚರದ ಅಧೀಶ್ವರನಾಗಿರುವೆ. ಪ್ರಸನ್ನತೆಯನ್ನು ತರುವ ಸ್ತುತಿಗಳಿಂದ ಪ್ರಸನ್ನನಾಗು. ದೇವತೆಗಳೊಂದಿಗೆ ಈ ತ್ರಿಷವಣಗಳಿಂದ ಕೂಡಿದ ಯಜ್ಞದಲ್ಲಿ ಬಾ. ॥ ೩ ॥

೮೪. ಅಸೃಗ್ರಮಿಂದ್ರ ತೇ ಗಿರಃ ಪ್ರತಿ ತ್ವಾಮುದಹಾಸತ ।
ಅಜೋಷಾ ವೃಷಭಂ ಪತಿಂ ॥ ೪ ॥

ಇಂದ್ರನೇ! ನಾನು ನಿನ್ನನ್ನು ಸ್ತುತಿಸಿರುವೆನು. ಇಚ್ಛಿತವರ್ಷಕನೂ, ಪಾಲನಕರ್ತೃವೂ ಆದ ನಿನಗೆ ನನ್ನ ಸ್ತುತಿಯು ಪ್ರಾಪ್ತವಾಗಿರುವದು; ಅದನ್ನು ನೀನು ಸ್ವೀಕರಿಸಿರುವೆ. ॥ ೪ ॥

೮೫. ಸಂ ಚೋದಯ ಚಿತ್ರಮರ್ವಾಗ್ ರಾಧ ಇಂದ್ರ ವರೇಣ್ಯಂ ।
ಅಸದಿತ್ ತೇ ವಿಭು ಪ್ರಭು ॥ ೫ ॥

ಇಂದ್ರನೇ! ನಿನ್ನ ಹತ್ತರ ಬೇಕಾದಷ್ಟು ಮತ್ತು ಶ್ರೇಷ್ಠವಾದ ಧನವಿರುವದರಿಂದ, ಉತ್ತಮವಾದ ನಾನಾವಿಧದ ಸಂಪತ್ತಿಯನ್ನು ನಮಗೆ ಕರುಣಿಸಯ್ಯಾ. ॥ ೫ ॥

## [ವರ್ಗಃ ೧೮]

೮೬. ಅಸ್ಮಾಂತ್ಸು ತತ್ರ ಚೋದಯೇಂದ್ರ ರಾಯೇ ರಭಸ್ವತಃ ।
ತುವಿದ್ಯುಮ್ನ ಯಶಸ್ವತಃ ॥ ೬ ॥

ಅನಂತ-ಸಂಪತ್ತಿಶಾಲಿಯಾದ ಇಂದ್ರನೇ! ಧನಸಿದ್ಧಿಗಾಗಿ ನಮಗೆ ಉದ್ಯಮದಲ್ಲಿ ಪ್ರೇರಿಸು. ನಾವು ಉದ್ಯೋಗದಲ್ಲಿ ತೊಡಗಿ ಯಶಸ್ವಿಗಳಾಗುತ್ತೇವೆ. ॥ ೬ ॥

೮೭. ಸಂ ಗೋಮದಿಂದ್ರ ವಾಜವದಸ್ಮೇ ಪೃಥು ಶ್ರವೋ ಬೃಹತ್ ।
ವಿಶ್ವಾಯುರ್ಧೇಹ್ಯಕ್ಷಿತಂ ॥ ೭ ॥

ಇಂದ್ರನೇ! ಗೌ-ಧಾನ್ಯಸಂಪನ್ನವಾದ, ಪ್ರಚುರ-ವಿಸ್ತೃತವಾದ, ಮತ್ತು ಅಖಂಡಆಯುಷ್ಯವನ್ನು ಮರ್ಯಾದೆಯಿಂದ ನಡೆಸಲು ಯೋಗ್ಯವಾದ ಅಕ್ಷಯ-ಧನವನ್ನು ನಮಗೆ ಕರುಣಿಸು. ॥ ೭ ॥

೮೮. ಅಸ್ಮೇ ಧೇಹಿ ಶ್ರವೋ ಬೃಹದ್ ದ್ಯುಮ್ನಂ ಸಹಸ್ರಸಾತಮಂ ।
ಇಂದ್ರ ತಾ ರಥಿನೀರಿಷಃ ॥ ೮ ॥

ಇಂದ್ರನೇ! ನಮಗೆ ಮಹಾಕೀರ್ತಿಯನ್ನೂ, ಬಹುವಾಗಿ ದಾನಮಾಡಲು ಸಾಮರ್ಥ್ಯವನ್ನೀಯುವ ಧನವನ್ನೂ, ಅನಂತ-ರಥ-ಪೂರ್ಣವಾದ ಅನ್ನವನ್ನೂ ಅನುಗ್ರಹಿಸು. ॥ ೮ ॥

೮೯. ವಸೋರಿಂದ್ರಂ ವಸುಪತಿಂ ಗೀರ್ಭಿರ್ಗೃಣಂತ ಋಗ್ಮಿಯಂ ।
ಹೋಮ ಗಂತಾರಮೂತಯೇ ॥ ೯ ॥

ಧನದ ರಕ್ಷಣೆಗಾಗಿ ನಾವು ಸ್ತುತಿಸಿ ಇಂದ್ರನನ್ನು ಆಹ್ವಾನಿಸುತ್ತೇವೆ. ಇಂದ್ರನು ಧನರಕ್ಷಕನೂ, ಋಚಾ-ಪ್ರಿಯನೂ, ಯಜ್ಞಮಾಡುವವರನ್ನು ಕಾಪಾಡುವಂಥವನೂ ಆಗಿರುವನು. ॥ ೯ ॥

೯೦. ಸುತೇಸುತೇ ನ್ಯೋಕಸೇ ಬೃಹದ್ ಬೃಹತ ಏದರಿಃ ।
ಇಂದ್ರಾಯ ಶೂಷಮರ್ಚತಿ ॥ ೧೦ ॥

ಪ್ರತಿಯೊಂದು ಯಜ್ಞದಲ್ಲಿ ಸ್ತುತಿಸುವ ಯಜಮಾನನು ಸದಾಧಿವಾಸಿಯೂ, ಪ್ರೌಢನೂ ಆಗಿರುವ ಇಂದ್ರನ ಮಹಾಪರಾಕ್ರಮದ ಪ್ರಶಂಸೆಯನ್ನು ಮಾಡುತ್ತಾನೆ. ॥ ೧೦ ॥

# ಸೂಕ್ತ: ೧೦

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮಧುಚ್ಛಂದಸನು;
ಛಂದಸ್ಸು: ಅನುಷ್ಟುಪ್.

## [ವರ್ಗ: ೧೯]

೯೧. ಗಾಯಂತಿ ತ್ವಾ ಗಾಯತ್ರಿಣೋ—ಽರ್ಚಂತ್ಯರ್ಕಮರ್ಕಿಣಃ ।
ಬ್ರಹ್ಮಾಣಸ್ತ್ವಾ ಶತಕ್ರತ ಉದ್ ವಂಶಮಿವ ಯೇಮಿರೇ ॥ ೧ ॥

ಶತಕ್ರತು ಇಂದ್ರನೇ! ಸಾಮವೇದಿಗಳು ನಿನ್ನನ್ನುದ್ದೇಶಿಸಿ ಗಾನಮಾಡುತ್ತಾರೆ. ಋಗ್ವೇದಿಗಳು ಪೂಜ್ಯನಾದ ನಿನ್ನ ಅರ್ಚನೆಯನ್ನು ಮಾಡುತ್ತಾರೆ. ನರ್ತಕರು ಕುಣಿಯುವಾಗ ಕೋಳಲನ್ನು ಮೇಲೇರಿಸುವಂತೆ, ಸ್ತುತಿಮಾಡುವ ಬ್ರಾಹ್ಮಣರು ನಿನ್ನನ್ನುಉನ್ನತನನ್ನಾಗಿ ಮಾಡಿ ಸ್ತುತಿಸುತ್ತಾರೆ. ॥ ೧ ॥

೯೨. ಯತ್ ಸಾನೋಃ ಸಾನುಮಾರುಹದ್ ಭೂರ್ಯಸ್ಪಷ್ಟ ಕರ್ತ್ವಂ ।
ತದಿಂದ್ರೋ ಅರ್ಥಂ ಚೇತತಿ ಯೂಥೇನ ವೃಷ್ಣಿರೇಜತಿ ॥ ೨ ॥

ಯಜಮಾನನು ಸೋಮಲತೆಗಾಗಿ ಹಿಮಾಲಯಪ್ರದೇಶದಲ್ಲಿರುವ ಪರ್ವತ ಮಾರ್ಗದಲ್ಲಿ ಅಲೆದು, ಅನೇಕ ಕಷ್ಟಮಯ ಕೆಲಸಗಳನ್ನು ಶಿರಸಾವಹಿಸುವಾಗ, ಇಂದ್ರನು ಆ ಯಜಮಾನನ ಮನೋರಥವನ್ನು ಅರಿತುಕೊಂಡು, ಅವನ ಇಚ್ಛಿತ ವರ್ಷಣಕ್ಕಾಗಿ ಉತ್ಸುಕನಾಗಿ, ಮರುದ್ಗಣದೊಂದಿಗೆ ಯಜ್ಞಶಾಲೆಯಲ್ಲಿ ಬರಲು ಸಿದ್ಧನಾಗುತ್ತಾನೆ. ॥ ೨ ॥

೯೩. ಯುಕ್ಷ್ವಾ ಹಿ ಕೇಶಿನಾ ಹರೀ ವೃಷಣಾ ಕಕ್ಷ್ಯಪ್ರಾ ।
ಅಥಾ ನ ಇಂದ್ರ ಸೋಮಪಾ ಗಿರಾಮುಪಶ್ರುತಿಂ ಚರ ॥ ೩ ॥

ಇಂದ್ರನೇ! ಕೇಸರದಿಂದ ಶೋಭಿಸುವ, ಪರಾಕ್ರಮಿಗಳಾದ ಮತ್ತು ಪುಷ್ಟವಾದ ಅಂಗವುಳ್ಳ ಎರಡೂ ಕುದುರೆಗಳನ್ನು ರಥಕ್ಕೆ ಜೋಡಿಸಿ, ನಮ್ಮ ಸ್ತುತಿಯನ್ನು ಕೇಳಲು ಬಾ. ॥ ೩ ॥

೯೪. ಏಹಿ ಸ್ತೋಮಾँ ಅಭಿ ಸ್ವರಾ—ಽಭಿ ಗೃಣೀಹ್ಯಾ ರುವ ।
ಬ್ರಹ್ಮ ಚ ನೋ ವಸೋ ಸಚೇ—ಂದ್ರ ಯಜ್ಞಂ ಚ ವರ್ಧಯ ॥ ೪ ॥

ಜನತೆಗೆ ಆಶ್ರಯವನ್ನು ಕೊಡುವ ಇಂದ್ರನೇ! ಬಾ. ನಾವು ಮಾಡುವ ಸ್ತುತಿಯನ್ನು ಸಮರ್ಥಿಸಿ ಹೊಗಳು ಮತ್ತು ನಿನಗಾದ ಆನಂದವನ್ನು ಶಬ್ದಗಳಿಂದ ಪ್ರದರ್ಶಿಸು. ನೀನು ಇಲ್ಲಿದ್ದುಕೊಂಡು ನಮ್ಮ ಅನ್ನ ಮತ್ತು ಯಜ್ಞಗಳನ್ನು ಒಂದೇ ಸವನೆ ಹೆಚ್ಚಿಸು. ॥ ೪ ॥

೯೫. ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ ಪುರುನಿಷ್ಷಿಧೇ ।
ಶಕ್ರೋ ಯಥಾ ಸುತೇಷು ಣೋ ರಾರಣತ್ ಸಖ್ಯೇಷು ಚ ॥ ೫ ॥

ಅನಂತ-ಶತ್ರು-ನಿವಾರಕನಾದ ಇಂದ್ರನ ಉದ್ದೇಶ್ಯದಿಂದ ರಚಿಸಿರುವ ಋಗ್ವೇದದ ಗೀತಗಳು ಪರಿವರ್ಧಮಾನವಾಗಿವೆ; ಈ ಗೀತಗಳಿಂದ ಶಕ್ತಿಶಾಲಿಯಾದ ಇಂದ್ರನು ನಮ್ಮ ಸುಹೃದ್-ಬಾಂಧವರ ನಡುವೆ ಮಹಾನಾದವನ್ನು ಮಾಡಿ ತನ್ನ ಮೆಚ್ಚಿಗೆಯನ್ನು ಸೂಚಿಸಲಿ. ॥ ೫ ॥

೯೬. ತಮಿತ್ ಸಖಿತ್ವ ಈಮಹೇ ತಂ ರಾಯೇ ತಂ ಸುವೀರ್ಯೇ ।
ಸ ಶಕ್ರ ಉತ ನಃ ಶಕ-ದಿಂದ್ರೋ ವಸು ದಯಮಾನಃ ॥ ೬ ॥

ನಾವು ಗೆಳೆತನ, ಧನ ಮತ್ತು ಶಕ್ತಿಗಳನ್ನು ಸಂಪಾದಿಸುವದಕ್ಕಾಗಿ ಇಂದ್ರನ ಬಳಿಗೆ ಸಾರುತ್ತೇವೆ. ಶಕ್ತಿಶಾಲಿಯಾದ ಇಂದ್ರನು ಧನವನ್ನು ಅನುಗ್ರಹಿಸಿ ನಮ್ಮನ್ನು ಕಾಪಾಡಲಿ. ॥ ೬ ॥

## [ವರ್ಗ: ೨೦]

೯೭. ಸುವಿವೃತಂ ಸುನಿರಜ-ಮಿಂದ್ರ ತ್ವಾದಾತಮಿದ್ಯಶಃ ।
ಗವಾಮಪ ವ್ರಜಂ ವೃಧಿ ಕೃಣುಷ್ವ ರಾಧೋ ಅದ್ರಿವಃ ॥ ೭ ॥

ಇಂದ್ರನೇ! ನೀನಿತ್ತ ಧನವು ಎಲ್ಲೆಡೆಯಲ್ಲಿಯೂ ಪಸರಿಸಿ ಜನತೆಗೆ ಸುಖಪ್ರದವಾಗಿರುವದು. ವಜ್ರಧಾರಿಯಾದ ಇಂದ್ರನೇ! ಗೋವುಗಳ ವಸತಿದ್ವಾರದ ಉದ್ಘಾಟನೆಯನ್ನು ಮಾಡಿ ಧನವನ್ನು ನಮಗಾಗಿ ಸಂಪಾದಿಸಿ ಕೊಡಯ್ಯಾ. ॥ ೭ ॥

೯೮. ನಹಿ ತ್ವಾ ರೋದಸೀ ಉಭೇ ಋಘಾಯಮಾಣಮಿನ್ವತಃ ।
ಜೇಷಃ ಸ್ವರ್ವತೀರಪಃ ಸಂ ಗಾ ಅಸ್ಮಭ್ಯಂ ಧೂನುಹಿ ॥ ೮ ॥

ಇಂದ್ರನೇ! ಶತ್ರುವಧೆಯ ಸಮಯದಲ್ಲಿ ನಿನ್ನ ಮಹಿಮೆಯು ಅಗಾಧವಾಗಿ ಬೆಳೆಯುವದು. ಅದನ್ನು ಧಾರಣಮಾಡಲು ಸ್ವರ್ಗ-ಮರ್ತ್ಯವೆಂಬೀ ಎರಡೂ ಲೋಕಗಳಿಗೂ ಶಕ್ಯವಾಗಲಾರದು. ಆದ್ದರಿಂದ ಸ್ವರ್ಗೀಯವಾದ ಜಲ-ವೃಷ್ಟಿಯನ್ನು ಮಾಡಿ ನಮಗೆ ಗೋವುಗಳನ್ನು ಕರುಣಿಸು. ॥ ೮ ॥

೯೯. ಆಶ್ರುತ್ಕರ್ಣ ಶ್ರುಧೀ ಹವಂ ನೂ ಚಿದ್ದಧಿಷ್ವ ಮೇ ಗಿರಃ ।
ಇಂದ್ರ ಸ್ತೋಮಮಿಮಂ ಮಮ ಕೃಷ್ವಾ ಯುಜಶ್ಚಿದಂತರಂ ॥ ೯ ॥

ಇಂದ್ರನೇ! ನಿನ್ನ ಕಿವಿಗಳು ಎಲ್ಲಕಡೆಗಳಿಂದ ಆಲೈಸುತ್ತಿವೆಯಾದ್ದರಿಂದ ನಮ್ಮ ಆಹ್ವಾನವನ್ನು ಶೀಘ್ರವಾಗಿ ಕೇಳು; ನಮ್ಮ ಸ್ತುತಿಯನ್ನು ಅವಧರಿಸಿ, ನಮ್ಮ ಮತ್ತು ನಮ್ಮ ಮಿತ್ರರ ಸ್ತೋತ್ರಗಳು ಯಾವಾಗಲೂ ನಿನ್ನಲ್ಲಿಯೇ ಶಾಶ್ವತವಾಗಿರುವಂತೆ ಅನುಗ್ರಹಿಸು. ॥ ೯ ॥

೧೦೦. ವಿದ್ಮಾ ಹಿ ತ್ವಾ ವೃಷಂತಮಂ ವಾಜೇಷು ಹವನಶ್ರುತಂ ।
ವೃಷಂತಮಸ್ಯ ಹೂಮಹ ಊತಿಂ ಸಹಸ್ರಸಾತಮಾಂ ॥ ೧೦ ॥

ಇಂದ್ರನೇ! ನಾವು ನಿನ್ನನ್ನು ಅರಿತಿದ್ದೇವೆ. ನೀನು ಯಥೇಚ್ಛವಾಗಿ ಮಳೆಯನ್ನು ಸುರಿಸುತ್ತೀ. ಸಮರಾಂಗಣದಲ್ಲಿ ನಾವು ಮಾಡುವ ನಿನಾದವನ್ನು ನೀನು ಕೇಳುತ್ತೀ. ಇಂಥ ಇಷ್ಟಸಾಧಕನಾದ ನಿನ್ನನ್ನು ಅಶೇಷ–ಸುಖ–ಸಾಧಕವಾದ ರಕ್ಷಣೆಗಾಗಿ ನಾವು ಪ್ರಾರ್ಥಿಸುತ್ತೇವೆ. ॥ ೧೦ ॥

೧೦೧. ಆ ತೂ ನ ಇಂದ್ರ ಕೌಶಿಕ ಮಂದಸಾನಃ ಸುತಂ ಪಿಬ ।
ನವ್ಯಮಾಯುಃ ಪ್ರ ಸೂತಿರ ಕೃಧೀ ಸಹಸ್ರಸಾಮೃಷಿಂ ॥ ೧೧ ॥

ಇಂದ್ರನೇ! ಶೀಘ್ರವಾಗಿ ನಮ್ಮಲ್ಲಿ ಬಾರಯ್ಯಾ. ಕುಶಿಕಋಷಿಯ ಪುತ್ರನೇ! ಪ್ರಸನ್ನನಾಗಿ ಸೋಮರಸವನ್ನು ಪಾನಮಾಡು. ಕಾರ್ಯಕಾರಿಣೀ ಶಕ್ತಿಯನ್ನು ಬೆಳಿಸಿ ಈ ಋಷಿಯನ್ನು ಸಹಸ್ರ–ಧನ–ಸಂಪನ್ನನನ್ನಾಗಿ ಮಾಡಯ್ಯಾ. ॥ ೧೧ ॥

೧೦೨. ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ ।
ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥ ೧೨ ॥

ಸ್ತವನೀಯನಾದ ಇಂದ್ರನೇ! ನಾಲ್ಕೂಕಡೆಯಿಂದ ಈ ಸ್ತುತಿಯು ನಿನಗೆ ತಲುಪಲಿ. ನೀನು ಚಿರಂಜೀವಿಯಾಗು; ನಿನ್ನನ್ನನುಕರಿಸಿ ಈ ಸ್ತುತಿಯೂ ವೃದ್ಧಿಂಗತವಾಗಿ, ನಿನಗೆ ಆನಂದದಾಯಕವಾಗಿ, ನಮಗೆ ಪ್ರೀತಿಕರವಾಗಲಿ. ॥ ೧೨ ॥

## ಸೂಕ್ತ: ೧೧

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮಧುಚ್ಛಂದಸನ
ಪುತ್ರನಾದ ಜೇತಸನು; ಛಂದಸ್ಸು: ಅನುಷ್ಟುಪ್.

### [ವರ್ಗ: ೨೧]

೧೦೩. ಇಂದ್ರಂ ವಿಶ್ವಾ ಅವೀವೃಧಂತ್ ಸಮುದ್ರವ್ಯಚಸಂ ಗಿರಃ ।
ರಥೀತಮಂ ರಥೀನಾಂ ವಾಜಾನಾಂ ಸತ್ಪತಿಂ ಪತಿಂ ॥ ೧ ॥

ಸಾಗರದಂತೆ ವ್ಯಾಪಕನಾದ, ರಥಿ–ಶ್ರೇಷ್ಠನಾದ, ಅನ್ನಾದ್ಯಾಹಾರಗಳಿಗೆ ಪತಿಯಾದ ಮತ್ತು ಸಾಧುರಕ್ಷಕನಾದ ಇಂದ್ರನಿಗಾಗಿ ನಮ್ಮೆಲ್ಲರ ಸಮಸ್ತ ಸ್ತುತಿಗಳು ಪರಿವರ್ಧಿತವಾಗಿ ಹೋಗಿವೆ. ॥ ೧ ॥

೧೦೪. ಸಖ್ಯೇ ತ ಇಂದ್ರ ವಾಜಿನೋ ಮಾ ಭೇಮ ಶವಸಸ್ಪತೇ ।
ತ್ವಾಮಭಿ ಪ್ರ ಣೋನುಮೋ ಜೇತಾರಮಪರಾಜಿತಂ ॥ ೨ ॥

ಬಲಪತಿಯಾದ ಇಂದ್ರನೇ! ನಿನ್ನ ಅನುಗ್ರಹದಿಂದ ಯಾರಿಂದಲೂ ಭಯ ಪಡದಂತೆ ನಾವು ಶಕ್ತಿಶಾಲಿಯಾಗೋಣ. ಇಂದ್ರನೇ! ಜಯಶೀಲನೂ, ಅಪರಾಜೇಯನೂ ಆಗಿರುವ ನಿನ್ನನ್ನು ನಾವು ಎಲ್ಲೆಡೆಯಲ್ಲಿಯೂ ಸ್ತುತಿಸುತ್ತೇವೆ. ॥ ೨ ॥

೧೦೫. ಪೂರ್ವೀರಿಂದ್ರಸ್ಯ ರಾತಯೋ ನ ವಿ ದಸ್ಯಂತ್ಯೂತಯಃ ।
ಯದೀ ವಾಜಸ್ಯ ಗೋಮತಃ ಸ್ತೋತೃಭ್ಯೋ ಮಂಹತೇ ಮಘಂ ॥ ೩ ॥

ಇಂದ್ರನ ಧನದಾನವು ಚಿರಪ್ರಸಿದ್ಧವಾಗಿರುವದು. ಇಂದ್ರನು ಗೋ-ಸಂಯುಕ್ತವೂ, ಸಾಮರ್ಥ್ಯ-ಸಂಪನ್ನವೂ ಆದ ಧನದಾನವನ್ನು ಮಾಡುವದರಿಂದಲೇ ಪ್ರಾಣಿಗಳ ಸದಾ ರಕ್ಷಣೆಯಾಗುತ್ತದೆ. ॥ ೩ ॥

೧೦೬. ಪುರಾಂ ಭಿಂದುರ್ಯುವಾ ಕವಿ-ರಮಿತೌಜಾ ಅಜಾಯತ ।
ಇಂದ್ರೋ ವಿಶ್ವಸ್ಯ ಕರ್ಮಣೋ ಧರ್ತಾ ವಜ್ರೀ ಪುರುಷ್ಟುತಃ ॥ ೪ ॥

ಚಿರಯುವಕನಾದ, ಮಹಾಬಲಶಾಲಿಯಾದ, ಸರ್ವಕರ್ಮಗಳ ಪರಿಪೋಷಕನಾದ, ವಜ್ರಧಾರಿಯಾದ ಮತ್ತು ಸರ್ವ-ಸ್ತುತನಾಗಿರುವ ಇಂದ್ರನು ಅಸುರರ ನಗರಗಳನ್ನು ಧ್ವಂಸಮಾಡಿರುವನು. ॥ ೪ ॥

೧೦೭. ತ್ವಂ ವಲಸ್ಯ ಗೋಮತೋ-ಽಪಾವರದ್ರಿವೋ ಬಿಲಂ ।
ತ್ವಾಂ ದೇವಾ ಅಬಿಭ್ಯುಷಸ್ ತುಜ್ಯಮಾನಾಸ ಆವಿಷುಃ ॥ ೫ ॥

ವಜ್ರಯುಕ್ತನಾದ ಇಂದ್ರನೇ! ಗೋಹರಣ ಮಾಡಿದ **ಬಲ**ನೆಂಬ ಅಸುರನ ಗುಹೆಯನ್ನು ನೀನೇ ಹುಡುಕಿಸಿದೀ. ಆ ಕಾಲಕ್ಕೆ ಬಲಾಸುರನು ನಿಪೀಡಿತನಾದ ಮೇಲೆಯೇ ದೇವತೆಗಳು ನಿರ್ಭೀತರಾಗಿ ನಿನ್ನನ್ನು ಕೂಡಿಕೊಂಡರು. ॥ ೫ ॥

೧೦೮. ತವಾಹಂ ಶೂರ ರಾತಿಭಿಃ ಪ್ರತ್ಯಾಯಂ ಸಿಂಧುಮಾವದನ್ ।
ಉಪಾತಿಷ್ಠಂತ ಗಿರ್ವಣೋ ವಿದುಷ್ಟೇ ತಸ್ಯ ಕಾರವಃ ॥ ೬ ॥

ವೀರನಾದ ಇಂದ್ರನೇ! ಸೋಮರಸದ ಮಹಿಮೆಯನ್ನು ಎಲ್ಲೆಡೆಯಲ್ಲಿಯೂ ವಿಶದಗೊಳಿಸಿ, ನಿನ್ನ ಧನಪ್ರದಾನದಿಂದ ಆಕೃಷ್ಟನಾಗಿ ಮರಳಿರುತ್ತೇನೆ. ಪೂರ್ವಕಾಲದಲ್ಲಿ ಯಜ್ಞಮಾಡುವವರು ನಿನ್ನ ಬಳಿಗೆ ಬಂದಿದ್ದರು ಮತ್ತು ನೀನು ಸತ್ಪುರುಷನಾಗಿರುವದನ್ನು ಕಂಡಿದ್ದರು. ॥ ೬ ॥

೧೦೯. ಮಾಯಾಭಿರಿಂದ್ರ ಮಾಯಿನಂ ತ್ವಂ ಶುಷ್ಣಮವಾತಿರಃ ।
ವಿದುಷ್ಟೇ ತಸ್ಯ ಮೇಧಿರಾಸ್ ತೇಷಾಂ ಶ್ರವಾಂಸ್ಯುತ್ತಿರ ॥ ೭ ॥

ಇಂದ್ರನೇ! ನೀನು ಮಾಯಾವಿಯಾದ ಶುಷ್ಣನನ್ನು ಮಾಯೆಗಳಿಂದಲೇ ವಧಿಸಿದೀ. ನಿನ್ನ ಮಹಿಮೆಯನ್ನು ಮೇಧಾವಿಗಳು ಮಾತ್ರ ಬಲ್ಲರು; ಅವರ ಅನ್ನಾದ್ಯಾಹಾರಗಳನ್ನು ವರ್ಧಿಸು. ॥ ೭ ॥

೧೧೦. ಇಂದ್ರಮೀಶಾನಮೋಜಸಾ—ಭಿ ಸ್ತೋಮಾ ಅನೂಷತ ।
ಸಹಸ್ರಂ ಯಸ್ಯ ರಾತಯ ಉತ ವಾ ಸಂತಿ ಭೂಯಸೀಃ ॥ ೮ ॥

ಸ್ವಬಲ-ಪ್ರಭಾವದಿಂದ ಜಗತ್ತಿನ ನಿಯಾಮಕನಾದ ಇಂದ್ರನನ್ನು ಭಕ್ತರು ಹೊಗಳಿರುವರು. ಇಂದ್ರನ ಧನದಾನವು ಅಸಂಖ್ಯ ರೀತಿಯಲ್ಲಿ ನಡೆಯುತ್ತಿರುವದು. ॥ ೮ ॥

---

# ನಾಲ್ಕನೇ ಅನುವಾಕ

## ಸೂಕ್ತ: ೧೨

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಕಣ್ವಪುತ್ರನಾದ ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

### [ವರ್ಗ: ೨೨]

೧೧೧. ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ ।
ಅಸ್ಯ ಯಜ್ಞಸ್ಯ ಸುಕ್ರತುಂ ॥ ೧ ॥

ದೇವದೂತನೂ, ದೇವಾಹ್ವಾನಕಾರಿಯೂ, ನಿಖಿಲ-ಸಂಪತ್ಸಂಯುಕ್ತನೂ, ಈ ಯಜ್ಞದ ಸುಸಂಪಾದಕನೂ ಆಗಿರುವ ಅಗ್ನಿಯನ್ನು ನಾವು ಭಜಿಸುತ್ತೇವೆ. ॥ ೧ ॥

೧೧೨. ಅಗ್ನಿಮಗ್ನಿಂ ಹವೀಮಭಿಃ ಸದಾ ಹವಂತ ವಿಶ್ಪತಿಂ ।
ಹವ್ಯವಾಹಂ ಪುರುಪ್ರಿಯಂ ॥ ೨ ॥

ಪ್ರಜಾರಕ್ಷಕ, ಹವ್ಯವಾಹಕ ಮತ್ತು ಬಹುಲೋಕಪ್ರಿಯನಾದ ಅಗ್ನಿಯನ್ನು ಯಜ್ಞಕರ್ತೃಗಳು ಆಹ್ವಾನಗಳಿಗಾಗಿ ಉಪಯೋಗಿಸುವ ಮಂತ್ರಗಳಿಂದ ಆಹ್ವಾನ ಮಾಡುತ್ತಾರೆ. ॥ ೨ ॥

೧೧೩. ಅಗ್ನೇ ದೇವಾঁ ಇಹಾ ವಹ ಜಜ್ಞಾನೋ ವೃಕ್ತಬರ್ಹಿಷೇ ।
ಅಸಿ ಹೋತಾ ನ ಈಡ್ಯಃ ॥ ೩ ॥

ಅರಣಿಯಲ್ಲಿ ಉತ್ಪನ್ನನಾದ ಅಗ್ನಿಯೇ! ತುಂಡರಿಸಿದ ದರ್ಭೆಗಳುಳ್ಳ ಯಜ್ಞದಲ್ಲಿ ದೇವತೆಗಳನ್ನು ಆಮಂತ್ರಿಸು. ನೀನು ನಮ್ಮ ಸ್ತೋತ್ರಪಾತ್ರನೂ, ದೇವತೆಗಳ ಆಮಂತ್ರಕನೂ ಆಗಿರುವೆ. ॥ ೩ ॥

೧೧೪. ತಾঁ ಉಶತೋ ವಿ ಬೋಧಯ ಯದಗ್ನೇ ಯಾಸಿ ದೂತ್ಯಂ ।
ದೇವೈರಾ ಸತ್ಸಿ ಬರ್ಹಿಷಿ ॥ ೪ ॥

ಅಗ್ನಿಯೇ! ದೇವತೆಗಳ ದೂತಕರ್ಮವು ನಿನಗೆ ಪ್ರಾಪ್ತವಾಗಿರುವದರಿಂದ ಹವ್ಯಾಕಾಂಕ್ಷಿಗಳಾದ ದೇವತೆಗಳನ್ನೆಬ್ಬಿಸಿ. ದೇವತೆಗಳೊಂದಿಗೆ ಈ ಕುಶಯುಕ್ತ ಯಜ್ಞದಲ್ಲಿ ಕುಳಿತುಕೋ. ॥ ೪ ॥

೧೧೫. ಘೃತಾಹವನ ದೀದಿವಃ ಪ್ರತಿ ಷ್ಮ ರಿಷತೋ ದಹ ।

ಅಗ್ನೇ ತ್ವಂ ರಕ್ಷಸ್ವಿನಃ ॥ ೫ ॥

ಅಗ್ನಿಯೇ! ಘೃತದ ಮೂಲಕವಾಗಿ ಆಹ್ವಾಹಿತನಾಗಿರುವ ನೀನು ಪ್ರಕಾಶಮಾನನಾಗು. ನಮ್ಮವರಲ್ಲಿ ಕೆಲವರು ದ್ರೋಹಿಗಳಾಗಿ ರಾಕ್ಷಸರನ್ನು ಕೂಡಿಕೊಂಡಿರುತ್ತಾರೆ, ಅವರನ್ನು ನೀನು ಸುಟ್ಟುಹಾಕು. ॥ ೫ ॥

೧೧೬. ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।

ಹವ್ಯವಾಡ್ ಜುಹ್ವಾಸ್ಯಃ ॥ ೬ ॥

ಅಗ್ನಿಯು ಅಗ್ನಿಯಿಂದಲೇ ಪ್ರಜ್ವಲನಾಗುತ್ತಾನೆ. ಅಗ್ನಿಯು ಮೇಧಾವಿಯೂ, ಗೃಹರಕ್ಷಕನೂ, ಹವ್ಯವಾಹಕನೂ, ನಿತ್ಯತರುಣನೂ, ಜುಹೂರೂಪವಾದ ಮುಖವುಳ್ಳವನೂ ಆಗಿರುವನು. ॥ ೬ ॥

## [ವರ್ಗ: ೨೩]

೧೧೭. ಕವಿಮಗ್ನಿಮುಪ ಸ್ತುಹಿ ಸತ್ಯಧರ್ಮಾಣಮಧ್ವರೇ ।

ದೇವಮಮೀವಚಾತನಂ ॥ ೭ ॥

ಮೇಧಾವೀ, ಸತ್ಯಧರ್ಮಾ ಮತ್ತು ಶತ್ರುನಾಶಕನಾದ ಅಗ್ನಿಯ ಬಳಿಗೆ ಬಂದು, ಯಜ್ಞಕಾರ್ಯದಲ್ಲಿ ಅವನ ಸ್ತುತಿಮಾಡಿರಿ. ॥ ೭ ॥

೧೧೮. ಯಸ್ತ್ವಾಮಗ್ನೇ ಹವಿಷ್ಪತಿ—ರ್ದೂತಂ ದೇವ ಸಪರ್ಯತಿ ।

ತಸ್ಯ ಸ್ಮ ಪ್ರಾವಿತಾ ಭವ ॥ ೮ ॥

ಅಗ್ನಿಯೇ! ನೀನು ದೇವದೂತನಾಗಿರುವೆ. ನಿನ್ನ ಆರಾಧನೆಯನ್ನು ಮಾಡುವ ಹವ್ಯದಾತಾರನನ್ನು ನೀನು ಚೆನ್ನಾಗಿ ಕಾಪಾಡುತ್ತೀ. ॥ ೮ ॥

೧೧೯. ಯೋ ಅಗ್ನಿಂ ದೇವವೀತಯೇ ಹವಿಷ್ಮಾ ಆವಿವಾಸತಿ ।

ತಸ್ಮೈ ಪಾವಕ ಮೃಳಯ ॥ ೯ ॥

ದೇವತೆಗಳ ಹವ್ಯಭಕ್ಷಣದ ಸಲುವಾಗಿ ಅಗ್ನಿಯ ಹತ್ತರ ಬಂದು ಸಮ್ಯಗ್ ರೀತಿಯಲ್ಲಿ ಆರಾಧನೆಮಾಡುವ ಹವ್ಯದಾತೃಗಳನ್ನು, ಪಾವಕನೇ! ನೀನು ಸಂತೋಷಿಸು. ॥ ೯ ॥

೧೨೦. ಸ ನಃ ಪಾವಕ ದೀದಿವೋ—ಽಗ್ನೇ ದೇವಾँ ಇಹಾ ವಹ ।
ಉಪ ಯಜ್ಞಂ ಹವಿಶ್ಚ ನಃ ॥ ೧೦ ॥

ಪ್ರಕಾಶಮಾನನಾದ ಪಾವಕನೇ! ನಮಗಾಗಿ ದೇವತೆಗಳನ್ನು ಇಲ್ಲಿಗೆ ಕರೆದು ಕೊಂಡು ಬಾರಯ್ಯಾ ಮತ್ತು ದೇವತೆಗಳಿಗಾಗಿ ನಾವು ಮಾಡುವ ಯಜ್ಞ ಮತ್ತು ಹವ್ಯಗಳನ್ನು ತಕ್ಕೊಂಡು ಹೋಗು. ॥ ೧೦ ॥

೧೨೧. ಸ ನಃ ಸ್ತವಾನ ಆ ಭರ ಗಾಯತ್ರೇಣ ನವೀಯಸಾ ।
ರಯಿಂ ವೀರವತೀಮಿಷಂ ॥ ೧೧ ॥

ಅಗ್ನಿಯೇ! ಹೊಸದಾದ ಗಾಯತ್ರೀ-ಛಂದಸ್ಸುಗಳಿಂದ ರಚಿಸಿದ ನಮ್ಮ ಸ್ತುತಿಯಿಂದ ಪ್ರೀತನಾಗಿ ನಮಗೆ ಧನವನ್ನೂ, ವೀರ್ಯಶಾಲಿಯಾದ ಅನ್ನವನ್ನೂ ಕರುಣಿಸಯ್ಯಾ. ॥ ೧೧ ॥

೧೨೨. ಅಗ್ನೇ ಶುಕ್ರೇಣ ಶೋಚಿಷಾ ವಿಶ್ವಾಭಿರ್ದೇವಹೂತಿಭಿಃ ।
ಇಮಂ ಸ್ತೋಮಂ ಜುಷಸ್ವ ನಃ ॥ ೧೨ ॥

ಅಗ್ನಿಯೇ! ನೀನು ಶುಭ್ರ-ಪ್ರಕಾಶ-ಸ್ವರೂಪನೂ, ದೇವತೆಗಳನ್ನು ಆಹ್ವಾನಿಸಲು ಸಾಮರ್ಥ್ಯವುಳ್ಳ ಸ್ತೋತ್ರಗಳಿಂದ ಯುಕ್ತನೂ ಆಗಿರುವೆ; ನಮ್ಮ ಈ ಸ್ತೋತ್ರವನ್ನು ನೀನು ಸ್ವೀಕರಿಸು. ॥ ೧೨ ॥

## ಸೂಕ್ತ: ೧೩

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಮೇಧಾತಿಥಿಯು;
ಛಂದಸ್ಸು: ಗಾಯತ್ರೀ.

### [ವರ್ಗ: ೨೪]

೧೨೩. ಸುಸಮಿದ್ಧೋ ನ ಆ ವಹ ದೇವಾँ ಅಗ್ನೇ ಹವಿಷ್ಮತೇ ।
ಹೋತಃ ಪಾವಕ ಯಕ್ಷಿ ಚ ॥ ೧ ॥

ಸುಸಮಿದ್ಧನಾಮಕ ಅಗ್ನಿಯೇ! ನಮ್ಮ ಯಜಮಾನನ ಬಳಿಗೆ ದೇವತೆಗಳನ್ನು ಕರೆದುಕೊಂಡು ಬಾರಯ್ಯಾ. ಪಾವಕನೇ! ದೇವಾಹ್ವಾನಕಾರಿಯೇ! ಯಜ್ಞದ ಸಂಪಾದನವನ್ನು ಮಾಡು. ॥ ೧ ॥

೧೨೪. ಮಧುಮಂತಂ ತನೂನಪಾದ್ ಯಜ್ಞಂ ದೇವೇಷು ನಃ ಕವೇ ।
ಅದ್ಯಾ ಕೃಣುಹಿ ವೀತಯೇ ॥ ೨ ॥

ಮೇಧಾವಿಯಾದ 'ತನೂನಪಾತ್' ನಾಮಕ ಅಗ್ನಿಯೇ! ನಾವು ಸಾಂಗಗೊಳಿಸಿದ ರಸಭರಿತವಾದ ಯಜ್ಞವನ್ನು ಇಂದು ಉಪಭೋಗಕ್ಕಾಗಿ ದೇವತೆಗಳ ಹತ್ತಿರ ತಕ್ಕೊಂಡು ಹೋಗಯ್ಯಾ. ॥ ೨ ॥

೧೨೫. ನರಾಶಂಸಮಿಹ ಪ್ರಿಯ—ಮಸ್ಮಿನ್ ಯಜ್ಞ ಉಪ ಹ್ವಯೇ ।
ಮಧುಜಿಹ್ವಂ ಹವಿಷ್ಕೃತಂ ॥ ೩ ॥

ಈ ಯಜನದೇಶದಲ್ಲಿ ಜರುಗುವ ಯಜ್ಞದಲ್ಲಿ ಪ್ರಿಯನಾದ, ಮಧುಜಿಹ್ವನಾದ ಮತ್ತು ಹವ್ಯಸಂಪಾದಕನಾದ 'ನರಾಶಂಸ' ನಾಮಕ ಅಗ್ನಿಯನ್ನು ನಾವು ಆಹ್ವಾನಿಸುತ್ತೇವೆ. ॥ ೩ ॥

೧೨೬. ಅಗ್ನೇ ಸುಖತಮೇ ರಥೇ ದೇವಾँ ಈಳಿತ ಆ ವಹ ।
ಅಸಿ ಹೋತಾ ಮನುರ್ಹಿತಃ ॥ ೪ ॥

ನಮ್ಮಿಂದ ಸ್ತುತಿಸಲ್ಪಟ್ಟ ಅಗ್ನಿಯೇ! ಅತ್ಯಂತ ಸುಖಕಾರಕವಾದ ರಥದಲ್ಲಿ ದೇವತೆಗಳನ್ನು ಕರೆದುಕೊಂಡು ಬಾರಯ್ಯಾ. ನೀನು ದೇವಾಹ್ವಾನಕಾರಿಯೂ, ಮಂತ್ರದಿಂದ ಸ್ಥಾಪಿಸಲ್ಪಟ್ಟವನೂ ಆಗಿರುವೆ. ॥ ೪ ॥

೧೨೭. ಸ್ತೃಣೀತ ಬರ್ಹಿರಾನುಷಗ್ ಘೃತಪೃಷ್ಠಂ ಮನೀಷಿಣಃ ।
ಯತ್ರಾಮೃತಸ್ಯ ಚಕ್ಷಣಂ ॥ ೫ ॥

ಬುದ್ಧಿಶಾಲಿಗಳಾದ ಋತ್ವಿಜರೇ! ಪರಸ್ಪರ-ಸಂಬದ್ಧವಾದ ಮತ್ತು ಘೃತದಿಂದ ಆಚ್ಛಾದಿತವಾಗಿ ಅಮೃತನಾದ 'ಬರ್ಹಿ' ಎಂಬ ಹೆಸರಿನ ಅಗ್ನಿಯನ್ನು ವಿಸ್ತರಿಸಿರಿ. ಧರ್ಭೆಗಳಮೇಲೆ ತುಪ್ಪವು ಎಲ್ಲರಿಗೂ ಕಾಣುವಂತಿರಬೇಕು. ॥ ೫ ॥

೧೨೮. ವಿ ಶ್ರಯಂತಾಮೃತಾವೃಧೋ ದ್ವಾರೋ ದೇವೀರಸಶ್ಚತಃ ।
ಅದ್ಯಾ ನೂನಂ ಚ ಯಷ್ಟವೇ ॥ ೬ ॥

ಯಜ್ಞಶಾಲೆಯ ಬಾಗಿಲು ತೆರೆಯಲ್ಪಡಲಿ. ಜನರಹಿತವಾದ ಮತ್ತು ಪ್ರಕಾಶಮಾನವಾದ ಆ ದ್ವಾರವು ಯಜ್ಞಕ್ಕೆ ಪರಿವರ್ಧಕವಾಗಿರುವದು. ಇಂದು ಅವಶ್ಯವಾಗಿ ಯಜ್ಞದ ಸಂಪಾದನೆಯನ್ನು ಮಾಡಲೇಬೇಕು. ॥ ೬ ॥

## [ವರ್ಗ: ೨೫]

೧೨೯. ನಕ್ತೋಷಾಸಾ ಸುಪೇಶಸಾ—ಽಸ್ಮಿನ್ ಯಜ್ಞ ಉಪ ಹ್ವಯೇ ।
ಇದಂ ನೋ ಬರ್ಹಿರಾಸದೇ ॥ ೭ ॥

ಸೌಂದರ್ಯಶಾಲಿನಿಯರಾದ ರಾತ್ರಿ ಮತ್ತು ಉಷೆ ಇವರನ್ನು ಕುಶಗಳ ಮೇಲೆ ಕುಳಿತುಕೊಳ್ಳುವದಕ್ಕೆ ಈ ಯಜ್ಞದಲ್ಲಿ ನಾನು ಆಮಂತ್ರಿಸುತ್ತೇನೆ. ॥ ೭ ॥

೧೩೦. ತಾ ಸುಜಿಹ್ವಾ ಉಪ ಹ್ವಯೇ ಹೋತಾರಾ ದೈವ್ಯಾ ಕವೀ ।
ಯಜ್ಞಂ ನೋ ಯಕ್ಷತಾಮಿಮಂ ॥ ೮ ॥

ಸುಜಿಹ್ವರಾದ, ಮೇಧಾವಿಗಳಾದ ಮತ್ತು ಆಹ್ವಾನಕಾರಿಗಳಾದ ದೈವ್ಯಾ ಹೋತಾರಾಗಳೆಂಬ ದೇವದ್ವಯರನ್ನು ನಾನು ಆಮಂತ್ರಿಸುತ್ತೇನೆ. ಅವರು ನಮ್ಮ ಈ ಯಜ್ಞದ ಸಂಪಾದನವನ್ನು ಮಾಡಲಿ. ॥ ೮ ॥

೧೩೧. ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ ।
ಬರ್ಹಿಃ ಸೀದಂತ್ವಸ್ರಿಧಃ ॥ ೯ ॥

ಸುಖದಾತ್ರಿಯರೂ, ಅವಿನಾಶಿಯರೂ ಆದ ಇಳೆ, ಸರಸ್ವತೀ ಮತ್ತು ಮಹೀ ಮೊದಲಾದ ಮೂರೂ ದೇವಿಯರು ಈ ಹಾಸಿರುವ ದರ್ಭೆಗಳ ಮೇಲೆ ವಿರಾಜಿಸಲಿ. ॥ ೯ ॥

೧೩೨. ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪ ಹ್ವಯೇ ।
ಅಸ್ಮಾಕಮಸ್ತು ಕೇವಲಃ ॥ ೧೦ ॥

ಉತ್ತಮನೂ, ನಾನಾರೂಪಧಾರಿಯೂ ಆದ ತ್ವಷ್ಟಾರನನ್ನು ನಾನು ಯಜ್ಞದಲ್ಲಿ ಆಮಂತ್ರಿಸುತ್ತೇನೆ. ಆ ತ್ವಷ್ಟಾರನು ಕೇವಲ ನಮ್ಮ ಪಕ್ಷದಲ್ಲಿರಲಿ. ॥ ೧೦ ॥

೧೩೩. ಅವ ಸೃಜಾ ವನಸ್ಪತೇ ದೇವ ದೇವೇಭ್ಯೋ ಹವಿಃ ।
ಪ್ರ ದಾತುರಸ್ತು ಚೇತನಂ ॥ ೧೧ ॥

ವನಸ್ಪತಿ–ದೇವನೇ! ದೇವತೆಗಳಿಗೆ ಹವ್ಯವನ್ನು ಸಮರ್ಪಿಸು, ಅಂದರೆ ಹವ್ಯದಾತಾರರಿಗೆ ಪರಮಜ್ಞಾನವು ಲಭಿಸುವದು. ॥ ೧೧ ॥

೧೩೪. ಸ್ವಾಹಾ ಯಜ್ಞಂ ಕೃಣೋತನೇ—ಂದ್ರಾಯ ಯಜ್ವನೋ ಗೃಹೇ ।
ತತ್ರ ದೇವಾँ ಉಪ ಹ್ವಯೇ ॥ ೧೨ ॥

ಇಂದ್ರನಿಗಾಗಿ ಯಜಮಾನನ ಮನೆಯಲ್ಲಿ ಸ್ವಾಹಾಕಾರದಿಂದ ಯಜ್ಞದ ಸಂಪಾದನವನ್ನು ಮಾಡಿರಿ. ಅದೇ ಯಜ್ಞದಲ್ಲಿ ನಾನು ದೇವತೆಗಳನ್ನು ಆಮಂತ್ರಿಸುತ್ತೇನೆ. ॥ ೧೨ ॥

## ಸೂಕ್ತ: ೧೪

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

### [ವರ್ಗ: ೨೬]

೧೩೫. ಐಭಿರಗ್ನೇ ದುವೋ ಗಿರೋ ವಿಶ್ವೇಭಿಃ ಸೋಮಪೀತಯೇ ।
ದೇವೇಭಿರ್ಯಾಹಿ ಯಕ್ಷಿ ಚ ॥ ೧ ॥

ಅಗ್ನಿಯೇ! ಎಲ್ಲ ದೇವತೆಗಳೊಂದಿಗೆ ಸೋಮರಸಪಾನಕ್ಕಾಗಿ ನಮ್ಮ ಪೂಜೆ ಮತ್ತು ಸ್ತುತಿಗಳನ್ನು ಸ್ವೀಕರಿಸಲು ಬಂದು, ನಮ್ಮ ಯಜ್ಞದ ಸಂಪಾದನವನ್ನು ಮಾಡಯ್ಯಾ. ॥ ೧ ॥

೧೩೬. ಆ ತ್ವಾ ಕಣ್ವಾ ಅಹೂಷತ ಗೃಣಂತಿ ವಿಪ್ರ ತೇ ಧಿಯಃ ।
ದೇವೇಭಿರಗ್ನ ಆ ಗಹಿ ॥ ೨ ॥

ಮೇಧಾವಿಯಾದ ಅಗ್ನಿಯೇ! ಕಣ್ವಪುತ್ರರು ನಿನ್ನನ್ನು ಆಮಂತ್ರಿಸುತ್ತಾರೆ; ಅದರೊಡನೆಯೇ ನಿನ್ನ ಕರ್ಮಗಳನ್ನು ಪ್ರಶಂಸಿಸುತ್ತಾರೆ. ದೇವತೆಗಳೊಂದಿಗೆ ಬಾರಯ್ಯಾ. ॥ ೨ ॥

೧೩೭. ಇಂದ್ರವಾಯೂ ಬೃಹಸ್ಪತಿಂ ಮಿತ್ರಾಗ್ನಿಂ ಪೂಷಣಂ ಭಗಂ ।
ಆದಿತ್ಯಾನ್ ಮಾರುತಂ ಗಣಂ ॥ ೩ ॥

ಇಂದ್ರ, ವಾಯು, ಬೃಹಸ್ಪತಿ, ಮಿತ್ರ, ಅಗ್ನಿ, ಪೂಷಾ, ಭಗ, ಆದಿತ್ಯ ಮತ್ತು ಮರುದ್ಗಣ ಇವರಿಗೆ ಅವರವರ ಯಜ್ಞಭಾಗವನ್ನು ಅರ್ಪಿಸಿರಿ. ॥ ೩ ॥

೧೩೮. ಪ್ರ ವೋ ಭ್ರಿಯಂತ ಇಂದವೋ ಮತ್ಸರಾ ಮಾದಯಿಷ್ಣವಃ ।
ದ್ರಪ್ಸಾ ಮಧ್ವಶ್ಚಮೂಷದಃ ॥ ೪ ॥

ನಿಮ್ಮ ಸಲುವಾಗಿ ತೃಪ್ತಿಕರವಾದ, ಪ್ರಸನ್ನತಾ-ಜನಕವಾದ, ಬಿಂದು ರೂಪವಾದ, ಮಧುರವಾದ ಮತ್ತು ಪಾತ್ರಸ್ಥಿತವಾದ ಸೋಮರಸವು ಸಿದ್ಧವಾಗುತ್ತಿದೆ. ॥ ೪ ॥

೧೩೯. ಈಳತೇ ತ್ವಾಮವಸ್ಯವಃ ಕಣ್ವಾಸೋ ವೃಕ್ತಬರ್ಹಿಷಃ ।
ಹವಿಷ್ಮಂತೋ ಅರಂಕೃತಃ ॥ ೫ ॥

ಅಗ್ನಿಯೇ! ಹವ್ಯಸಂಯುಕ್ತರಾಗಿ ವಿಭೂಷಿತರಾಗಿರುವ ಕಣ್ವಪುತ್ರರು ದರ್ಭೆಗಳನ್ನು ತುಂಡರಿಸಿ ನಿನ್ನಿಂದ ರಕ್ಷಣೆ ಪಡೆಯುವ ಅಭಿಲಾಷೆಯಿಂದ ನಿನ್ನ ಸ್ತುತಿಯನ್ನು ಹಾಡುತ್ತಿರುವರು. ॥ ೫ ॥

೧೪೦. ಘೃತಪೃಷ್ಠಾ ಮನೋಯುಜೋ ಯೇ ತ್ವಾ ವಹಂತಿ ವಹ್ನಯಃ ।
ಆ ದೇವಾಂತ್ಸೋಮಪೀತಯೇ ॥ ೬ ॥

ಅಗ್ನಿಯೇ! ಸಂಕಲ್ಪಮಾತ್ರದಿಂದಲೇ ನಿನ್ನ ರಥದಲ್ಲಿ ಹೂಡಲ್ಪಡುವ ದೀಪ್ತಿಶಾಲಿಯಾದ ಪೃಷ್ಠವಾಹಕರ ಸಹಾಯದಿಂದ ದೇವತೆಗಳನ್ನು ಸೋಮರಸಪಾನಕ್ಕಾಗಿ ಆಮಂತ್ರಿಸು. ॥ ೬ ॥

## [ವರ್ಗಃ ೨೭]

೧೪೧. ತಾನ್ ಯಜತ್ರಾ ಋತಾವೃಧೋಽಗ್ನೇ ಪತ್ನೀವತಸ್ಕೃಧಿ ।
ಮಧ್ವಃ ಸುಜಿಹ್ವ ಪಾಯಯ ॥ ೭ ॥

ಅಗ್ನಿಯೇ! ಪೂಜನೀಯರಾದ ಮತ್ತು ಸಪತ್ನೀಕರಾದ ದೇವತೆಗಳನ್ನು ಕರೆದುತಂದು ನಮ್ಮ ಯಜ್ಞವನ್ನು ವರ್ಧಿಸು. ಸುಜಿಹ್ವನೇ! ದೇವತೆಗಳಿಗೆ ಮಧುರವಾದ ಸೋಮರಸವನ್ನು ಕುಡಿಸು. ॥ ೭ ॥

೧೪೨. ಯೇ ಯಜತ್ರಾ ಯ ಈಡ್ಯಾಸ್ ತೇ ತೇ ಪಿಬಂತು ಜಿಹ್ವಯಾ ।
ಮಧೋರಗ್ನೇ ವಷಟ್ಕೃತಿ ॥ ೮ ॥

ಯಜನೀಯರೂ, ಸ್ತುತಿಪಾತ್ರರೂ ಆದ ದೇವತೆಗಳು ವಷಟ್‌ಕಾರಕಾಲದಲ್ಲಿ, ಅಗ್ನಿಯೇ! ನಿನ್ನ ರಸನೆಯ ಮೂಲಕವಾಗಿ ಸೋಮರಸಪಾನಮಾಡಲಿ. ॥ ೮ ॥

೧೪೩. ಆಕೀಂ ಸೂರ್ಯಸ್ಯ ರೋಚನಾದ್ ವಿಶ್ವಾಂದೇವಾँ ಉಷರ್ಬುಧಃ ।
ವಿಪ್ರೋ ಹೋತೇಹ ವಕ್ಷತಿ ॥ ೯ ॥

ಮೇಧಾವಿಯೂ, ದೇವತೆಗಳನ್ನು ಆಮಂತ್ರಿಸುವವನೂ ಆದ ಅಗ್ನಿಯು ಉಷಃಕಾಲದಲ್ಲಿ ಜಾಗ್ರತರಾದ ಎಲ್ಲ ದೇವತೆಗಳನ್ನು ಸೂರ್ಯಪ್ರಕಾಶಿತವಾದ ಸ್ವರ್ಗಲೋಕದಿಂದ ಈ ಸ್ಥಳಕ್ಕೆ ನಿಶ್ಚಯವಾಗಿ ತರಲಿ. ॥ ೯ ॥

೧೪೪. ವಿಶ್ವೇಭಿಃ ಸೋಮ್ಯಂ ಮಧ್ವ—ಽಗ್ನ ಇಂದ್ರೇಣ ವಾಯುನಾ ।
ಪಿಬಾ ಮಿತ್ರಸ್ಯ ಧಾಮಭಿಃ ॥ ೧೦ ॥

ಅಗ್ನಿಯೇ! ನೀನು ಸಮಸ್ತ ದೇವತೆ, ಇಂದ್ರ, ವಾಯು ಮತ್ತು ಮಿತ್ರ ಇವರೆಲ್ಲರ ತೇಜಃಪುಂಜದೊಂದಿಗೆ ಮಧುರವಾದ ಸೋಮರಸವನ್ನು ಪಾನ ಮಾಡು. ॥ ೧೦ ॥

೧೪೫. ತ್ವಂ ಹೋತಾ ಮನುರ್ಹಿತೋ—ಽಗ್ನೇ ಯಜ್ಞೇಷು ಸೀದಸಿ ।
ಸೇಮಂ ನೋ ಅಧ್ವರಂ ಯಜ ॥ ೧೧ ॥

ಅಗ್ನಿಯೇ! ಮಾನವಸಂಚಾಲಿತವಾದ ಮತ್ತು ದೇವತೆಗಳನ್ನು ಆಮಂತ್ರಿಸುವ ಯಜ್ಞದಲ್ಲಿ ಆಸೀನನಾಗಿರುವ ನೀನು ನಮ್ಮ ಯಜ್ಞದ ಸಂಪಾದನ ಮಾಡಯ್ಯಾ. ॥ ೧೧ ॥

೧೪೬. ಯುಕ್ಷ್ವಾ ಹ್ಯರುಷೀ ರಥೇ ಹರಿತೋ ದೇವ ರೋಹಿತಃ ।
ತಾಭಿರ್ದೇವಾँ ಇಹಾ ವಹ ॥ ೧೨ ॥

ಅಗ್ನಿಯೇ! ಶೀಘ್ರಗಾಮಿಗಳೂ, ವಹನಸಮರ್ಥವೂ ಆದ 'ರೋಹಿತ'ವೆಂಬ ಹೆಸರಿನ ಕುದುರೆಗಳನ್ನು ರಥಕ್ಕೆ ಹೂಡಿ, ಅವುಗಳ ಸಹಾಯದಿಂದ ದೇವತೆಗಳನ್ನು ಈ ಯಜ್ಞದಲ್ಲಿ ಕರೆದುತಾರಯ್ಯಾ. ॥ ೧೨ ॥

## ಸೂಕ್ತ: ೧೫

**ಈ ಸೂಕ್ತದ ದೇವತೆ: ಋತುಗಳು; ಋಷಿ: ಮೇಧಾತಿಥಿಯು; ಛಂದಸ್ಸು: ಗಾಯತ್ರೀ.**

### [ವರ್ಗ: ೨೮]

೧೪೭. ಇಂದ್ರ ಸೋಮಂ ಪಿಬ ಋತುನಾಽಽತ್ವಾ ವಿಶಂತ್ವಿಂದವಃ ।
ಮತ್ಸರಾಸಸ್ತದೋಕಸಃ ॥ ೧ ॥

ಇಂದ್ರನೇ! ಋತುಗಳೊಡನೆ ಸೋಮರಸವನ್ನು ಪಾನಮಾಡಯ್ಯಾ. ತೃಪ್ತಿಕರವೂ, ಆಶ್ರಯ-ಯೋಗ್ಯವೂ ಆದ ಸೋಮರಸವು ನಿನಗೆ ಪ್ರಾಪ್ತವಾಗಲಿ. ॥ ೧ ॥

೧೪೮. ಮರುತಃ ಪಿಬತ ಋತುನಾ ಪೋತ್ರಾದ್ ಯಜ್ಞಂ ಪುನೀತನ ।
ಯೂಯಂ ಹಿ ಷ್ಠಾ ಸುದಾನವಃ ॥ ೨ ॥

ಮರುತ್ತುಗಳೇ! ಋತುಗಳೊಡನೆ 'ಪೋತೃ'ನಾಮದ ಋತ್ವಿಜನ ಪಾತ್ರೆಯಿಂದ ಸೋಮಪಾನಮಾಡಿರಿ. ನಮ್ಮ ಯಜ್ಞವನ್ನು ಪವಿತ್ರಗೊಳಿಸಿರಿ. ನಿಜವಾಗಿಯೂ ನೀವು ದಾನ-ಪರಾಯಣರಾಗಿರುವಿರಿ. ॥ ೨ ॥

೧೪೯. ಅಭಿ ಯಜ್ಞಂ ಗೃಣೀಹಿ ನೋ ಗ್ನಾವೋ ನೇಷ್ಟಃ ಪಿಬ ಋತುನಾ ।
ತ್ವಂ ಹಿ ರತ್ನಧಾ ಅಸಿ

ಪತ್ನೀಸಮೇತನಾದ ತ್ವಷ್ಟಾರನೇ! ದೇವತೆಗಳೊಂದಿಗೆ ಬಂದು ನಮ್ಮ ಯಜ್ಞದ ಪ್ರಶಂಸೆಯನ್ನು ಮಾಡು. ನೀನು ನಮಗೆ ರತ್ನಗಳನ್ನು ತಂದುಕೊಡುತ್ತೀಯಾದ್ದರಿಂದ ಋತುಗಳೊಡನೆ ಸೋಮರಸವನ್ನು ಪಾನಮಾಡು. ॥ ೩ ॥

೧೫೦. ಅಗ್ನೇ ದೇವಾँ ಇಹಾ ವಹ ಸಾದಯಾ ಯೋನಿಷು ತ್ರಿಷು ।
ಪರಿ ಭೂಷ ಪಿಬ ಋತುನಾ ॥ ೪ ॥

ಅಗ್ನಿಯೇ! ದೇವತೆಗಳನ್ನು ಇಲ್ಲಿಗೆ ಆಮಂತ್ರಿಸಿ, ಮೂರು ಯಜ್ಞಸ್ಥಳಗಳಲ್ಲಿ ಅವರನ್ನು ಕುಳ್ಳಿರಿಸು. ಅವರನ್ನು ಅಲಂಕರಿಸಿ ಋತುಗಳೊಡನೆ ನೀನು ಸೋಮರಸವನನ್ನು ಪಾನಮಾಡು. ॥ ೪ ॥

೧೫೧. ಬ್ರಾಹ್ಮಣಾದಿಂದ್ರ ರಾಧಸಃ ಪಿಬಾ ಸೋಮಮೃತೂँರನು ।
ತವೇದ್ಧಿ ಸಖ್ಯಮಸ್ತೃತಂ ॥ ೫ ॥

ಇಂದ್ರನೇ! ಬ್ರಾಹ್ಮಣಾಚ್ಛಂಸೀ ಎಂಬ ಋತ್ವಿಜನ ಅಮೂಲ್ಯವಾದ ಪಾತ್ರೆಯಿಂದ, ಋತುಗಳ ತರುವಾಯ, ನೀನು ಸೋಮರಸವನ್ನು ಪಾನಮಾಡು, ಯಾಕೆಂದರೆ ನಿಮ್ಮ ನಿಮ್ಮೊಳಗಿನ ಗೆಳೆತನವು ಅಖಂಡವಾಗಿರುದದು. ॥ ೫ ॥

೧೫೨. ಯುವಂ ದಕ್ಷಂ ಧೃತವ್ರತ ಮಿತ್ರಾವರುಣ ದೂಳಭಂ ।
ಋತುನಾ ಯಜ್ಞಮಾಶಾಥೇ ॥ ೬ ॥

ವ್ರತಧಾರಿಯಾದ ಮಿತ್ರನೇ! ಮತ್ತು ವರುಣನೇ! ನೀವಿಬ್ಬರೂ ಋತುಗಳೊಂದಿಗೆ ಈ ಪ್ರವೃದ್ಧವಾದ ಮತ್ತು ಶತ್ರುಗಳಿಗೆ ಅದಹನೀಯವಾದ ಯಜ್ಞದಲ್ಲಿ ವ್ಯಾಪ್ತರಾಗಿರುವಿರಿ. ॥ ೬ ॥

## [ವರ್ಗ: ೨೯]

೧೫೩. ದ್ರವಿಣೋದಾ ದ್ರವಿಣಸೋ ಗ್ರಾವಹಸ್ತಾಸೋ ಅಧ್ವರೇ ।
ಯಜ್ಞೇಷು ದೇವಮೀಳತೇ ॥ ೭ ॥

ನಾನಾವಿಧವಾದ ಯಜ್ಞಗಳಲ್ಲಿ ಧನಾಭಿಲಾಷಿಯಾದ ಋತ್ವಿಜರು ಸೋಮರಸವನ್ನು ತಯಾರಿಸಲೋಸುಗ ಕೈಯಲ್ಲಿ ಕಲ್ಲನ್ನು ಹಿಡಿದು, ಧನಪ್ರದನಾದ ಅಗ್ನಿಯನ್ನು ಸ್ತುತಿಸುತ್ತಾರೆ. ॥ ೭ ॥

೧೫೪. ದ್ರವಿಣೋದಾ ದದಾತು ನೋ ವಸೂನಿ ಯಾನಿ ಶೃಣ್ವಿರೇ ।
ದೇವೇಷು ತಾ ವನಾಮಹೇ ॥ ೮ ॥

ಯಾವ ಸಂಪತ್ತುಗಳನ್ನು ನಾವು ದಂತಕಥೆಯಲ್ಲಿ ಕೇಳಿರುವೆವೋ, ಆ ಎಲ್ಲ ಸಂಪತ್ತುಗಳನ್ನು ಧನಪ್ರದನಾದ ಅಗ್ನಿಯು ನಮಗೆ ಕೊಡಲಿ, ಅಂದರೆ ಅವೆಲ್ಲವನ್ನೂ ನಾವು ದೇವಯಜ್ಞಕ್ಕಾಗಿ ಸ್ವೀಕರಿಸುವೆವು. ॥ ೮ ॥

೧೫೫. ದ್ರವಿಣೋದಾಃ ಪಿಪೀಷತಿ ಜುಹೋತ ಪ್ರ ಚ ತಿಷ್ಠತ ।
ನೇಷ್ಟ್ರಾದೃತುಭಿರಿಷ್ಯತ ॥ ೯ ॥

ದ್ರವಿಣೋದಸನು (ಅಗ್ನಿಯು), ಋತುಗಳೊಂದಿಗೆ, ತ್ವಷ್ಟಾರನ ಪಾತ್ರೆಯಿಂದ ಸೋಮವನ್ನು ಕುಡಿಯಲು ಇಚ್ಛಿಸುತ್ತಾನೆ. ಋತ್ವಿಜರೇ! ಯಜ್ಞದಲ್ಲಿ ಬನ್ನಿರಿ, ಹೋಮವನ್ನು ಸಾಂಗಮಾಡಿರಿ, ಆ ಮೇಲೆ ನಿಮ್ಮ ನಿಮ್ಮ ಸ್ಥಾನಗಳಿಗೆ ತೆರಳಿರಿ. ॥ ೯ ॥

೧೫೬. ಯತ್ ತ್ವಾ ತುರೀಯಮೃತುಭಿ-ರ್ದ್ರವಿಣೋದೋ ಯಜಾಮಹೇ ।
ಅಧ ಸ್ಮಾ ನೋ ದದಿರ್ಭವ ॥ ೧೦ ॥

ದ್ರವಿಣೋದಸನೇ! ಋತುಗಳೊಂದಿಗೆ ನಿನ್ನನ್ನು ನಾಲ್ಕನೇ ಸಲ ಪೂಜಿಸುವೆನಾದ್ದರಿಂದ ನನಗೆ ಅವಶ್ಯವಾಗಿ ಧನದಾನಮಾಡಯ್ಯಾ. ॥ ೧೦ ॥

೧೫೭. ಅಶ್ವಿನಾ ಪಿಬತಂ ಮಧು ದೀದ್ಯಗ್ನೀ ಶುಚಿವ್ರತಾ ।
ಋತುನಾ ಯಜ್ಞವಾಹಸಾ ॥ ೧೧ ॥

ಪ್ರಕಾಶಮಾನನಾದ ಅಗ್ನಿಯಿಂದ ಕೂಡಿದ ಮತ್ತು ವಿಶುದ್ಧವಾದ ಕರ್ಮಗಳನ್ನಾಚರಿಸುವ ಅಶ್ವಿನೀಕುಮಾರದ್ವಯರೇ! ಮಧುರವಾದ ಸೋಮರಸವನ್ನು ಕುಡಿಯಿರಿ. ಋತುಗಳೊಡನೆ ನೀವೇ ಯಜ್ಞದ ನಿರ್ವಾಹಕರಾಗಿರುವಿರಿ. ॥ ೧೧ ॥

೧೫೮. ಗಾರ್ಹಪತ್ಯೇನ ಸಂತ್ಯ ಋತುನಾ ಯಜ್ಞನೀರಸಿ ।
ದೇವಾನ್ ದೇವಯತೇ ಯಜ ॥ ೧೨ ॥

ಗೃಹಪತಿಯಾದ, ಸುಂದರನಾದ ಮತ್ತು ಫಲಪ್ರದನಾದ ಅಗ್ನಿಯೇ! ಋತುಗಳೊಡನೆ ನೀನೇ ಯಜ್ಞದ ನಿರ್ವಾಹಕನಾಗಿರುವೆಯಾದ್ದರಿಂದ ದೇವಾಭಿಲಾಷಿಯಾದ ಯಜಮಾನನಿಗಾಗಿ ದೇವತೆಗಳನ್ನು ಪೂಜಿಸಯ್ಯಾ. ॥ ೧೨ ॥

## ಸೂಕ್ತ: ೧೬

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

### [ವರ್ಗ: ೩೦]

೧೫೯. ಆ ತ್ವಾ ವಹಂತು ಹರಯೋ ವೃಷಣಂ ಸೋಮಪೀತಯೇ ।
ಇಂದ್ರ ತ್ವಾ ಸೂರಚಕ್ಷಸಃ ॥ ೧ ॥

ಯಥೇಪ್ಸಿತ-ವರ್ಷಕನಾದ ಇಂದ್ರನೇ! ನಿನ್ನ ಕುದುರೆಗಳು ನಿನ್ನನ್ನು ಸೋಮಪಾನಮಾಡಿಸುವದಕ್ಕಾಗಿ ಇಲ್ಲಿಗೆ ತರಲಿ. ಸೂರ್ಯನಂತೆ ಪ್ರಕಾಶಯುತರಾದ ಋತ್ವಿಜರು ಮಂತ್ರಗಳಿಂದ ನಿನ್ನನ್ನು ಪ್ರಕಟಿಸಲಿ. ॥ ೧ ॥

೧೬೦. ಇಮಾ ಧಾನಾ ಘೃತಸ್ನುವೋ ಹರೀ ಇಹೋಪ ವಕ್ಷತಃ ।
ಇಂದ್ರಂ ಸುಖತಮೇ ರಥೇ ॥ ೨ ॥

'ಹರಿ' ನಾಮಧೇಯವುಳ್ಳ ಎರಡೂ ಕುದುರೆಗಳು ತುಪ್ಪವನ್ನೊಸರುವ ಧಾನ್ಯದ ಹತ್ತರ ಸುಖಾವಹವಾದ ರಥದಲ್ಲಿ ಇಂದ್ರನನ್ನು ತರಲಿ. ॥ ೨ ॥

೧೬೧. ಇಂದ್ರಂ ಪ್ರಾತರ್ಹವಾಮಹ ಇಂದ್ರಂ ಪ್ರಯತ್ಯಧ್ವರೇ ।
ಇಂದ್ರಂ ಸೋಮಸ್ಯ ಪೀತಯೇ ॥ ೩ ॥

ಪ್ರಾತಃಕಾಲದಲ್ಲಿ ನಾವು ಚಿರಯುವಕನಾದ ಇಂದ್ರನನ್ನು ಸ್ಮರಿಸುತ್ತೇವೆ, ಯಜ್ಞ-ಸಂಪಾದನಸಮಯದಲ್ಲಿ ಶತಕ್ರತುವಾದ ಇಂದ್ರನನ್ನು ಸ್ತುತಿಸುತ್ತೇವೆ ಮತ್ತು ಯಜ್ಞಸಮಾಪ್ತಿಯ ವೇಳೆಯಲ್ಲಿ ಸೋಮಪಾನಕ್ಕಾಗಿ ಧನದನಾದ ಇಂದ್ರನನ್ನು ಆಹ್ವಾನಿಸುತ್ತೇವೆ. ॥ ೩ ॥

೧೬೨. ಉಪ ನಃ ಸುತಮಾ ಗಹಿ ಹರಿಭಿರಿಂದ್ರ ಕೇಶಿಭಿಃ ।
ಸುತೇ ಹಿ ತ್ವಾ ಹವಾಮಹೇ ॥ ೪ ॥

ಇಂದ್ರನೇ! ಕೇಸರಯುಕ್ತವಾದ ಅಶ್ವಗಳೊಂದಿಗೆ ನೀನು ನಮ್ಮಿಂದ ಸಂಸ್ಕೃತವಾದ ಸೋಮರಸದ ಸನಿಯಕ್ಕೆ ಬಾರಯ್ಯಾ. ಸೋಮರಸವು ಸಿದ್ಧವಾದ ಮೇಲೆ ನಾವು ನಿನ್ನನ್ನು ಆಹ್ವಾನಿಸುತ್ತೇವೆ. ॥ ೪ ॥

೧೬೩. ಸೇಮಂ ನಃ ಸ್ತೋಮಮಾ ಗ—ಹ್ಯುಪೇದಂ ಸವನಂ ಸುತಂ ।
ಗೌರೋ ನ ತೃಷಿತಃ ಪಿಬ ॥ ೫ ॥

ಇಂದ್ರನೇ! ಯಜ್ಞಸವನವಾದ ಸೋಮರಸವು ಸಿದ್ಧವಾಗಿರುವದರಿಂದ, ತೃಷಿತವಾದ ಶ್ವೇತಮೃಗವು ತನ್ನ ತೃಷೆಯನ್ನು ನೀಗಿಕೊಳ್ಳಲು ತ್ವರಿತವಾಗಿ ಬರುವಂತೆ, ನೀನು ನಮ್ಮ ಯಜ್ಞದಲ್ಲಿ ಬಂದು, ನಾವು ಮಾಡುವ ಸ್ತುತಿಯನ್ನು ಸ್ವೀಕರಿಸು. ॥ ೫ ॥

## [ವರ್ಗಃ ೩೧]

೧೬೪. ಇಮೇ ಸೋಮಾಸ ಇಂದವಃ ಸುತಾಸೋ ಅಧಿ ಬರ್ಹಿಷಿ ।
ತಾಁ ಇಂದ್ರ ಸಹಸೇ ಪಿಬ ॥ ೬ ॥

ಈ ತರಲವಾದ ಸೋಮರಸವು ಹಾಸಿದ ಕುಶಗಳ ಮೇಲೆ ಸಾಕಷ್ಟು ಅಭಿಷುತವಾಗಿರುವದರಿಂದ, ಇಂದ್ರನೇ! ಬಲವರ್ಧನೆಗಾಗಿ ಈ ಸೋಮರಸವನ್ನು ಪಾನಮಾಡು. ॥ ೬ ॥

೧೬೫. ಅಯಂ ತೇ ಸ್ತೋಮೋ ಅಗ್ರಿಯೋ ಹೃದಿಸ್ಪೃಗಸ್ತು ಶಂತಮಃ ।
ಅಥಾ ಸೋಮಂ ಸುತಂ ಪಿಬ ॥ ೭ ॥

ಇಂದ್ರನೇ! ಈ ಸ್ತುತಿಯು ಶ್ರೇಷ್ಠವಾಗಿರುವದರಿಂದ ನಿನಗೆ ಹೃದಯಸ್ಪರ್ಶಿಯೂ, ಸುಖಕರವೂ ಆಗಿರುವದು. ಈ ಸ್ತುತಿಯನ್ನು ಕೇಳಿ ಸಂಸ್ಕೃತವಾದ ಸೋಮರಸವನ್ನು ಪಾನಮಾಡು. ॥ ೭ ॥

೧೬೬. ವಿಶ್ವಮಿತ್ಸವನಂ ಸುತ--ಮಿಂದ್ರೋ ಮದಾಯ ಗಚ್ಛತಿ ।
ವೃತ್ರಹಾ ಸೋಮಪೀತಯೇ ॥ ೮ ॥

ವೃತ್ರಾಸುರನನ್ನು ಸಂಹರಿಸಿದ ಇಂದ್ರನು ಸೋಮಪಾನಕ್ಕಾಗಿಯೂ, ಪ್ರಸನ್ನತೆಗಾಗಿಯೂ, ಸೋಮರಸಯುಕ್ತವಾದ ಎಲ್ಲ ಯಜ್ಞಗಳಿಗೆ ದಯಪಾಲಿಸುವನು. ॥ ೮ ॥

೧೬೭. ಸೇಮಂ ನಃ ಕಾಮಮಾ ಪೃಣ ಗೋಭಿರಶ್ವೈಃ ಶತಕ್ರತೋ ।
ಸ್ತವಾಮ ತ್ವಾ ಸ್ವಾಧ್ಯಃ ॥ ೯ ॥

ನೂರು ಯಜ್ಞಗಳನ್ನು ಮಾಡಿದ ಇಂದ್ರನೇ! ಧನ-ಧಾನ್ಯ-ಅಶ್ವಗಳಿಂದ ನೀನು ನಮ್ಮ ಎಲ್ಲ ಬಯಕೆಗಳನ್ನು ನೆರವೇರಿಸಯ್ಯಾ. ನಾವಾದರೂ ಧ್ಯಾನಸ್ಥರಾಗಿ ನಿನ್ನನ್ನು ಸ್ತುತಿಸುವೆವು. ॥ ೯ ॥

## ಸೂಕ್ತ: ೧೭

ಈ ಸೂಕ್ತದ ದೇವತೆ: ಇಂದ್ರನು ಮತ್ತು ವರುಣನು; ಋಷಿ: ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

### [ವರ್ಗ: ೩೨]

೧೬೮. ಇಂದ್ರಾವರುಣಯೋರಹಂ ಸಮ್ರಾಜೋರವ ಆ ವೃಣೇ ।
ತಾ ನೋ ಮೃಳಾತ ಈದೃಶೇ ॥ ೧ ॥

ರಾಜಾಧಿರಾಜನಾದ ಇಂದ್ರ ಮತ್ತು ವರುಣ ಇವರೀರ್ವರಲ್ಲಿ, ಸ್ವರಕ್ಷಣೆಗಾಗಿ, ಪ್ರಾರ್ಥನೆಯನ್ನು ಸಲ್ಲಿಸುತ್ತೇನೆ. ಈ ಪ್ರಕಾರ ಪ್ರಾರ್ಥಿಸುವದರಿಂದ ಇವರಿಬ್ಬರೂ ಪ್ರೀತರಾಗಿ ನಮಗೆ ಸುಖವನ್ನು ಕೊಡಲಿ. ॥ ೧ ॥

೧೬೯. ಗಂತಾರಾ ಹಿ ಸ್ಥೋಽವಸೇ ಹವಂ ವಿಪ್ರಸ್ಯ ಮಾವತಃ ।
ಧರ್ತಾರಾ ಚರ್ಷಣೀನಾಂ ॥ ೨ ॥

ಇಂದ್ರಾವರುಣರೇ! ನನ್ನಂತಹ ಪುರೋಹಿತರ ರಕ್ಷಣೆಗಾಗಿ ನಾನು ಮಾಡುವ ಆಹ್ವಾನವನ್ನು ಸ್ವೀಕರಿಸಿರಿ. ಯಾಕೆಂದರೆ ನೀವು ಮಾನವರ ಸ್ವಾಮಿಗಳಾಗಿರುವಿರಿ. ॥ ೨ ॥

೧೭೦. ಅನುಕಾಮಂ ತರ್ಪಯೇಥಾ-ಮಿಂದ್ರಾವರುಣ ರಾಯ ಆ ।
ತಾ ವಾಂ ನೇದಿಷ್ಠಮೀಮಹೇ ॥ ೩ ॥

ಇಂದ್ರಾವರುಣರೇ! ನಮ್ಮ ಮನೋರಥದಂತೆ ನಮಗೆ ಹಣವನ್ನಿತ್ತು ನಮ್ಮನ್ನು ತೃಪ್ತಗೊಳಿಸಿರಿ. ಯಾವಾಗಲೂ ನೀವು ನಮ್ಮ ಹತ್ತಿರವೇ ಇರಬೇಕೆಂದು ನಾವು ಇಚ್ಛಿಸುತ್ತೇವೆ. ॥ ೩ ॥

೧೭೧. ಯುವಾಕು ಹಿ ಶಚೀನಾಂ ಯುವಾಕು ಸುಮತೀನಾಂ ।
ಭೂಯಾಮ ವಾಜದಾವ್ನಾಂ ॥ ೪ ॥

ನಾವು ಮಾಡುವ ಯಜ್ಞದಲ್ಲಿ ಹವ್ಯವೂ, ಋತ್ವಿಜರ ಸ್ತೋತ್ರಗಳೂ ಸಮ್ಮಿಲಿತವಾಗಿರುವದರಿಂದ, ನಾವು ಅನ್ನ-ದಾತೃಗಳಲ್ಲಿ ಅಗ್ರಣಿಗಳಾಗಿ ಮೆರೆಯುವಂತೆ ಕರುಣಿಸಿರಿ. ॥ ೪ ॥

೧೭೨. ಇಂದ್ರಃ ಸಹಸ್ರದಾವ್ನಾಂ ವರುಣಃ ಶಂಸ್ಯಾನಾಂ ।
ಕ್ರತುರ್ಭವತ್ಯುಕ್ಥ್ಯಃ ॥ ೫ ॥

ಅಸಂಖ್ಯ ಧನದಾತೃಗಳಲ್ಲಿ ದ್ರವಿಣೋದಸನಾದ ಇಂದ್ರನೇ ಶ್ರೇಷ್ಠನು ಮತ್ತು ಸ್ತವನೀಯರಾದ ದೇವತೆಗಳಲ್ಲಿ ಸ್ತುತಿಪಾತ್ರನಾದ ವರುಣನೇ ಶ್ರೇಷ್ಠನು. ॥ ೫ ॥

## [ವರ್ಗಃ ೩೩]

೧೭೩. ತಯೋರಿದವಸಾ ವಯಂ ಸನೇಮ ನಿ ಚ ಧೀಮಹಿ ।
ಸ್ಯಾದುತ ಪ್ರರೇಚನಂ ॥ ೬ ॥

ಇವರಿಬ್ಬರ ರಕ್ಷಣೆಯಿಂದಲೇ ನಮ್ಮಲ್ಲಿ ಯಥೇಷ್ಟವಾಗಿ ಧನವು ಬಂದು, ಆ ಧನದ ಸದುಪಯೋಗವೂ, ಸಂಚಯವೂ ಆಗಲಿ. ॥ ೬ ॥

೧೭೪. ಇಂದ್ರಾವರುಣ ವಾಮಹಂ ಹುವೇ ಚಿತ್ರಾಯ ರಾಧಸೇ ।
ಅಸ್ಮಾಂತ್ಸು ಜಿಗ್ಯುಷಸ್ಕೃತಂ ॥ ೭ ॥

ಇಂದ್ರನೇ! ಮತ್ತು ವರುಣನೇ! ವಿವಿಧವಾದ ಸಂಪತ್ತಿಗಾಗಿ ನಾನು ನಿಮ್ಮನ್ನು ಆಹ್ವಾನಿಸುತ್ತೇನೆ; ನನ್ನನ್ನು ವಿಜಯಿಯನ್ನಾಗಿ ಮಾಡಿರಿ. ॥ ೭ ॥

೧೭೫. ಇಂದ್ರಾವರುಣ ನೂ ನು ವಾಂ ಸಿಷಾಸಂತೀಷು ಧೀಷ್ವಾ ।
ಅಸ್ಮಭ್ಯಂ ಶರ್ಮ ಯಚ್ಛತಂ ॥ ೮ ॥

ಇಂದ್ರನೇ! ಮತ್ತು ವರುಣನೇ! ನಿಮ್ಮ ಸೇವೆಯನ್ನು ಚೆನ್ನಾಗಿ ಮಾಡಲು ನಮ್ಮೊಬುದ್ಧಿಯು ಲವಲವಿಸುತ್ತಿದೆ; ನಮಗೆ ಶೀಘ್ರವಾಗಿ ಸುಖವು ದೊರಕುವಂತೆ ಅನುಗ್ರಹಿಸಿರಿ. ॥ ೮ ॥

೧೭೬. ಪ್ರ ವಾಮಶ್ನೋತು ಸುಷ್ಟುತಿ—ರಿಂದ್ರಾವರುಣ ಯಾಂ ಹುವೇ ।
ಯಾಮೃಧಾಥೇ ಸಧಸ್ತುತಿಂ ॥ ೯ ॥

ಇಂದ್ರನೇ! ಮತ್ತು ವರುಣನೇ! ಯಾವ ಸ್ತುತಿಯಿಂದ ನಾವು ನಿಮ್ಮನ್ನು ಆಹ್ವಾನಿಸುತ್ತೇವೋ, ನಮ್ಮ ಯಾವ ಸ್ತುತಿಯನ್ನು ನೀವು ಪರಿವರ್ಧಿಸುತ್ತೀರೋ, ಅದೇ ಸುಶೋಭನವಾದ ಸ್ತುತಿಯು ನಿಮಗೆ ಪ್ರಾಪ್ತವಾಗಲಿ. ॥ ೯ ॥

# ಐದನೇ ಅನುವಾಕ

## ಸೂಕ್ತ: ೧೮

ಈ ಸೂಕ್ತದ ದೇವತೆ: ಬ್ರಹ್ಮಣಸ್ಪತಿ ಮುಂತಾದವರು; ಋಷಿ: ಕಣ್ವಪುತ್ರನಾದ ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

### [ವರ್ಗ: ೩೪]

೧೭೮. ಸೋಮಾನಂ ಸ್ವರಣಂ ಕೃಣುಹಿ ಬ್ರಹ್ಮಣಸ್ಪತೇ ।
ಕಕ್ಷೀವಂತಂ ಯ ಔಶಿಜಃ ॥ ೧ ॥

ಬ್ರಹ್ಮಣಸ್ಪತಿಯೇ! ಉಶಿಜ-ಪುತ್ರನಾದ ಕಕ್ಷೀವಂತನಂತೆ ಸೋಮರಸ ದಾತಾರನಾದ ನನ್ನನ್ನು ದೇವತೆಗಳಲ್ಲಿ ಪ್ರಸಿದ್ಧಪಡಿಸು. ॥ ೧ ॥

೧೭೯. ಯೋ ರೇವಾನ್ ಯೋ ಅಮೀವಹಾ ವಸುವಿತ್ ಪುಷ್ಟಿವರ್ಧನಃ ।
ಸ ನಃ ಸಿಷಕ್ತು ಯಸ್ತುರಃ ॥ ೨ ॥

ಸಂಪತ್ತಿಶಾಲಿಯೂ, ರೋಗನಾಶಕನೂ, ಧನದಾತಾರನೂ, ಪುಷ್ಟಿವರ್ಧಕನೂ, ಶೀಘ್ರ-ಫಲದಾತೃವೂ ಆಗಿರುವ ಬ್ರಹ್ಮಣಸ್ಪತಿ ಅಥವಾ ಬೃಹಸ್ಪತಿಯು ನಮ್ಮ ಮೇಲೆ ಅನುಗ್ರಹಮಾಡಲಿ. ॥ ೨ ॥

೧೮೦. ಮಾ ನಃ ಶಂಸೋ ಅರರುಷೋ ಧೂರ್ತಿಃ ಪ್ರಣಙ್ಮರ್ತ್ಯಸ್ಯ ।
ರಕ್ಷಾ ಣೋ ಬ್ರಹ್ಮಣಸ್ಪತೇ ॥ ೩ ॥

ಗೊಂದಲ ಮಾಡುವ ಜನರ ಮತ್ಸರಭರಿತವಾದ ನಿಂದೆಯು ನಮ್ಮನ್ನು ಸ್ಪರ್ಶಿಸದಿರಲಿ. ಬ್ರಹ್ಮಣಸ್ಪತಿಯೇ! ನಮ್ಮನ್ನು ರಕ್ಷಿಸು. ॥ ೩ ॥

೧೮೧. ಸ ಘಾ ವೀರೋ ನ ರಿಷ್ಯತಿ ಯಮಿಂದ್ರೋ ಬ್ರಹ್ಮಣಸ್ಪತಿಃ ।
ಸೋಮೋ ಹಿನೋತಿ ಮರ್ತ್ಯಂ ॥ ೪ ॥

ಸೋಮ, ಇಂದ್ರ ಮತ್ತು ಬ್ರಹ್ಮಣಸ್ಪತಿ – ಇವರು ಯಾವ ಮನುಷ್ಯನ ರಕ್ಷಣೆಯನ್ನು ಮಾಡುವರೋ, ಆ ವೀರ ಮಾನವನು ಎಂದಿಗೂ ವಿನಾಶವನ್ನು ಹೊಂದುವದಿಲ್ಲ. ॥ ೪ ॥

೧೮೨. ತ್ವಂ ತಂ ಬ್ರಹ್ಮಣಸ್ಪತೇ ಸೋಮ ಇಂದ್ರಶ್ಚ ಮರ್ತ್ಯಂ ।
ದಕ್ಷಿಣಾ ಪಾತ್ವಂಹಸಃ ॥ ೫ ॥

ಬ್ರಹ್ಮಣಸ್ಪತಿಯೇ! ನೀನೂ, ಸೋಮದೇವತೆಯೂ, ಇಂದ್ರನೂ, ದಕ್ಷಿಣಾ ದೇವಿಯೂ—ನೀವೆಲ್ಲರೂ ಕೂಡಿ ಮಾನವನನ್ನು ಪಾಪದಿಂದ ಕಾಪಾಡಿರಿ. ॥ ೫ ॥

## [ವರ್ಗಃ ೩೫]

೧೮೨. ಸದಸಸ್ಪತಿಮದ್ಭುತಂ ಪ್ರಿಯಮಿಂದ್ರಸ್ಯ ಕಾಮ್ಯಂ ।
ಸನಿಂ ಮೇಧಾಮಯಾಸಿಷಂ ॥ ೬ ॥

ಆಶ್ಚರ್ಯಕಾರಕನೂ, ಇಂದ್ರಪ್ರಿಯನೂ, ಕಮನೀಯನೂ, ಧನ ದಾತೃವೂ ಆದ ಸದಸಸ್ಪತಿ (ಅಗ್ನಿ) ಯ ಹತ್ತರ ನಾವು ಸ್ಮೃತಿ-ಶಕ್ತಿಗಳಿಗಾಗಿ ಯಾಚನೆ ಮಾಡಿದ್ದೇವೆ. ॥ ೬ ॥

೧೮೩. ಯಸ್ಮಾದೃತೇ ನ ಸಿಧ್ಯತಿ ಯಜ್ಞೋ ವಿಪಶ್ಚಿತಶ್ಚನ ।
ಸ ಧೀನಾಂ ಯೋಗಮಿನ್ವತಿ ॥ ೭ ॥

ಯಾರ ಪ್ರಸನ್ನತೆಯ ಹೊರತು ಜ್ಞಾನವಂತನದೂ ಸಹ, ಯಜ್ಞವು ಸಿದ್ಧಿಯನ್ನು ಹೊಂದುವದಿಲ್ಲವೊ, ಆ ಸದಸಸ್ಪತಿಯು ನಮ್ಮ ಮಾನಸಿಕ ವೃತ್ತಿಗಳನ್ನು ಸುಸಂಬಂಧಯುಕ್ತವಾಗಿ ಮಾಡಿಟ್ಟಿರುವನು. ॥ ೭ ॥

೧೮೪. ಆದೃಧ್ನೋತಿ ಹವಿಷ್ಕೃತಿಂ ಪ್ರಾಂಚಂ ಕೃಣೋತ್ಯಧ್ವರಂ ।
ಹೋತ್ರಾ ದೇವೇಷು ಗಚ್ಛತಿ ॥ ೮ ॥

ತರುವಾಯ ಅದೇ ಅಗ್ನಿಯು ಹವ್ಯ-ಸಂಪಾದಕನಾದ ಯಜಮಾನನ ಉನ್ನತಿಯನ್ನು ಮಾಡುತ್ತಾನೆ ಮತ್ತು ಸಮ್ಯಕ್ ರೀತಿಯಲ್ಲಿ ಯಜ್ಞದ ಮುಕ್ತಾಯವನ್ನು ಮಾಡುತ್ತಾನೆ. ಅವನ ಕೃಪೆಯಿಂದ ನಮ್ಮ ಸ್ತುತಿಯು ದೇವತೆಗಳಿಗೆ ಪ್ರಾಪ್ತವಾಗಲಿ. ॥ ೮ ॥

೧೮೫. ನರಾಶಂಸಂ ಸುಧೃಷ್ಟಮ—ಮಪಶ್ಯಂ ಸಪ್ರಥಸ್ತಮಂ ।
ದಿವೋ ನ ಸದ್ಮಮಖಸಂ ॥ ೯ ॥

ಪ್ರತಾಪಶಾಲಿಯೂ, ಪ್ರಸಿದ್ಧನೂ, ಆಕಾಶದಂತೆ ತೇಜಸ್ವಿಯೂ ಆದ ನರಾಶಂಸ-ದೇವತೆಯನ್ನು ನಾನು ಕಂಡಿದ್ದೇನೆ. ॥ ೯ ॥

## ಸೂಕ್ತ: ೧೯

**ಈ ಸೂಕ್ತದ ದೇವತೆ: ಅಗ್ನಿಯು ಮತ್ತು ಮರುದ್ಗಣವು; ಋಷಿ: ಕಣ್ವಪುತ್ರನಾದ ಮೇಧಾತಿಥಿಯು; ಛಂದಸ್ಸು: ಗಾಯತ್ರೀ.**

### [ವರ್ಗ: ೩೬]

೧೮೬. ಪ್ರತಿ ತ್ಯಂ ಚಾರುಮಧ್ವರಂ ಗೋಪೀಥಾಯ ಪ್ರಹೂಯಸೇ ।
ಮರುದ್ಭಿರಗ್ನ ಆ ಗಹಿ ॥ ೧ ॥

ಅಗ್ನಿದೇವನೇ! ಈ ಸುಂದರವಾದ ಯಜ್ಞದಲ್ಲಿ ಸೋಮರಸಪಾನಕ್ಕಾಗಿ ನಿನ್ನನ್ನು ಆಮಂತ್ರಿಸುತ್ತಾರೆ; ಆದ್ದರಿಂದ ಮರುದ್ಗಣದೊಂದಿಗೆ ಇಲ್ಲಿಗೆ ಬಾರಯ್ಯಾ. ॥ ೧ ॥

೧೮೭. ನಹಿ ದೇವೋ ನ ಮರ್ತ್ಯೋ ಮಹಸ್ತವ ಕ್ರತುಂ ಪರಃ ।
ಮರುದ್ಭಿರಗ್ನ ಆ ಗಹಿ ॥ ೨ ॥

ಅಗ್ನಿದೇವನೇ! ನೀನು ದೊಡ್ಡವನಾಗಿರುವೆ. ನಿನ್ನ ಯಜ್ಞವನ್ನು ಉಲ್ಲಂಘಿಸುವಷ್ಟು ಸಾಮರ್ಥ್ಯವು ಯಾವದೇ ಉಚ್ಚದೇವತೆಗೂ ಅಥವಾ ಮಾನವನಿಗೂ ಇರುವದಿಲ್ಲ. ಆದ್ದರಿಂದ ಮರುದ್ದೇವತೆಗಳೊಡನೆ ಇಲ್ಲಿಗೆ ಬಾ. ॥ ೨ ॥

೧೮೮. ಯೇ ಮಹೋ ರಜಸೋ ವಿದು—ರ್ವಿಶ್ವೇ ದೇವಾಸೋ ಅದ್ರುಹಃ ।
ಮರುದ್ಭಿರಗ್ನ ಆ ಗಹಿ ॥ ೩ ॥

ಅಗ್ನಿದೇವನೇ! ಪ್ರಕಾಶಶಾಲಿಯೂ, ಹಿಂಸಾ-ಶೂನ್ಯವೂ ಆಗಿ ಮಹಾವೃಷ್ಟಿಯನ್ನು ಮಾಡಲು ಆತುರರಾಗಿರುವ ಸಪ್ತ ಮಾರುತರೊಂದಿಗೆ ಬಾರಯ್ಯಾ. ॥ ೩ ॥

೧೮೯. ಯ ಉಗ್ರಾ ಅರ್ಕಮಾನೃಚು—ರನಾಧೃಷ್ಟಾಸ ಓಜಸಾ ।
ಮರುದ್ಭಿರಗ್ನ ಆ ಗಹಿ ॥ ೪ ॥

ಉಗ್ರವಾಗಿ ಮತ್ತು ಅಜೇಯ-ಬಲಶಾಲಿಯಾಗಿ ಯಾವ ಮಾರುತರು ಜಲವೃಷ್ಟಿಯನ್ನು ಮಾಡಿದ್ದರೋ, ಅಂಥ ಮರುದ್ಗಣದೊಂದಿಗೆ, ಅಗ್ನಿದೇವನೇ! ಇಲ್ಲಿಗೆ ಬಾ. ॥ ೪ ॥

೧೯೦. ಯೇ ಶುಭ್ರಾ ಘೋರವರ್ಪಸಃ ಸುಕ್ಷತ್ರಾಸೋ ರಿಶಾದಸಃ ।
ಮರುದ್ಭಿರಗ್ನ ಆ ಗಹಿ ॥ ೫ ॥

ಸುಶೋಭನ ಮತ್ತು ಉಗ್ರ, ಈ ಎರಡೂ ತರಹದ ರೂಪವನ್ನು ಧಾರಣ ಮಾಡುವವರಾದ ಮತ್ತು ಪರ್ಯಾಪ್ತ-ಬಲಶಾಲಿಗಳೂ, ಶತ್ರು-ಸಂಹಾರಿಗಳೂ ಆಗಿರುವ ಮರುದ್ಗಣದೊಂದಿಗೆ, ಅಗ್ನಿದೇವನೇ! ಇಲ್ಲಿಗೆ ಬಾರಯ್ಯಾ. ॥ ೫ ॥

## [ವರ್ಗಃ ೩೭]

೧೯೧. ಯೋ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ ।
ಮರುದ್ಭಿರಗ್ನ ಆ ಗಹಿ ॥ ೬ ॥

ಆಕಾಶದ ಮೇಲೆ, ಪ್ರಕಾಶಸ್ವರೂಪವಾದ ಸ್ವರ್ಗದಲ್ಲಿ ವಾಸಮಾಡುವ ದೀಪ್ತಿವಂತರಾದ ಮಾರುತರೊಂದಿಗೆ, ಅಗ್ನಿಯೇ! ಇಲ್ಲಿಗೆ ಬಾ. ॥ ೬ ॥

೧೯೨. ಯ ಈಂಖಯಂತಿ ಪರ್ವತಾನ್ ತಿರಃ ಸಮುದ್ರಮರ್ಣವಂ ।
ಮರುದ್ಭಿರಗ್ನ ಆ ಗಹಿ ॥ ೭ ॥

ಮೇಘಮಾಲೆಯ ಸಂಚಾಲನವನ್ನು ಮಾಡಿ, ಜಲರಾಶಿಯನ್ನು ಸಮುದ್ರದಲ್ಲಿ ಸುರಿಸುವ ಮರುದ್ಗಣದೊಂದಿಗೆ ಬಾರಯ್ಯಾ, ಅಗ್ನಿದೇವಾ! ॥ ೭ ॥

೧೯೩. ಆ ಯೇ ತನ್ವಂತಿ ರಶ್ಮಿಭಿಸ್ ತಿರಃ ಸಮುದ್ರಮೋಜಸಾ ।
ಮರುದ್ಭಿರಗ್ನ ಆ ಗಹಿ ॥ ೮ ॥

ಸೂರ್ಯ-ಕಿರಣಗಳೊಂದಿಗೆ ಸಮಸ್ತ-ಆಕಾಶದಲ್ಲಿ ವ್ಯಾಪ್ತವಾಗಿರುವ ಮತ್ತು ಸ್ವಬಲದಿಂದ ಸಮುದ್ರವನ್ನು ಉತ್ಕ್ಷಿಪ್ತಮಾಡುವ ಮರುದ್ಗಣದೊಂದಿಗೆ, ಅಗ್ನಿದೇವನೇ! ಇಲ್ಲಿಗೆ ಬಾ. ॥ ೮ ॥

೧೯೪. ಅಭಿ ತ್ವಾ ಪೂರ್ವಪೀತಯೇ ಸೃಜಾಮಿ ಸೋಮ್ಯಂ ಮಧು ।
ಮರುದ್ಭಿರಗ್ನ ಆ ಗಹಿ ॥ ೯ ॥

ಅಗ್ನಿದೇವನೇ! ನಿನಗೆ ಪ್ರಥಮ-ಪಾನದ ಸಲುವಾಗಿ ಸೋಮ ಮತ್ತು ಮಧುಗಳನ್ನು ಅರ್ಪಿಸುತ್ತಿದ್ದೇನೆ; ಇವುಗಳನ್ನು ಸ್ವೀಕರಿಸಲು ಮರುದ್ಗಣದೊಂದಿಗೆ ಬಾರಯ್ಯಾ. ॥ ೯ ॥

ಮೊದಲನೆಯ ಅಧ್ಯಾಯವು ಮುಗಿದುದು.

---

# ಎರಡನೆಯ ಅಧ್ಯಾಯವು

## ಸೂಕ್ತ: ೨೦

ಈ ಸೂಕ್ತದ ದೇವತೆ: ಋಭುಗಣವು; ಋಷಿ: ಕಣ್ವಪುತ್ರನಾದ ಮೇಧಾತಿಥಿಯು;
ಛಂದಸ್ಸು: ಗಾಯತ್ರೀ.

### [ವರ್ಗ: ೧]

೧೯೫. ಅಯಂ ದೇವಾಯ ಜನ್ಮನೇ ಸ್ತೋಮೋ ವಿಪ್ರೇಭಿರಾಸಯಾ ।
ಅಕಾರಿ ರತ್ನಧಾತಮಃ ॥ ೧ ॥

ಮಾನವಜನ್ಮಗ್ರಹಣ ಮಾಡಿರುವ ಋಭುಗಳ ಉದ್ದೇಶ್ಯದಿಂದ ಮೇಧಾವಿಯಾದ ಋತ್ವಿಜರು ತಮ್ಮ ಮುಖದಿಂದ ಈ ಧನಪ್ರದವಾದ ಸ್ತೋತ್ರವನ್ನು ಸ್ಮರಿಸಿದ್ದರು. ॥ ೧ ॥

೧೯೬. ಯ ಇಂದ್ರಾಯ ವಚೋಯುಜಾ ತತಕ್ಷುರ್ಮನಸಾ ಹರೀ ।
ಶಮೀಭಿರ್ಯಜ್ಞಮಾಶತ ॥ ೨ ॥

ಆಜ್ಞೆಯಾಗುತ್ತಲೇ ರಥಕ್ಕೆ ಸಂಯುಕ್ತರಾಗುವ ಇಂದ್ರನ ಹರಿನಾಮಧೇಯವುಳ್ಳ ಕುದುರೆಗಳನ್ನು ಯಾರು ತಮ್ಮ ಮಾನಸಿಕ ಬಲದಿಂದಲೇ ಸೃಷ್ಟಿಸಿದ್ದರೋ, ಅಂಥ ಋಭುಜನರು ಚಮಸ ಮೊದಲಾದ ಉಪಕರಣ-ದ್ರವ್ಯಗಳೊಂದಿಗೆ, ನಮ್ಮ ಈ ಯಜ್ಞದಲ್ಲಿ ವ್ಯಾಪ್ತರಾಗಿದ್ದಾರೆ. ॥ ೨ ॥

೧೯೭. ತಕ್ಷನ್ ನಾಸತ್ಯಾಭ್ಯಾಂ ಪರಿಜ್ಮಾನಂ ಸುಖಂ ರಥಂ ।
ತಕ್ಷನ್ ಧೇನುಂ ಸಬರ್ದುಘಾಂ ॥ ೩ ॥

ಅಶ್ವಿನೀಕುಮಾರದ್ವಯರಿಗಾಗಿ ಸರ್ವತ್ರಗಾಮಿಯೂ, ಸುಖವಾಹಿಯೂ ಆಗಿರುವ ರಥವನ್ನು ಋಭುಗಳು ನಿರ್ಮಿಸಿದ್ದರು ಮತ್ತು ವಿಪುಲವಾದ ಹಾಲನ್ನು ಕೊಡುವ ಧೇನುವನ್ನು ಸೃಷ್ಟಿಸಿದ್ದರು. ॥ ೩ ॥

೧೯೮. ಯುವಾನಾ ಪಿತರಾ ಪುನಃ ಸತ್ಯಮಂತ್ರಾ ಋಜೂಯವಃ ।
ಋಭವೋ ವಿಷ್ಟ್ಯಕ್ರತ ॥ ೪ ॥

ಸರಳ-ಹೃದಯಿಗಳೂ, ಎಲ್ಲ ಕೆಲಸಗಳಲ್ಲಿ ವ್ಯಾಪ್ತರಾಗಿರುವವರೂ ಆದ ಋಭುಗಳಿಗಾಗಿ ರಚಿಸಿದ ಮಂತ್ರವು ಯಾವಾಗಲೂ ವಿಫಲವಾಗುವದಿಲ್ಲ. ಈ ಋಭುಗಳು ತಮ್ಮ ತಂದೆ-ತಾಯಿಗಳನ್ನು ತಿರುಗಿ ತರುಣರನ್ನಾಗಿ ಮಾಡಿದ್ದರು. ॥ ೪ ॥

೧೯೯. ಸಂ ವೋ ಮದಾಸೋ ಅಗ್ಮತೇ—ಂದ್ರೇಣ ಚ ಮರುತ್ವತಾ ।
ಆದಿತ್ಯೇಭಿಶ್ಚ ರಾಜಭಿಃ ॥ ೫ ॥

ಋಭುಗಣವೇ! ಮರುದ್ಗಣದೊಂದಿಗೆ ಕೂಡಿದ ಇಂದ್ರನಿಗೂ, ದೀಪ್ಯಮಾನರಾದ ಆದಿತ್ಯರೊಂದಿಗೆ ಇರುವ ನಿಮಗೂ ಈ ಶ್ರೇಷ್ಠವಾದ ಸೋಮರಸವು ಅರ್ಪಿಸಲ್ಪಡುತ್ತದೆ. ॥ ೫ ॥

[ವರ್ಗಃ ೨]

೨೦೦. ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।
ಅಕರ್ತ ಚತುರಃ ಪುನಃ ॥ ೬ ॥

ತ್ವಷ್ಟಾರನಿಂದ ಆ ಹೊಸ ಚಮಸವು ಸಿದ್ಧವಾಗುವದರಲ್ಲಿದ್ದಿತು, ಅಷ್ಟರಲ್ಲಿ ಅದನ್ನು ಋಭುಗಳು ನಾಲ್ಕು ತುಂಡುಗಳಲ್ಲಿ ವಿಭಾಗಿಸಿದರು. ॥ ೬ ॥

೨೦೧. ತೇ ನೋ ರತ್ನಾನಿ ಧತ್ತನ ತ್ರಿರಾ ಸಾಪ್ತಾನಿ ಸುನ್ವತೇ ।
ಏಕಮೇಕಂ ಸುಶಸ್ತಿಭಿಃ ॥ ೭ ॥

ಋಭುಗಣವೇ! ನೀವು ನಮ್ಮ ಶೋಭನವಾದ ಪ್ರಾರ್ಥನೆಯನ್ನು ಸ್ವೀಕರಿಸಿ, ನಮ್ಮ ಸೋಮರಸವನ್ನು ತಯಾರಿಸುವವನಿಗೆ ಮೂರೂ ತರಹದ ರತ್ನಗಳನ್ನು ಒಂದೊಂದಾಗಿ ಕರುಣಿಸಿರಿ ಮತ್ತು ಅವನ ಏಳೂ ಕರ್ಮಗಳನ್ನು ಮೂರು ಸರ್ತಿ ಸಂಪಾದನ ಮಾಡಿರಿ. ॥ ೭ ॥

೨೦೨. ಅಧಾರಯಂತ ವಹ್ನಯೋ—ಽಭಜಂತ ಸುಕೃತ್ಯಯಾ ।
ಭಾಗಂ ದೇವೇಷು ಯಜ್ಞಿಯಂ ॥ ೮ ॥

ಯಜ್ಞದ ವಾಹಕರಾದ ಋಭುಜನರು ಮಾನವಜನ್ಮದಲ್ಲಿ ಹುಟ್ಟಿದರೂ ಕೂಡ, ಅವರಿಗೆ ಅವಿನಾಶಿಯಾದ ಆಯುಷ್ಯವು ಪ್ರಾಪ್ತವಾಗಿದೆ ಮತ್ತು ತಮ್ಮ ಸತ್ಕರ್ಮದ ಮೂಲಕ ದೇವತೆಗಳ ಮಧ್ಯದಲ್ಲಿ ಈ ಋಭುಗಳು ಯಜ್ಞ-ಭಾಗವನ್ನು ಸ್ವೀಕರಿಸುತ್ತಾರೆ. ॥ ೮ ॥

## ಸೂಕ್ತ: ೨೧

ಈ ಸೂಕ್ತದ ದೇವತೆ: ಇಂದ್ರನು ಮತ್ತು ಅಗ್ನಿಯು; ಋಷಿ: ಕಣ್ವಪುತ್ರನಾದ ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

[ವರ್ಗಃ ೩]

೨೦೩. ಇಹೇಂದ್ರಾಗ್ನೀ ಉಪ ಹ್ವಯೇ ತಯೋರಿತ್ ಸ್ತೋಮಮುಶ್ಮಸಿ ।
ತಾ ಸೋಮಂ ಸೋಮಪಾತಮಾ ॥ ೧ ॥

ಈ ಯಜ್ಞದಲ್ಲಿ ಇಂದ್ರಾಗ್ನಿಗಳನ್ನು ನಾನು ಆಹ್ವಾನಿಸುತ್ತೇನೆ, ಮತ್ತು ಇವರಿಬ್ಬರ ಸ್ತುತಿಯನ್ನು ಹಾಡಲು ಇಚ್ಛಿಸುತ್ತೇನೆ. ಸೋಮಪಾಯಿಗಳಾದ ಇಂದ್ರಾಗ್ನಿಗಳು ಇಲ್ಲಿಗೆ ಬರಲಿ ಮತ್ತು ಸೋಮಪಾನಮಾಡಲಿ. ॥ ೧ ॥

೨೦೪. ತಾ ಯಜ್ಞೇಷು ಪ್ರ ಶಂಸತೇ—ಂದ್ರಾಗ್ನೀ ಶುಂಭತಾ ನರಃ ।
ತಾ ಗಾಯತ್ರೇಷು ಗಾಯತ ॥ ೨ ॥

ಮಾನವರೇ! ಈ ಯಜ್ಞದಲ್ಲಿ ಅದೇ ಇಂದ್ರಾಗ್ನಿಗಳನ್ನು ಹೊಗಳಿ ಶೋಭಿಸಿರಿ; ಅವರಿಬ್ಬರನ್ನೂ ಅನುಲಕ್ಷಿಸಿ ಗಾಯತ್ರೀ ಛಂದಸ್ಸಿನಲ್ಲಿ ಹಾಡಿರಿ. ॥ ೨ ॥

೨೦೫. ತಾ ಮಿತ್ರಸ್ಯ ಪ್ರಶಸ್ತಯ ಇಂದ್ರಾಗ್ನೀ ತಾ ಹವಾಮಹೇ ।
ಸೋಮಪಾ ಸೋಮಪೀತಯೇ ॥ ೩ ॥

ಮಿತ್ರನ ಪ್ರಶಂಸೆಗಾಗಿ ನಾವು ಇಂದ್ರ ಮತ್ತು ಅಗ್ನಿ ಇವರಿಬ್ಬರನ್ನೂ ಆಹ್ವಾನಿಸುತ್ತೇವೆ. ಸೋಮ-ರಸಪಾನ-ಕರ್ತೃಗಳಾಗಿರುವ ಇವರಿಬ್ಬರನ್ನೂ ಸೋಮಪಾನಕ್ಕಾಗಿಯೂ ಕೂಡ ನಾವು ಆಮಂತ್ರಿಸುತ್ತೇವೆ. ॥ ೩ ॥

೨೦೬. ಉಗ್ರಾ ಸಂತಾ ಹವಾಮಹ ಉಪೇದಂ ಸವನಂ ಸುತಂ ।
ಇಂದ್ರಾಗ್ನೀ ಏಹ ಗಚ್ಛತಾಂ ॥ ೪ ॥

ಉಗ್ರದೇವತೆಗಳಾಗಿರುವ ಇಂದ್ರಾಗ್ನಿಗಳನ್ನು ಸೋಮರಸಸಂಯುಕ್ತವಾದ ಯಜ್ಞದ ಬಳಿಗೆ ನಾವು ಆಹ್ವಾನಿಸುತ್ತೇವೆ; ಆದ್ದರಿಂದ ಇವರಿಬ್ಬರೂ ನಮ್ಮ ಯಜ್ಞದಲ್ಲಿ ಆಗಮಿಸಲಿ. ॥ ೪ ॥

೨೦೭. ತಾ ಮಹಾಂತಾ ಸದಸ್ಪತೀ ಇಂದ್ರಾಗ್ನೀ ರಕ್ಷ ಉಬ್ಜತಂ ।
ಅಪ್ರಜಾಃ ಸಂತ್ವತ್ರಿಣಃ ॥ ೫ ॥

ಮಹಾತ್ಮರೂ, ಸಭಾರಕ್ಷಕರೂ ಆಗಿರುವ ಇಂದ್ರಾಗ್ನಿಗಳು ರಾಕ್ಷಸ-ಜನಾಂಗವನ್ನು ದುಷ್ಟತಾ-ಶೂನ್ಯವನ್ನಾಗಿ ಮಾಡಲಿ; ನರಭಕ್ಷಕರಾದ ರಾಕ್ಷಸರು ನಿಸ್ಸಂತಾನವಾಗಿ ಹೋಗಲಿ. ॥ ೫ ॥

೨೦೮. ತೇನ ಸತ್ಯೇನ ಜಾಗೃತ—ಮಧಿ ಪ್ರಚೇತುನೇ ಪದೇ ।
ಇಂದ್ರಾಗ್ನೀ ಶರ್ಮ ಯಚ್ಛತಂ ॥ ೬ ॥

ಇಂದ್ರ ಮತ್ತು ಅಗ್ನಿಗಳೇ! ಯಾವ ಸ್ವರ್ಗಲೋಕದಲ್ಲಿ ಕರ್ಮಫಲವು ಸ್ಪಷ್ಟವಾಗಿ ತಿಳಿಯಲ್ಪಡುವದೋ, ಅಲ್ಲಿಯೇ ಈ ಯಜ್ಞದ ಸಲುವಾಗಿ ನೀವಿಬ್ಬರೂ ಜಾಗ್ರತರಾಗಿರಿ ಮತ್ತು ನಮಗಾದರೂ ಸುಖಪ್ರದಾನ ಮಾಡಿರಿ. ॥ ೬ ॥

## ಸೂಕ್ತ: ೨೨

ಈ ಸೂಕ್ತದ ದೇವತೆ: ಅಶ್ವಿನೀಕುಮಾರರೇ ಮುಂತಾದವರು; ಋಷಿ: ಮೇಧಾತಿಥಿಯು; ಛಂದಸ್ಸು: ಗಾಯತ್ರೀ.

### [ವರ್ಗ: ೪]

೨೦೯. ಪ್ರಾತರ್ಯುಜಾ ವಿ ಬೋಧಯಾ—ಶ್ವಿನಾವೇಹ ಗಚ್ಛತಾಂ ।
ಅಸ್ಯ ಸೋಮಸ್ಯ ಪೀತಯೇ ॥ ೧ ॥

ಪುರೋಹಿತನೇ! ಪ್ರಾತಃಸವನದ ಸಹಾಯದಿಂದ ಅಶ್ವಿನೀಕುಮಾರರನ್ನು ಎಬ್ಬಿಸಯ್ಯಾ. ಸೋಮಪಾನಕ್ಕಾಗಿ ಅವರು ಈ ಯಜ್ಞದಲ್ಲಿ ಬಿಜಯಂಗೈಯಲಿ. ॥ ೧ ॥

೨೧೦. ಯಾ ಸುರಥಾ ರಥೀತಮೋ—ಭಾ ದೇವಾ ದಿವಿಸ್ಪೃಶಾ ।
ಅಶ್ವಿನಾ ತಾ ಹವಾಮಹೇ ॥ ೨ ॥

ಸುಂದರವಾದ ರಥದಲ್ಲಿ ಆಸೀನರೂ, ರಥಿಗಳಲ್ಲಿ ಶ್ರೇಷ್ಠರೂ ಮತ್ತು ಸ್ವರ್ಗದಲ್ಲಿ ನಿವಾಸಮಾಡುವವರೂ ಆಗಿರುವ ಅಶ್ವಿನೀಕುಮಾರರನ್ನು ನಾವು ಆಹ್ವಾನಿಸುತ್ತೇವೆ. ॥ ೨ ॥

೨೧೧. ಯಾ ವಾಂ ಕಶಾ ಮಧುಮತ್ಯ—ಶ್ವಿನಾ ಸೂನೃತಾವತೀ ।
ತಯಾ ಯಜ್ಞಂ ಮಿಮಿಕ್ಷತಂ ॥ ೩ ॥

ಅಶ್ವಿನೀಕುಮಾರರೇ! ಅಶ್ವತಾಡನದ ಮೂಲಕ ಬೆವರಿನಿಂದ ಕೂಡಿದ ಚಾವಟಿಯನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಈ ಯಜ್ಞವನ್ನು ಸೋಮರಸದಿಂದ ಸಿಂಪಡಿಸಿರಿ. ॥ ೩ ॥

೨೧೨. ನಹಿ ವಾಮಸ್ತಿ ದೂರಕೇ ಯತ್ರಾ ರಥೇನ ಗಚ್ಛಥಃ ।
ಅಶ್ವಿನಾ ಸೋಮಿನೋ ಗೃಹಂ ॥ ೪ ॥

ಅಶ್ವಿನೀಕುಮಾರರೇ! ಸೋಮರಸವನ್ನೀಯುವ ಯಜಮಾನನ ಯಾವ ಮನೆಗೆ ನೀವು ರಥದಲ್ಲಿ ಕುಳಿತುಕೊಂಡು ಹೊರಡಿರುವಿರೋ, ಆ ಮನೆಯು ದೂರವಾಗಿಲ್ಲ. ॥ ೪ ॥

೨೧೩. ಹಿರಣ್ಯಪಾಣಿಮೂತಯೇ ಸವಿತಾರಮುಪ ಹ್ವಯೇ ।
ಸ ಚೇತ್ತಾ ದೇವತಾ ಪದಂ ॥ ೫ ॥

ಸುವರ್ಣಹಸ್ತಕನಾದ ಸೂರ್ಯನನ್ನು ಸ್ವರಕ್ಷಣೆಗಾಗಿ ನಾನು ಆಹ್ವಾನಿಸುತ್ತೇನೆ. ಆ ದೇವಾಧಿದೇವನು ಯಜಮಾನನಿಗೆ ದೊರಕುವ ಪದದ ಬಗ್ಗೆ ಹೇಳಿಕೆಯನ್ನು ಕೊಡುವನು. ॥ ೫ ॥

[ವರ್ಗಃ ೫]

೨೧೪. ಅಪಾಂ ನಪಾತಮವಸೇ ಸವಿತಾರಮುಪ ಸ್ತುಹಿ ।
ತಸ್ಯ ವ್ರತಾನ್ಯುಶ್ಮಸಿ ॥ ೬ ॥

ಸ್ವರಕ್ಷಣೆಯ ಸಲುವಾಗಿ, ನೀರನ್ನು ಶೋಷಿಸುವ ಸೂರ್ಯನ ಸ್ತುತಿಯನ್ನು ಹಾಡಿರಿ. ನಾವು ಸೂರ್ಯನಿಗಾಗಿ ಯಜ್ಞಮಾಡಲು ಇಚ್ಛಿಸುತ್ತೇವೆ. ॥ ೬ ॥

೨೧೫. ವಿಭಕ್ತಾರಂ ಹವಾಮಹೇ ವಸೋಶ್ಚಿತ್ರಸ್ಯ ರಾಧಸಃ ।
ಸವಿತಾರಂ ನೃಚಕ್ಷಸಂ ॥ ೭ ॥

ನಿವಾಸಕ್ಕೆ ಕಾರಣೀಭೂತನೂ, ವಿವಿಧ ಪ್ರಕಾರದ ಧನಗಳ ವಿಭಾಜನ-ಕರ್ತೃವೂ ಮತ್ತು ಮಾನವನಿಗೆ ಪ್ರಕಾಶವನ್ನು ಪರಿಪಾಲಿಸುವಂಥವನೂ ಆಗಿರುವ ಸೂರ್ಯನನ್ನು ನಾವು ಆಹ್ವಾನಿಸುತ್ತೇವೆ. ॥ ೭ ॥

೨೧೬. ಸಖಾಯ ಆ ನಿ ಷೀದತ ಸವಿತಾ ಸ್ತೋಮ್ಯೋ ನು ನಃ ।
ದಾತಾ ರಾಧಾಂಸಿ ಶುಂಭತಿ ॥ ೮ ॥

ಗೆಳೆಯರೇ! ಸುತ್ತಲೂ ಕುಳಿತುಕೊಳ್ಳಿರಿ. ಶೀಘ್ರವಾಗಿಯೇ ನಾವು ಸೂರ್ಯನನ್ನು ಸ್ತುತಿಸುವವರಿದ್ದೇವೆ. ಧನಪ್ರದಾತಾರನಾದ ಸೂರ್ಯನು ಸುಶೋಭಿತನಾಗುತ್ತಿದ್ದಾನೆ. ॥ ೮ ॥

೨೧೭. ಅಗ್ನೇ ಪತ್ನೀರಿಹಾ ವಹ ದೇವಾನಾಮುಶತೀರುಪ ।
ತ್ವಷ್ಟಾರಂ ಸೋಮಪೀತಯೇ ॥ ೯ ॥

ಅಗ್ನಿಯೇ! ದೇವತೆಗಳ ಅಭಿಲಾಷೆಮಾಡುವ ಪತ್ನಿಯರನ್ನು ಈ ಯಜ್ಞದಲ್ಲಿ ಕರೆದುಕೊಂಡು ಬಾರಯ್ಯಾ. ಸೋಮಪಾನ ಮಾಡುವದಕ್ಕಾಗಿ ತ್ವಷ್ಟಾರನನ್ನೂ ಇಲ್ಲಿಗೆ ಕರೆದುಕೊಂಡು ಬಾ. ॥ ೯ ॥

೨೧೮. ಆ ಗ್ನಾ ಅಗ್ನ ಇಹಾವಸೇ ಹೋತ್ರಾಂ ಯವಿಷ್ಠ ಭಾರತೀಂ ।
ವರೂತ್ರೀಂ ಧಿಷಣಾಂ ವಹ ॥ ೧೦ ॥

ಅಗ್ನಿಯೇ! ನಮ್ಮ ರಕ್ಷಣೆಗಾಗಿ ದೇವತೆಗಳ ರಮಣಿಯರನ್ನು ಈ ಯಜ್ಞದಲ್ಲಿ ತಾರಯ್ಯಾ. ಯುವಕನಾದ ಅಗ್ನಿಯೇ! ದೇವತೆಗಳ ಆಹ್ವಾನ ಮಾಡುವ, ಸತ್ಯವಾದದ್ದನ್ನೇ ಹೇಳುವ ಶೀಲವುಳ್ಳ ಮತ್ತು ಸತ್ಯದಲ್ಲಿ ನಿಷ್ಠೆಯುಳ್ಳ ಸುಬುದ್ಧಿಯನ್ನು ನಮಗೆ ಅನುಗ್ರಹಿಸು. ॥ ೧೦ ॥

## [ವರ್ಗ: ೬]

೨೧೯. ಅಭಿ ನೋ ದೇವೀರವಸಾ ಮಹಃ ಶರ್ಮಣಾ ನೃಪತ್ನೀಃ ।
ಅಚ್ಛಿನ್ನಪತ್ರಾಃ ಸಚಂತಾಂ ॥ ೧೧ ॥

ಅಚ್ಛಿನ್ನಪಕ್ಷೆಯರಾದ ಅಥವಾ ದ್ರುತಗಾಮಿನಿಯರಾದ ಮತ್ತು ಮಾನವ-ರಕ್ಷಿಕೆಯರಾದ ದೇವಿಯರು ರಕ್ಷಣದಿಂದ ಮತ್ತು ಮಹತ್-ಸುಖ-ಪ್ರದಾನದಿಂದ ನಮ್ಮ ಮೇಲೆ ಪ್ರಸನ್ನರಾಗಲಿ ॥ ೧೧ ॥

೨೨೦. ಇಹೇಂದ್ರಾಣೀಮುಪ ಹ್ವಯೇ ವರುಣಾನೀಂ ಸ್ವಸ್ತಯೇ ।
ಅಗ್ನಾಯೀಂ ಸೋಮಪೀತಯೇ ॥ ೧೨ ॥

ಸ್ವಮಂಗಲದ ಸಲುವಾಗಿ ಮತ್ತು ಸೋಮಪಾನಕ್ಕಾಗಿ ನಾವು ಇಂದ್ರನ ಪತ್ನಿ, ವರುಣನ ಪತ್ನಿ ಮತ್ತು ಅಗ್ನಿಯ ಪತ್ನಿ ಈ ಮೂವರನ್ನೂ ಆಹ್ವಾನಿಸುತ್ತೇವೆ. ॥ ೧೨ ॥

೨೨೧. ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ ।
ಪಿಪೃತಾಂ ನೋ ಭರೀಮಭಿಃ ॥ ೧೩ ॥

ಮಹೀ, ದ್ಯು ಮತ್ತು ಪೃಥಿವೀ — ಈ ದೇವಿಯರು ನಮ್ಮ ಯಜ್ಞವನ್ನು ರಸದಿಂದ ಸಿಂಪಡಿಸಲಿ ಮತ್ತು ಪೋಷಣಕಾರ್ಯಗಳಿಂದ ನಮ್ಮನ್ನು ಪರಿಪೂರ್ಣರನ್ನಾಗಿ ಮಾಡಲಿ. ॥ ೧೩ ॥

೨೨೨. ತಯೋರಿದ್ ಘೃತವತ್ ಪಯೋ ವಿಪ್ರಾ ರಿಹಂತಿ ಧೀತಿಭಿಃ ।
ಗಂಧರ್ವಸ್ಯ ಧ್ರುವೇ ಪದೇ ॥ ೧೪ ॥

ದ್ಯು-ಪೃಥಿವಿಗಳ ನಡುವೆ ಮತ್ತು ಗಂಧರ್ವರ ನಿವಾಸಸ್ಥಾನವಾದ ಅಂತರಿಕ್ಷದಲ್ಲಿ, ತಮ್ಮ ಸತ್ಕರ್ಮಗಳ ಫಲವಾಗಿ, ಮೇಧಾವಿಯಾದ ಜನರು ಘೃತವತ್ ಪಯಃಪಾನವನ್ನು ಮಾಡುತ್ತಾರೆ. ॥ ೧೪ ॥

೨೨೩. ಸ್ಯೋನಾ ಪೃಥಿವಿ ಭವಾ—ನೃಕ್ಷರಾ ನಿವೇಶನೀ ।
ಯಚ್ಛಾ ನಃ ಶರ್ಮ ಸಪ್ರಥಃ ॥ ೧೫ ॥

ಪೃಥಿವೀದೇವಿಯೇ! ನೀನು ವಿಸ್ತೃತಳಾಗವ್ವಾ ಮತ್ತು ಕಂಟಕರಹಿತೆಯಾಗವ್ವಾ. ಚರಾಚರ ಪ್ರಾಣಿಗಳಿಗೆ ಆಶ್ರಯದಾತೆಯಾಗಿ ನಮಗೆ ಯಥೇಷ್ಟವಾಗಿ ಸುಖವನ್ನು ಅನುಗ್ರಹಿಸು ತಾಯೆ! ॥ ೧೫ ॥

[ವರ್ಗಃ ೭]

೨೨೪. ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ ।
ಪೃಥಿವ್ಯಾಃ ಸಪ್ತ ಧಾಮಭಿಃ ॥ ೧೬ ॥

ಯಾವ ಭೂಪ್ರದೇಶದಲ್ಲಿ ತನ್ನ ಏಳೂ ಛಂದಸ್ಸುಗಳಿಂದ ವಿಷ್ಣುವು ವಿವಿಧ ಪಾದಕ್ರಮಗಳನ್ನು ಎಸಗಿದ್ದನೋ, ಅದೇ ಭೂಪ್ರದೇಶದಲ್ಲಿ ಸ್ಥಿತರಾಗಿ ದೇವತೆಗಳು ನಮ್ಮನ್ನು ರಕ್ಷಿಸಲಿ. ॥ ೧೬ ॥

೨೨೫. ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ ॥ ೧೭ ॥

ವಿಷ್ಣುವು ಈ ಜಗತ್ತಿನ ಪರಿಕ್ರಮೆ ಮಾಡಿದನು, ಅವನು ಮೂರು ರೀತಿಯಿಂದ ಪಾದಗಳನ್ನು ಕ್ರಮಿಸಿದನು ಮತ್ತು ಅವನ ಧೂಳಿಮಯವಾದ ಆ ಪಾದದಿಂದ ಜಗತ್ತೆಲ್ಲಾ ಮುಚ್ಚಿದಂತೆ ಆಯಿತು. ॥ ೧೭ ॥

೨೨೬. ತ್ರೀಣಿ ಪದಾ ವಿ ಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ ।
ಅತೋ ಧರ್ಮಾಣಿ ಧಾರಯನ್ ॥ ೧೮ ॥

ವಿಷ್ಣುವು ಜಗತ್ತಿನ ರಕ್ಷಕನಾಗಿರುವನು; ಅವನಿಗೆ ಆಘಾತಮಾಡುವಂಥವನು ಯಾವನೂ ಇಲ್ಲ. ಅವನು ಸಮಸ್ತ ಧರ್ಮಗಳ ಧಾರಣಮಾಡಿ ಮೂರು ಪಾದಗಳ ಪರಿಕ್ರಮೆಯನ್ನು ಮಾಡಿದನು. ॥ ೧೮ ॥

೨೨೭. ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ।
ಇಂದ್ರಸ್ಯ ಯುಜ್ಯಃ ಸಖಾ ॥ ೧೯ ॥

ವಿಷ್ಣುವಿನ ಕರ್ಮಬಲದಿಂದಲೇ ಯಜಮಾನರು ತಮ್ಮ ವ್ರತಗಳ ಅನುಷ್ಠಾನವನ್ನು ಮಾಡುತ್ತಾರೆ. ಅವನ ಉದ್ಯಮಗಳನ್ನು ನೋಡಿರಿ. ಅವನು ಇಂದ್ರನಿಗೆ ಉಪಯುಕ್ತನಾದ ಮಿತ್ರನಾಗಿರುವನು. ॥ ೧೯ ॥

೨೨೮. ತದ್ ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಂ ॥ ೨೦ ॥

ವಿಸ್ತೃತವಾಗಿರುವ ಆಕಾಶದಲ್ಲಿ ನಾಲ್ಕೂಕಡೆಗೆ ವಿಚರಣಮಾಡುವ ಕಣ್ಣುಗಳು ಯಾವ ರೀತಿಯಲ್ಲಿ ದೃಷ್ಟಿಯನ್ನು ಇಡುವವೋ, ಅದೇ ತರಹದಲ್ಲಿ ವಿದ್ವಾಂಸರು ಯಾವಾಗಲೂ ವಿಷ್ಣುವಿನ ಆ ಪರಮ ಪದದ ಮೇಲೆಯೇ ದೃಷ್ಟಿಯನ್ನು ಇಡುತ್ತಾರೆ. ॥ ೨೦ ॥

೨೨೯. ತದ್ ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ।
ವಿಷ್ಣೋರ್ಯತ್ ಪರಮಂ ಪದಂ ॥ ೨೧ ॥

ಸ್ತುತಿವಾದಿಗಳೂ, ಮೇಧಾವಿಗಳೂ ಆಗಿರುವ ಮಾನವರು ವಿಷ್ಣುವಿನ ಆ ಪರಮ ಪದದಿಂದಲೇ ತಮ್ಮ ಹೃದಯವನ್ನು ಆಲೋಕಿತಗೊಳಿಸುತ್ತಾರೆ. ॥ ೨೧ ॥

## ಸೂಕ್ತ: ೨೩

ಈ ಸೂಕ್ತದ ದೇವತೆ: ವಾಯು ಮೊದಲಾದವರು; ಋಷಿ: ಮೇಧಾತಿಥಿಯು;
ಛಂದಸ್ಸು: ಗಾಯತ್ರೀ, ಪುರ ಉಷ್ಣಿಕ್, ಅನುಷ್ಟುಪ್ ಮತ್ತು ಪ್ರತಿಷ್ಠಾ.

### [ವರ್ಗ: ೮]

೨೩೦. ತೀವ್ರಾಃ ಸೋಮಾಸ ಆ ಗಹ್ಯಾ—ಶೀರ್ವಂತಃ ಸುತಾ ಇಮೇ ।
ವಾಯೋ ತಾನ್ ಪ್ರಸ್ಥಿತಾನ್ ಪಿಬ ॥ ೧ ॥

ವಾಯುದೇವನೇ! ಈ ತೀಕ್ಷ್ಣವಾದ ಮತ್ತು ಸುಪಕ್ವವಾದ ಸೋಮರಸವು ಸಿದ್ಧವಾಗಿದೆ. ನೀನು ಬಾರಯ್ಯಾ; ಅದೇ ಸೋಮರಸವು ಇಲ್ಲಿ ತರಿಸಲ್ಪಟ್ಟಿದೆ. ಅದನ್ನು ಪಾನಮಾಡು. ॥ ೧ ॥

೨೩೧. ಉಭಾ ದೇವಾ ದಿವಿಸ್ಪೃಶೇ—ಂದ್ರವಾಯೂ ಹವಾಮಹೇ ।
ಅಸ್ಯ ಸೋಮಸ್ಯ ಪೀತಯೇ ॥ ೨ ॥

ಆಕಾಶಸ್ಥಿತರಾದ ಇಂದ್ರ ಮತ್ತು ವಾಯುಗಳನ್ನು, ಸೋಮಪಾನಕ್ಕಾಗಿ, ನಾವು ಆಹ್ವಾನಿಸುತ್ತೇವೆ. ॥ ೨ ॥

೨೩೨. ಇಂದ್ರವಾಯೂ ಮನೋಜುವಾ ವಿಪ್ರಾ ಹವಂತ ಊತಯೇ ।
ಸಹಸ್ರಾಕ್ಷಾ ಧಿಯಸ್ಪತೀ ॥ ೩ ॥

ಯಜ್ಞರಕ್ಷಕರಾದ ಇಂದ್ರ ಮತ್ತು ವಾಯುಗಳು ಮನೋಜವರೂ, ಸಹಸ್ರಾಕ್ಷಿಗಳೂ ಆಗಿರುವರು. ಪ್ರತಿಭಾಶಾಲಿಯಾದ ಮನುಷ್ಯರು ತಮ್ಮ ರಕ್ಷಣೆಗಾಗಿ ಇವರೀರ್ವರನ್ನೂ ಆಹ್ವಾನಿಸುತ್ತಾರೆ. ॥ ೩ ॥

೨೩೩. ಮಿತ್ರಂ ವಯಂ ಹವಾಮಹೇ ವರುಣಂ ಸೋಮಪೀತಯೇ ।
ಜಜ್ಞಾನಾ ಪೂತದಕ್ಷಸಾ ॥ ೪ ॥

ಮಿತ್ರ ಮತ್ತು ವರುಣ—ಇವರಿಬ್ಬರೂ ಶುದ್ಧ-ಬಲಶಾಲಿಗಳೂ, ಯಜ್ಞದಲ್ಲಿ ಪ್ರಾದುರ್ಭೂತರಾಗುವಂಥವರೂ ಆಗಿರುವರು. ನಾವು ಅವರನ್ನು ಸೋಮರಸಪಾನಕ್ಕಾಗಿ ಕರೆಯುತ್ತೇವೆ. ॥ ೪ ॥

೨೩೪. ಋತೇನ ಯಾವೃತಾವೃಧಾ—ವೃತಸ್ಯ ಜ್ಯೋತಿಷಸ್ಪತೀ ।
ತಾ ಮಿತ್ರಾವರುಣಾ ಹುವೇ ॥ ೫ ॥

ಮಿತ್ರ ಮತ್ತು ವರುಣರು ಸತ್ಯದಿಂದ, ಸತ್ಯದ ಸಹಾಯದಿಂದ, ಯಜ್ಞವನ್ನು ವೃದ್ಧಿಸುತ್ತಾರೆ ಮತ್ತು ಯಜ್ಞಪ್ರಕಾಶದ ಪಾಲನಮಾಡುತ್ತಾರೆ; ಅವರನ್ನು ನಾನು ಆಹ್ವಾನಿಸುತ್ತೇನೆ. ॥ ೫ ॥

## [ವರ್ಗಃ ೯]

೨೩೫. ವರುಣಃ ಪ್ರಾವಿತಾ ಭುವನ್ ಮಿತ್ರೋ ವಿಶ್ವಾಭಿರೂತಿಭಿಃ ।
ಕರತಾಂ ನಃ ಸುರಾಧಸಃ ॥ ೬ ॥

ವರುಣ ಮತ್ತು ಮಿತ್ರರು ಎಲ್ಲತರದಿಂದ ನಮ್ಮನ್ನು ರಕ್ಷಿಸುತ್ತಾರೆ. ಅವರು ನಮಗೆ ಯಥೇಷ್ಟವಾದ ಸಂಪತ್ತಿಯನ್ನು ಅನುಗ್ರಹಿಸಲಿ. ॥ ೬ ॥

೨೩೬. ಮರುತ್ವಂತಂ ಹವಾಮಹ ಇಂದ್ರಮಾ ಸೋಮಪೀತಯೇ ।
ಸಜೂರ್ಗಣೇನ ತೃಂಪತು ॥ ೭ ॥

ಮರುತರೊಂದಿಗೆ, ಸೋಮಪಾನದ ಸಲುವಾಗಿ, ನಾವು ಇಂದ್ರನ ಆಹ್ವಾನಮಾಡುತ್ತೇವೆ. ಅವನೂ ಮರುದ್ಗಣವೂ ತೃಪ್ತರಾಗಲಿ. ॥ ೭ ॥

೨೩೭. ಇಂದ್ರಜ್ಯೇಷ್ಠಾ ಮರುದ್ಗಣಾ ದೇವಾಸಃ ಪೂಷರಾತಯಃ ।
ವಿಶ್ವೇ ಮಮ ಶ್ರುತಾ ಹವಂ ॥ ೮ ॥

ಮರುದ್ಗಣವೇ! ನಿಮ್ಮೆಲ್ಲರಲ್ಲಿ ಇಂದ್ರನೇ ಅಗ್ರಣಿಯಾಗಿರುವನು; ಪೂಷನು ಅಥವಾ ಸೂರ್ಯನು ನಿಮಗೆ ದಾತಾರನಾಗಿರುವನು. ನೀವೆಲ್ಲರೂ ಕೂಡಿ ನಾವು ಮಾಡುವ ಆಹ್ವಾನವನ್ನು ಕೇಳಿರಿ. ॥ ೮ ॥

೨೩೮. ಹತ ವೃತ್ರಂ ಸುದಾನವ ಇಂದ್ರೇಣ ಸಹಸಾ ಯುಜಾ ।
ಮಾ ನೋ ದುಃಶಂಸ ಈಶತ ॥ ೯ ॥

ದುಷ್ಟರಾದ ಶತ್ರುಗಳು ನಮ್ಮ ಮೇಲೆ ಪ್ರಭುತ್ವ ಸ್ಥಾಪಿಸದಿರುವಂತೆ, ದಾನಪರಾಯಣರಾದ ಮಾರುತರೇ! ಬಲಶಾಲಿಯೂ, ಸಹಾಯಕನೂ ಆದ ಇಂದ್ರನ ಸಹಾಯದಿಂದ ಆ ಶತ್ರುಗಳನ್ನು ನಾಶಮಾಡಿರಿ. ॥ ೯ ॥

೨೩೯. ವಿಶ್ವಾನ್ ದೇವಾನ್ ಹವಾಮಹೇ ಮರುತಃ ಸೋಮಪೀತಯೇ ।
ಉಗ್ರಾ ಹಿ ಪೃಶ್ನಿಮಾತರಃ ॥ ೧೦ ॥

ಸಮಸ್ತ ಮರುತ್-ದೇವತೆಗಳನ್ನು ಸೋಮರಸಪಾನದ ಸಲುವಾಗಿ ನಾವು ಆಹ್ವಾನಮಾಡುತ್ತೇವೆ. ಅವರು ಉಗ್ರರೂ, ಪೃಶ್ನಿಗಳ ಪುತ್ರರೂ ಆಗಿರುವರು. ॥ ೧೦ ॥

## [ವರ್ಗಃ ೧೦]

೨೪೦. ಜಯತಾಮಿವ ತನ್ಯತು–ರ್ಮರುತಾಮೇತಿ ಧೃಷ್ಣುಯಾ ।

ಯಚ್ಛುಭಂ ಯಾಥನಾ ನರಃ ॥ ೧೧ ॥

ಯಾವ ಸಮಯದಲ್ಲಿ ಮಾರುತರು ಶೋಭನವಾದ ಯಜ್ಞದಲ್ಲಿ ಆಗಮಿಸುವರೋ, ಆ ಕಾಲಕ್ಕೆ, ಯುದ್ಧದಲ್ಲಿ ವಿಜಯಿಯಾದವರು ನಾದಮಾಡುವಂತೆ, ಆ ಮಾರುತರು ದರ್ಪದಿಂದ ನಿನಾದಮಾಡುತ್ತಾರೆ. ॥ ೧೧ ॥

೨೪೧. ಹಸ್ಕಾರಾದ್ ವಿದ್ಯುತಸ್ಪರ್ಯ–ತೋ ಜಾತಾ ಅವಂತು ನಃ ।

ಮರುತೋ ಮೃಳಯಂತು ನಃ ॥ ೧೨ ॥

ಪ್ರಕಾಶಮಯಿಯಾದ ವಿದ್ಯುಲ್ಲತೆಯಿಂದ ಹುಟ್ಟಿದ ಮರುದ್ಗಣವು ನಮ್ಮನ್ನು ಕಾಪಾಡಲಿ ಮತ್ತು ನಮ್ಮ ಸುಖದ ಸುವ್ಯವಸ್ಥೆಯನ್ನು ಮಾಡಲಿ. ॥ ೧೨ ॥

೨೪೨. ಆ ಪೂಷಂಚಿತ್ರಬರ್ಹಿಷ–ಮಾಘೃಣೇ ಧರುಣಂ ದಿವಃ ।

ಆಜಾ ನಷ್ಟಂ ಯಥಾ ಪಶುಂ ॥ ೧೩ ॥

ಪ್ರಕಾಶಯುಕ್ತನೂ, ಶೀಘ್ರಗಾಮಿಯೂ ಆಗಿರುವ ಪೂಷನೇ! ಯಾವ ರೀತಿಯಿಂದ, ಪೃಥ್ವಿಯಲ್ಲಿ ಮೃಗವು ಕಾಣೆಯಾದಾಗ, ಅದನ್ನು ಜನರು ಹುಡುಕಿ ತರುತ್ತಾರೋ, ಅದೇ ಪ್ರಕಾರದಲ್ಲಿ ಆಕಾಶದಿಂದ ವಿಚಿತ್ರವಾದ ದರ್ಭೆಗಳಿಂದ ಕೂಡಿದ ಮತ್ತು ಯಜ್ಞಧಾರಕವಾದ ಸೋಮವನ್ನು ಹುಡುಕಿ ತಾರಯ್ಯಾ. ॥ ೧೩ ॥

೨೪೩. ಪೂಷಾ ರಾಜಾನಮಾಘೃಣಿ–ರಪಗೂಳ್ಹಂ ಗುಹಾಹಿತಂ ।

ಅವಿಂದಚ್ಚಿತ್ರಬರ್ಹಿಷಂ ॥ ೧೪ ॥

ಪ್ರಕಾಶಮಾನನಾದ ಪೂಷನು ಗುಹೆಯಲ್ಲಿ ಅವಸ್ಥಿತವಾಗಿ ಅಡಗಿಕೊಂಡಿರುವ, ವಿಚಿತ್ರವಾದ ದರ್ಭೆಗಳಿಂದ ಯುಕ್ತವಾದ ಮತ್ತು ಥಳಥಳಿಸುತ್ತಿರುವ ಸೋಮವನ್ನು ಹುಡುಕಿ ತೆಗೆದನು. ॥ ೧೪ ॥

೨೪೪. ಉತೋ ಸ ಮಹ್ಯಮಿಂದುಭಿಃ ಷಡ್ ಯುಕ್ತಾ ಅನುಸೇಷಿಧತ್ ।

ಗೋಭಿರ್ಯವಂ ನ ಚರ್ಕೃಷತ್ ॥ ೧೫ ॥

ಯಾವ ರೀತಿಯಲ್ಲಿ ಒಕ್ಕಲಿಗನು ಎತ್ತುಗಳಿಂದ ಜವೆಗೋದಿಯ ಗದ್ದೆಯನ್ನು ತಿರುಗಿ-ತಿರುಗಿ ಹೂಡುತ್ತಾನೋ, ಅದೇ ರೀತಿಯಲ್ಲಿ ಪೂಷನು, ನನ್ನ ಸಲುವಾಗಿ, ಸೋಮದೊಡನೆ ಕ್ರಮವಾಗಿ ಆರೂ ಋತುಗಳನ್ನು ತಿರುಗಿ-ತಿರುಗಿ ತರುತ್ತಾನೆ. ॥ ೧೫ ॥

## [ವರ್ಗ: ೧೧]

೨೪೫. ಅಂಬಯೋ ಯಂತ್ಯಧ್ವಭಿ—ರ್ಜಾಮಯೋ ಅಧ್ವರೀಯತಾಂ ।
ಪೃಂಚತೀರ್ಮಧುನಾ ಪಯಃ ॥ ೧೬ ॥

ಯಜ್ಞೇಚ್ಛುಗಳಾದ ನಮಗೆ ಮಾತೃಸ್ಥಾನೀಯವಾದ ಜಲವು ಯಜ್ಞ ಮಾರ್ಗದಿಂದ ಹೋಗುತ್ತಿರುತ್ತದೆ. ಆ ನೀರು ನಮಗೆ ಹಿತೈಷಿಯಾದ ಬಾಂಧವನಂತೆ ಆಗಿರುವದು. ಅದು ಹಾಲನ್ನು ಮಧುರವನ್ನಾಗಿ ಮಾಡುತ್ತದೆ. ॥ ೧೬ ॥

೨೪೬. ಅಮೂರ್ಯಾ ಉಪ ಸೂರ್ಯೇ ಯಾಭಿರ್ವಾ ಸೂರ್ಯಃ ಸಹ ।
ತಾ ನೋ ಹಿನ್ವಂತ್ವಧ್ವರಂ ॥ ೧೭ ॥

ಈ ಯಾವೆಲ್ಲ ಜಲವು ಸೂರ್ಯನ ಬಳಿಗೆ ಇರುವದೋ, ಅಥವಾ ಸೂರ್ಯನು ಯಾವ ಜಲದೊಂದಿಗೆ ಇರುವನೋ, ಆ ಎಲ್ಲ ಜಲವು ನಮ್ಮ ಯಜ್ಞವನ್ನು ಪವಿತ್ರಗೊಳಿಸಲಿ. ॥ ೧೭ ॥

೨೪೭. ಅಪೋ ದೇವೀರುಪ ಹ್ವಯೇ ಯತ್ರ ಗಾವಃ ಪಿಬಂತಿ ನಃ ।
ಸಿಂಧುಭ್ಯಃ ಕರ್ತ್ವಂ ಹವಿಃ ॥ ೧೮ ॥

ನಮ್ಮ ದನಕರುಗಳು ಯಾವ ನೀರನ್ನು ಕುಡಿಯುವವೋ ಅದೇ ನೀರನ್ನು ನಾನು ಆಹ್ವಾನಮಾಡುತ್ತೇನೆ. ಯಾವ ನೀರು ನದಿಯರೂಪದಿಂದ ಹರಿಯುತ್ತಿದೆಯೋ, ಆ ಸಮಸ್ತ ಉದಕರಾಶಿಗೆ ಹವ್ಯಕೊಡುವದು ನಮ್ಮ ಕರ್ತವ್ಯವಾಗಿರುವದು. ॥ ೧೮ ॥

೨೪೮. ಅಪ್ಸ್ವಂತರಮೃತಮಪ್ಸು ಭೇಷಜ—ಮಪಾಮುತ ಪ್ರಶಸ್ತಯೇ ।
ದೇವಾ ಭವತ ವಾಜಿನಃ ॥ ೧೯ ॥

ನೀರಿನೊಳಗೆ ಅಮೃತವು ವಾಸಮಾಡುತ್ತದೆ ಮತ್ತು ಓಷಧಿಗಳು ನಿವಾಸ ಮಾಡುತ್ತವೆ; ಆದ್ದರಿಂದ ಋಷಿಗಳೇ! ಆ ನೀರಿನ ಪ್ರಶಂಸೆಗಾಗಿ ಉತ್ಸಾಹಿಗಳಾಗಿರಿ. ॥ ೧೯ ॥

೨೪೯. ಅಪ್ಸು ಮೇ ಸೋಮೋ ಅಬ್ರವೀ—ದಂತರ್ವಿಶ್ವಾನಿ ಭೇಷಜಾ ।
ಅಗ್ನಿಂ ಚ ವಿಶ್ವಶಂಭುವ—ಮಾಪಶ್ಚ ವಿಶ್ವಭೇಷಜೀಃ ॥ ೨೦ ॥

ನೀರಿನಲ್ಲಿ ಔಷಧವಿರುತ್ತದೆಯೆಂದೂ, ಸಂಸಾರವನ್ನು ಸಂತೋಷಗೊಳಿಸುವ ಅಗ್ನಿಯು ವಿದ್ಯುದ್ರೂಪದಿಂದಿರುವನೆಂದೂ, ವ್ಯಾಧಿನಾಶಕವಾದ ಓಷಧಿಗಳು ಉದಕಮಯವಾಗಿರುವವೆಂದೂ, ಸೋಮದೇವತೆಯು ನನ್ನ ಹತ್ತಿರ ಹೇಳಿರುವನು. ॥ ೨೦ ॥

## [ವರ್ಗಃ ೧೨]

೨೫೦. ಆಪಃ ಪೃಣೀತ ಭೇಷಜಂ ವರೂಥಂ ತನ್ವೇ೩ ಮಮ ।
ಜ್ಯೋಕ್ ಚ ಸೂರ್ಯಂ ದೃಶೇ ॥ ೨೧ ॥

ಬಹಳ ವರ್ಷಗಳ ವರೆಗೆ ನಾನು ಸೂರ್ಯನನ್ನು ನೋಡಲು ಸಮರ್ಥನಾಗುವಂತೆ, ಜಲದೇವನೇ! ನನ್ನ ಶರೀರದ ಸಲುವಾಗಿ ರೋಗನಾಶಕವಾದ ಔಷಧವನ್ನು ಪುಷ್ಟಗೊಳಿಸಯ್ಯಾ. ॥ ೨೧ ॥

೨೫೧. ಇದಮಾಪಃ ಪ್ರ ವಹತ ಯತ್ ಕಿಂ ಚ ದುರಿತಂ ಮಯಿ ।
ಯದ್ ವಾಹಮಭಿದುದ್ರೋಹ ಯದ್ ವಾ ಶೇಪ ಉತಾನೃತಂ ॥ ೨೨ ॥

ಜಲದೇವನೇ! ನನ್ನಲ್ಲಿ ಯಾವ ದುಷ್ಕರ್ಮಗಳಿರುವವೋ, ನಾನು ಯಾವುದೇ ಅನ್ಯಾಯವಾದ ಆಚರಣವನ್ನು ಮಾಡಿರುವೆನೋ, ನಾನು ಯಾರಿಗಾದರೂ ಯಾವುದೇ ತರಹದ ಶಾಪವನ್ನು ಕೊಟ್ಟಿರುವೆನೋ ಮತ್ತು ನಾನು ಯಾವುದೇ ಅಸತ್ಯವನ್ನು ಹೇಳಿರುವೆನೋ, ಅವನ್ನೆಲ್ಲ ತೊಳೆದುಹಾಕು. ॥ ೨೨ ॥

೨೫೨. ಆಪೋ ಅದ್ಯಾನ್ವಚಾರಿಷಂ ರಸೇನ ಸಮಗಸ್ಮಹಿ ।
ಪಯಸ್ವಾನಗ್ನ ಆ ಗಹಿ ತಂ ಮಾ ಸಂ ಸೃಜ ವರ್ಚಸಾ ॥ ೨೩ ॥

ಈ ಹೊತ್ತು ಸ್ನಾನದ ಸಲುವಾಗಿ ನೀರಿನಲ್ಲಿ ಪ್ರವೇಶಿಸುತ್ತೇನೆ, ಜಲದ ಸಾರದೊಂದಿಗೆ ಸಮ್ಮಿಲಿತನಾಗುತ್ತೇನೆ. ಜಲಸ್ಥಿತನಾದ ಅಗ್ನಿಯೇ! ಬಾರಯ್ಯಾ. ನನ್ನನ್ನು ತೇಜಸ್ಸಿನಿಂದ ಪರಿಪೂರ್ಣನನ್ನಾಗಿ ಮಾಡು. ॥ ೨೩ ॥

೨೫೩. ಸಂ ಮಾಗ್ನೇ ವರ್ಚಸಾ ಸೃಜ ಸಂ ಪ್ರಜಯಾ ಸಮಾಯುಷಾ ।
ವಿದ್ಯುರ್ಮೇ ಅಸ್ಯ ದೇವಾ ಇಂದ್ರೋ ವಿದ್ಯಾತ್ ಸಹ ಋಷಿಭಿಃ ॥ ೨೪ ॥

ದೇವತೆಗಳೂ, ಇಂದ್ರನೂ, ಋಷಿಗಣವೂ ನನ್ನ ಅನುಷ್ಠಾನವನ್ನು ತಿಳಿಯಲು ಸಮರ್ಥರಾಗುವಂತೆ, ಅಗ್ನಿಯೇ! ನನಗೆ ತೇಜಸ್ಸು, ಸಂತಾನ ಮತ್ತು ದೀರ್ಘಾಯು ಇವುಗಳನ್ನು ಕರುಣಿಸು. ॥ ೨೪ ॥

# ಆರನೇ ಅನುವಾಕ

## ಸೂಕ್ತ: ೨೪

ಈ ಸೂಕ್ತದ ದೇವತೆ: ಅಗ್ನಿ ಮುಂತಾದವರು;
ಋಷಿ: ಅಜೀಗರ್ತನ ಪುತ್ರನಾದ ಶುನಃಶೇಪನು; ಛಂದಸ್ಸು: ಗಾಯತ್ರೀ.

### [ವರ್ಗ: ೧೩]

೨೫೪. ಕಸ್ಯ ನೂನಂ ಕತಮಸ್ಯಾಮೃತಾನಾಂ ಮನಾಮಹೇ ಚಾರು ದೇವಸ್ಯ ನಾಮ ।
ಕೋ ನೋ ಮಹ್ಯಾ ಅದಿತಯೇ ಪುನರ್ದಾತ್ ಪಿತರಂ ಚ
ದೃಶೇಯಂ ಮಾತರಂ ಚ ॥ ೧ ॥

ಸಮಸ್ತ ದೇವತೆಗಳಲ್ಲಿ ಯಾವ ತರಗತಿಯ ಮತ್ತು ಯಾವ ದೇವತೆಯ ಸುಂದರವಾದ ನಾಮೋಚ್ಚಾರಣೆಯನ್ನು ಮಾಡೋಣ? ನಾನು ನನ್ನ ತಂದೆ-ತಾಯಿಗಳ ದರ್ಶನಮಾಡಲು ಸಮರ್ಥನಾಗುವಂತೆ ತಿರುಗಿ ಈ ಪೃಥ್ವಿಯ ಮೇಲೆ ವಾಸ ಮಾಡಲು ನನಗೆ ಯಾವ ದೇವತೆಯು ಪ್ರಚೋದಿಸುವನು? ॥ ೧ ॥

೨೫೫. ಅಗ್ನೇರ್ವಯಂ ಪ್ರಥಮಸ್ಯಾಮೃತಾನಾಂ ಮನಾಮಹೇ ಚಾರು
ದೇವಸ್ಯ ನಾಮ ।
ಸ ನೋ ಮಹ್ಯಾ ಅದಿತಯೇ ಪುನರ್ದಾತ್ ಪಿತರಂ ಚ
ದೃಶೇಯಂ ಮಾತರಂ ಚ ॥ ೨ ॥

ದೇವತೆಗಳಲ್ಲಿ ಸರ್ವಪ್ರಥಮವಾಗಿ ನಾನು ಅಗ್ನಿಯ ಸುಂದರವಾದ ಹೆಸರನ್ನು ತಕ್ಕೊಳ್ಳುತ್ತೇನೆ. ನಾನು ನನ್ನ ತಂದೆ-ತಾಯಿಗಳ ದರ್ಶನಮಾಡಲು ಸಮರ್ಥನಾಗುವಂತೆ ಅಗ್ನಿಯು ನನ್ನನ್ನು ಈ ವಿಶಾಲವಾದ ಪೃಥ್ವಿಯ ಮೇಲೆ ಜೀವಿತವಿಡಲಿ. ॥ ೨ ॥

೨೫೬. ಅಭಿ ತ್ವಾ ದೇವ ಸವಿತ—ರೀಶಾನಂ ವಾರ್ಯಾಣಾಂ ।
ಸದಾವನ್ ಭಾಗಮೀಮಹೇ ॥ ೩ ॥

ಸದಾ-ರಕ್ಷಕನಾಗಿರುವ ಸೂರ್ಯನೇ! ನೀನು ಶ್ರೇಷ್ಠವಾಗಿರುವ ಧನದ ಸ್ವಾಮಿಯಾಗಿರುವೆ; ಆದ್ದರಿಂದ ನಿನ್ನ ಹತ್ತರ ನಾವು ಉಪಭೋಗಿಸಲು ಯೋಗ್ಯವಾದ ಧನಕ್ಕಾಗಿ ಯಾಚಿಸುತ್ತೇವೆ. ॥ ೩ ॥

೨೫೭. ಯಶ್ಚಿದ್ಧಿ ತ ಇತ್ಥಾ ಭಗಃ ಶಶಮಾನಃ ಪುರಾ ನಿದಃ ।
ಅದ್ವೇಷೋ ಹಸ್ತಯೋರ್ದಧೇ ॥ ೪ ॥

ಸವಿತೃದೇವನೇ! ಪ್ರಶಂಸಿತವಾದ, ನಿಂದಾಶೂನ್ಯವಾಗಿರುವ, ದ್ವೇಷರಹಿತವಾಗಿರುವ ಮತ್ತು ಸಂಭೋಗ-ಯೋಗ್ಯವಾದ ಧನವನ್ನು ನೀನು ಎರಡೂ ಕೈಗಳಲ್ಲಿ ಧಾರಣಮಾಡಿರುವೆ. ॥ ೪ ॥

೨೫೮. ಭಗಭಕ್ತಸ್ಯ ತೇ ವಯು—ಮುದಶೇಮ ತವಾವಸಾ ।
ಮೂರ್ಧಾನಂ ರಾಯ ಆರಭೇ ॥ ೫ ॥

ಸೂರ್ಯದೇವನೇ! ನೀನು ಧನಶಾಲಿಯಾಗಿರುವೆ. ನೀನು ರಕ್ಷಿಸುವೆಯಾದ್ದರಿಂದ ಧನದ ಉನ್ನತಿಯಲ್ಲಿ ನಾವು ಪ್ರಯತ್ನಶೀಲರಾಗಿದ್ದೇವೆ. ॥ ೫ ॥

## [ವರ್ಗ: ೧೪]

೨೫೯. ನಹಿ ತೇ ಕ್ಷತ್ರಂ ನ ಸಹೋ ನ ಮನ್ಯುಂ ವಯಶ್ಚನಾಮೀ
ಪತಯಂತ ಆಪುಃ ।
ನೇಮಾ ಆಪೋ ಅನಿಮಿಷಂ ಚರಂತೀ-ರ್ನ ಯೇ ವಾತಸ್ಯ
ಪ್ರಮಿನಂತ್ಯಭ್ವಂ ॥ ೬ ॥

ವರುಣದೇವನೇ! ಈ ಹಾರಾಡುವ ಹಕ್ಕಿಗಳಿಗೆ ನಿನ್ನ ಸಮಾನವಾದ ಬಲ ಮತ್ತು ಪರಾಕ್ರಮಗಳನ್ನು ಗಳಿಸಲು ಶಕ್ಯವಾಗದೇ ಹೋಯಿತು. ನಿನ್ನ ಸದೃಶವಾದ ಕ್ರೋಧವನ್ನೂ ಇವು ಸಂಪಾದಿಸಲಿಲ್ಲ. ನಿರಂತರವಾಗಿ ವಿಹರಣ-ಶೀಲವಾದ ಜಲ-ವಾಯುಗಳ ಗತಿಯೂ ನಿನ್ನ ವೇಗವನ್ನು ಮೀರಲು ಸಮರ್ಥವಾಗಲಿಲ್ಲ. ॥ ೬ ॥

೨೬೦. ಅಬುಧ್ನೇ ರಾಜಾ ವರುಣೋ ವನಸ್ಯೋ-ರ್ಧ್ವಂ ಸ್ತೂಪಂ ದದತೇ ಪೂತದಕ್ಷಃ ।
ನೀಚೀನಾಃ ಸ್ಥುರುಪರಿ ಬುಧ್ನ ಏಷಾ-ಮಸ್ಮೇ ಅಂತರ್ನಿಹಿತಾಃ
ಕೇತವಃ ಸ್ಯುಃ ॥ ೭ ॥

ಪವಿತ್ರ-ಬಲಶಾಲಿಯಾದ ವರುಣನು ಆದಿ-ರಹಿತವಾದ ಅಂತರಿಕ್ಷದಲ್ಲಿ ವಾಸಮಾಡಿ ಶ್ರೇಷ್ಠವಾಗಿರುವ ತೇಜಃಪುಂಜವನ್ನು ಮೇಲಿಂದ ಮೇಲೆಯೇ ಧಾರಣಮಾಡುತ್ತಾನೆ. ತೇಜಃಪುಂಜದ ಮುಖವು ಕೆಳಬದಿಯಲ್ಲಿಯೂ, ಮೂಲವು ಮೇಲಿನ ಬದಿಯಲ್ಲಿಯೂ ಇರುತ್ತದೆ. ಅದರ ಮೂಲಕವೇ ನಮ್ಮ ಪ್ರಾಣಗಳು ಸ್ಥಿರವಾಗಿರುತ್ತವೆ. ॥ ೭ ॥

೨೬೧. ಉರುಂ ಹಿ ರಾಜಾ ವರುಣಶ್ಚಕಾರ ಸೂರ್ಯಾಯ ಪಂಥಾಮನ್ವೇತವಾ ಉ ।
ಅಪದೇ ಪಾದಾ ಪ್ರತಿಧಾತವೇಽಕ-ರುತಾಪವಕ್ತಾ ಹೃದಯಾವಿಧಶ್ಚಿತ್ ॥ ೮ ॥

ದೇವರಾಜನಾದ ವರುಣನು ಸೂರ್ಯನ ಉದಯ ಮತ್ತು ಅಸ್ತಗಳ ಗಮನದ ಸಲುವಾಗಿ ಸೂರ್ಯನ ಪಥವನ್ನು ವಿಸ್ತಾರವಾಗಿ ನಿರ್ಮಿಸಿರುವನು.

ಪಾದರಹಿತವಾದ ಅಂತರಿಕ್ಷ-ಪ್ರದೇಶದಲ್ಲಿ ಸೂರ್ಯನ ಪಾದವಿಕ್ಷೇಪಕ್ಕಾಗಿ ವರುಣನು ಮಾರ್ಗವನ್ನು ಇಟ್ಟಿರುವನು. ಆ ವರುಣದೇವನು ನನ್ನ ಹೃದಯದ ವೇಧಮಾಡುವ ಶತ್ರುವನ್ನು ದೂರಮಾಡಲಿ. ॥ ೮ ॥

೨೬೨. ಶತಂ ತೇ ರಾಜನ್ ಭಿಷಜಃ ಸಹಸ್ರ-ಮುರ್ವೀ ಗಭೀರಾ
ಸುಮತಿಷ್ಟೇ ಅಸ್ತು ।
ಬಾಧಸ್ವ ದೂರೇ ನಿರ್ಋತಿಂ ಪರಾಚೈಃ ಕೃತಂ ಚಿದೇನಃ ಪ್ರ
ಮುಮುಗ್ಧ್ಯಸ್ಮತ್ ॥ ೯ ॥

ವರುಣರಾಜನೇ! ನಿನ್ನ ಹತ್ತಿರ ಸಾವಿರಾರು ಔಷಧಿಗಳಿವೆ. ನಿನ್ನ ಸುಮತಿಯು ವಿಸ್ತೀರ್ಣವೂ, ಗಂಭೀರವೂ ಆಗಲಿ. ನಿರ್ಋತವಾದ ಪಾಪವನ್ನು ದೇವತಾವಿಮುಖನನ್ನಾಗಿ ಮಾಡಿ ದೂರಮಾಡು. ನಮ್ಮಿಂದ ಆಚರಿಸಲ್ಪಟ್ಟ ಪಾಪದಿಂದ ನಮ್ಮನ್ನು ಮುಕ್ತಗೊಳಿಸು. ॥ ೯ ॥

೨೬೩. ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶ್ರೇ ಕುಹ
ಚಿದ್ ದಿವೇಯುಃ ।
ಅದಬ್ಧಾನಿ ವರುಣಸ್ಯ ವ್ರತಾನಿ ವಿಚಾಕಶಚ್ಚಂದ್ರಮಾ ನಕ್ತಮೇತಿ ॥ ೧೦ ॥

ಮೇಲಿರುವ ಆಕಾಶದಲ್ಲಿ ಸಂಸ್ಥಾಪಿತವಾದ ಮತ್ತು ರಾತ್ರಿಯಾದ ಮೇಲೆ ಕಣ್ಣಿಗೆ ಕಾಣಿಸುವ ಈ ಸಪ್ತರ್ಷಿ ನಕ್ಷತ್ರಗಳು ದಿನ ಬೆಳಗಾದ ಮೇಲೆ ಎಲ್ಲಿಗೆ ಹೋಗುತ್ತವೆ? ವರುಣದೇವನ ಶಕ್ತಿಯು ಅಪ್ರತಿಹತವಾದದ್ದು. ಅವನ ಆಜ್ಞೆಯಿಂದಲೇ ರಾತ್ರಿಯಲ್ಲಿ ಚಂದ್ರಮನು ಪ್ರಕಾಶಮಾನನಾಗುತ್ತಾನೆ. ॥ ೧೦ ॥

## [ವರ್ಗಃ ೧೫]

೨೬೪. ತತ್ ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ ತದಾ ಶಾಸ್ತೇ
ಯಜಮಾನೋ ಹವಿರ್ಭಿಃ ।
ಅಹೇಳಮಾನೋ ವರುಣೇಹ ಬೋಧ್ಯು-ರುಶಂಸ ಮಾ ನ
ಆಯುಃ ಪ್ರಮೋಷೀಃ ॥ ೧೧ ॥

ನಾನು ಸ್ತೋತ್ರದಿಂದ ನಿನ್ನ ಸ್ತುತಿಯನ್ನು ಮಾಡಿ ನಿನ್ನ ಹತ್ತಿರ ಅದೇ ಪರಮಾಯುಸ್ಸನ್ನು ಬೇಡಿಕೊಳ್ಳುತ್ತೇನೆ. ಹವ್ಯದ ಸಹಾಯದಿಂದ ಯಜಮಾನನಾದರೂ ಅದನ್ನೇ ದೊರಕಿಸಲು ಪ್ರಾರ್ಥನೆಯನ್ನು ಮಾಡುತ್ತಾನೆ. ವರುಣನೇ! ನೀನು ಈ ವಿಷಯದಲ್ಲಿ ಉದಾಸೀನನಾಗದೆ ಲಕ್ಷ್ಯಕೊಡಯ್ಯಾ. ನೀನು ಅನಂತ ಜೀವರ ಪ್ರಾರ್ಥನೆಗೆ ಪಾತ್ರನಾಗಿದ್ದೀ. ನನ್ನ ಆಯುಷ್ಯವನ್ನು ತಕ್ಕೊಳ್ಳಬೇಡಯ್ಯಾ. ॥ ೧೧ ॥

೨೬೫. ತದಿನ್ನಕ್ತಂ ತದ್ ದಿವಾ ಮಹ್ಯಮಾಹುಸ್ ತದಯಂ ಕೇತೋ ಹೃದ
ಆ ವಿಚಷ್ಟೇ ।
ಶುನಃಶೇಪೋ ಯಮಹ್ವದ್ ಗೃಭೀತಃ ಸೋ ಅಸ್ಮಾನ್ ರಾಜಾ
ವರುಣೋ ಮುಮೋಕ್ತು　　॥ ೧೨ ॥

ಹಗಲೂ-ಇರುಳೂ, ಯಾವಾಗಲೂ ಲೋಕದಲ್ಲಿ ನನಗೆ ಈ ಪ್ರಕಾರ ಹೇಳಲ್ಪಟ್ಟಿದೆ. ನನ್ನ ಹೃದಯಸ್ಥವಾದ ಜ್ಞಾನವೂ ಸಹ ಇದೇ ತರದ ಸಾಕ್ಷಿಯನ್ನು ಕೊಡುತ್ತದೆ— ಆಬದ್ಧನಾಗಿ ಶುನಃಶೇಪನು ಯಾವ ವರುಣನ ಆಹ್ವಾನ ಮಾಡಿದ್ದನೋ, ಅದೇ ವರುಣರಾಜನು ನಮಗೆ ಮುಕ್ತಿದಾನವನ್ನು ಕೊಡಲಿ. ॥ ೧೨ ॥

೨೬೬. ಶುನಃಶೇಪೋ ಹ್ಯಹ್ವದ್ ಗೃಭೀತಸ್ ತ್ರಿಷ್ವಾದಿತ್ಯಂ ದ್ರುಪದೇಷು ಬದ್ಧಃ ॥
ಅವೈನಂ ರಾಜಾ ವರುಣಃ ಸಸೃಜ್ಯಾದ್ ವಿದ್ವಾಂ ಅದಬ್ಧೋ ವಿ
ಮುಮೋಕ್ತು ಪಾಶಾನ್　　॥ ೧೩ ॥

ಶುನಃಶ್ಶೇಪನು ಧೃತ ಮತ್ತು ಮೂರು ಕಾಷ್ಠಗಳಲ್ಲಿ ಬಿಗಿದು ಕಟ್ಟಲ್ಪಟ್ಟಿದ್ದಾಗ್ಗೆ ಅದಿತಿಯ ಪುತ್ರನಾದ ವರುಣನ ಆಹ್ವಾನವನ್ನು ಮಾಡಿದ್ದನು: ಆದ್ದರಿಂದಲೇ ವಿದ್ವಾಂಸನೂ, ಕರುಣಾಕರನೂ ಆಗಿರುವ ವರುಣನು ಶುನಃಶ್ಶೇಪನನ್ನು ಮುಕ್ತಗೊಳಿಸಿದ್ದನು, ಅವನ ಬಂಧನಗಳನ್ನು ಬಿಚ್ಚಿಸಿದ್ದನು. ॥ ೧೩ ॥

೨೬೭. ಅವ ತೇ ಹೇಳೋ ವರುಣ ನಮೋಭಿ-ರವ ಯಜ್ಞೇಭಿರೀಮಹೇ ಹವಿರ್ಭಿಃ ।
ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ॥ ೧೪ ॥

ವರುಣನೇ! ನಮಸ್ಕಾರಮಾಡಿ ನಾವು ನಿನ್ನ ಕ್ರೋಧವನ್ನು ದೂರಮಾಡುತ್ತೇವೆ ಮತ್ತು ಯಜ್ಞದಲ್ಲಿ ಹವ್ಯವನ್ನು ಕೊಟ್ಟು ನಿನ್ನ ಕೋಪವನ್ನು ಶಾಂತಗೊಳಿಸುತ್ತೇವೆ. ಪ್ರಚೇತಸನೇ! ನಮ್ಮ ಸಲುವಾಗಿ ಈ ಯಜ್ಞದಲ್ಲಿ ನಿವಾಸ ಮಾಡಿ ನಾವು ಆಚರಿಸಿದ ಪಾಪವನ್ನು ಶಿಥಿಲಮಾಡಯ್ಯಾ. ॥ ೧೪ ॥

೨೬೮. ಉದುತ್ತಮಂ ವರುಣ ಪಾಶಮಸ್ಮ-ದವಾಧಮಂ ವಿ ಮಧ್ಯಮಂ ಶ್ರಥಾಯ ।
ಅಥಾ ವಯಮಾದಿತ್ಯ ವ್ರತೇ ತವಾ-ನಾಗಸೋ ಅದಿತಯೇ ಸ್ಯಾಮ ॥ ೧೫ ॥

ವರುಣನೇ! ನನ್ನ ಮೇಲಿನ ಪಾಶವನ್ನು ಮೇಲಿನಿಂದಲೇ ಮತ್ತು ಕೆಳಗಿನ ಪಾಶವನ್ನು ಕೆಳಗಿನಿಂದಲೇ ಬಿಚ್ಚಿಬಿಡು ಮತ್ತು ಮಧ್ಯದಲ್ಲಿಯ ಪಾಶವನ್ನೂ ಬಿಚ್ಚಿ ಅದನ್ನು ಸಡಲಿಸು. ತರುವಾಯ, ಅದಿತಿಯ ಪುತ್ರನಾದ ವರುಣನೇ! ನಾವು ನಿನ್ನ ವ್ರತವನ್ನು ಭಂಗಿಸದೆಯೇ ಪಾಪರಹಿತರಾಗುವೆವು. ॥ ೧೫ ॥

## ಸೂಕ್ತ: ೨೫

ಈ ಸೂಕ್ತದ ದೇವತೆ: ವರುಣನು; ಋಷಿ: ಶುನಃಶೇಪನು; ಛಂದಸ್ಸು: ಗಾಯತ್ರೀ.

### [ವರ್ಗ: ೧೬]

೨೧೯. ಯಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಂ ।
ಮಿನೀಮಸಿ ದ್ಯವಿದ್ಯವಿ ॥ ೧ ॥

ವರುಣನೇ! ಯಾವ ರೀತಿಯಲ್ಲಿ ಸಂಸಾರದ ಮಾನವರು ನಿನ್ನ ವ್ರತಾನುಷ್ಠಾನದಲ್ಲಿ ಭ್ರಾಂತರಾಗುತ್ತಾರೋ, ಅದೇ ಪ್ರಕಾರ ನಾವಾದರೂ ಪ್ರತಿದಿನವೂ ಪ್ರಮಾದಮಾಡುತ್ತೇವೆ. ॥ ೧ ॥

೨೨೦. ಮಾ ನೋ ವಧಾಯ ಹತ್ನವೇ ಜಿಹೀಳಾನಸ್ಯ ರೀರಧಃ ।
ಮಾ ಹೃಣಾನಸ್ಯ ಮನ್ಯವೇ ॥ ೨ ॥

ವರುಣನೇ! ಅನಾದರಕಾರಿಯೂ, ಘಾತಕನೂ ಆಗಿ ನೀನು ನಮ್ಮನ್ನು ವಧಿಸಬೇಡಯ್ಯಾ! ಕ್ರುದ್ಧನಾಗಿ ನಮ್ಮ ಮೇಲೆ ಸಿಟ್ಟಾಗಬೇಡಪ್ಪಾ. ॥ ೨ ॥

೨೨೧. ವಿ ಮೃಳೀಕಾಯ ತೇ ಮನೋ ರಥೀರಶ್ವಂ ನ ಸಂದಿತಂ ।
ಗೀರ್ಭಿರ್ವರುಣ ಸೀಮಹಿ ॥ ೩ ॥

ವರುಣದೇವನೇ! ಯಾವ ಪ್ರಕಾರದಲ್ಲಿ ರಥದ ಸ್ವಾಮಿಯು ತನ್ನ ದಣಿದ ಕುದುರೆಗಳನ್ನು ಶಾಂತಗೊಳಿಸುತ್ತಾನೋ, ಅದೇ ರೀತಿಯಲ್ಲಿ ನಮ್ಮ ಸುಖದ ಸಲುವಾಗಿ ಸ್ತುತಿಯ ಸಹಾಯದಿಂದ ನಾವು ನಿನ್ನ ಮನಸ್ಸನ್ನು ಪ್ರಸನ್ನಗೊಳಿಸುತ್ತೇವೆ. ॥ ೩ ॥

೨೨೨. ಪರಾ ಹಿ ಮೇ ವಿಮನ್ಯವಃ ಪತಂತಿ ವಸ್ಯಇಷ್ಟಯೇ ।
ವಯೋ ನ ವಸತೀರುಪ ॥ ೪ ॥

ವರುಣನೇ! ಯಾವ ನಮೂನೆಯಲ್ಲಿ ಹಕ್ಕಿಗಳು ತಮ್ಮ ಗೂಡುಗಳೆಡೆಗೆ ಓಡಿಹೋಗುವವೋ, ಅದೇ ಪ್ರಕಾರ ನಮ್ಮ ಕ್ರೋಧ-ರಹಿತವಾದ ಚಿಂತೆಗಳು ಧನಪ್ರಾಪ್ತಿಯಾಗುವಲ್ಲಿ ಓಡಹತ್ತಿವೆ. ॥ ೪ ॥

೨೨೩. ಕದಾ ಕ್ಷತ್ರಶ್ರಿಯಂ ನರ—ಮಾ ವರುಣಂ ಕರಾಮಹೇ ।
ಮೃಳೀಕಾಯೋರುಚಕ್ಷಸಂ ॥ ೫ ॥

ವರುಣದೇವನು ಬಲಶಾಲಿಯಾದ ನೇತಾರನೂ, ಅಸಂಖ್ಯ ಜನತೆಗೆ ದ್ರಷ್ಟಾರನೂ ಆಗಿರುವನು. ನಮ್ಮ ಸುಖಕ್ಕಾಗಿ ನಾವು ಎಂದು ಅವನನ್ನು ಯಜ್ಞದಲ್ಲಿ ಬರಮಾಡೋಣ? ॥ ೫ ॥

## [ವರ್ಗ: ೧೭]

೨೭೪. ತದಿತ್ ಸಮಾನಮಾಶಾತೇ ವೇನಂತಾ ನ ಪ್ರ ಯುಚ್ಛತಃ ।
ಧೃತವ್ರತಾಯ ದಾಶುಷೇ ॥ ೬ ॥

ಯಜ್ಞವನ್ನು ಮಾಡುವ ಹವ್ಯದಾತಾರರ ಮೇಲೆ ಪ್ರಸನ್ನರಾಗಿ ಮಿತ್ರ ಮತ್ತು ವರುಣ ಇವರು ಸಾಧಾರಣವಾದ ಹವ್ಯವನ್ನೂ ಕೂಡ ಸ್ವೀಕರಿಸುತ್ತಾರೆ; ಸಾಧಾರಣವೆಂದು ಇದನ್ನು ತ್ಯಜಿಸುವದಿಲ್ಲ. ॥ ೬ ॥

೨೭೫. ವೇದಾ ಯೋ ವೀನಾಂ ಪದ—ಮಂತರಿಕ್ಷೇಣ ಪತತಾಂ ।
ವೇದ ನಾವಃ ಸಮುದ್ರಿಯಃ ॥ ೭ ॥

ವರುಣನಿಗೆ ಅಂತರಿಕ್ಷಚಾರಿಯಾದ ಹಕ್ಕಿಗಳ ಮಾರ್ಗವೂ, ಸಮುದ್ರದ ಮೇಲಿನ ನೌಕಾ-ಮಾರ್ಗವೂ ಗೊತ್ತಿವೆ. ॥ ೭ ॥

೨೭೬. ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ ।
ವೇದಾ ಯ ಉಪಜಾಯತೇ ॥ ೮ ॥

ವ್ರತಾವಲಂಬನವನ್ನು ಮಾಡಿ ಋತುವಿಗೆ ಅನುಸಾರವಾಗಿ ಫಲೋತ್ಪಾದಕವಾದ ಹದಿನೆರಡೂ ತಿಂಗಳುಗಳ ಪರಿಚಯುವು ವರುಣನಿಗಿದೆ ಮತ್ತು ಇನ್ನೂ ಉತ್ಪನ್ನವಾಗದ, ಆದರೆ ಮುಂದೆ ಉತ್ಪನ್ನವಾಗುವ ಹದಿಮೂರನೇ ತಿಂಗಳನ್ನೂ ವರುಣನು ಅರಿತಿರುವನು. ॥ ೮ ॥

೨೭೭. ವೇದ ವಾತಸ್ಯ ವರ್ತನಿ—ಮುರೋರ್ಋಷ್ವಸ್ಯ ಬೃಹತಃ ।
ವೇದಾ ಯೇ ಅಧ್ಯಾಸತೇ ॥ ೯ ॥

ವಿಸ್ತೃತವೂ, ಶೋಭನವೂ, ಮಹತ್ತಮವೂ ಆದ ವಾಯುಪಥವನ್ನು ವರುಣನು ತಿಳಿದಿರುವನು ಮತ್ತು ಮೇಲೆ, ಆಕಾಶದಲ್ಲಿ, ನಿವಾಸಮಾಡುವ ದೇವತೆಗಳನ್ನೂ ಕೂಡ ಅವನು ತಿಳಿದವನಿರುವನು. ॥ ೯ ॥

೨೭೮. ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾ೩ ಸ್ವಾ ।
ಸಾಮ್ರಾಜ್ಯಾಯ ಸುಕ್ರತುಃ ॥ ೧೦ ॥

ಧೃತವ್ರತನೂ, ಶೋಭನವಾದ ಕೆಲಸಗಳನ್ನು ಮಾಡುವವನೂ ಆದ ವರುಣನು ದೈವೀ ಸಂತಾನಗಳ ಮಧ್ಯದಲ್ಲಿ ಸಾಮ್ರಾಜ್ಯ-ಸಂಸಿದ್ಧಿಗಾಗಿ ಬಂದು ಆಸೀನನಾಗಿದ್ದಾನೆ. ॥ ೧೦ ॥

## [ವರ್ಗಃ ೧೮]

೨೭೯. ಅತೋ ವಿಶ್ವಾನ್ಯದ್ಭುತಾ ಚಿಕಿತ್ವಾಂ ಅಭಿ ಪಶ್ಯತಿ ।
　　ಕೃತಾನಿ ಯಾ ಚ ಕರ್ತ್ವಾ　　॥ ೧೧ ॥

ಜ್ಞಾನಿಯಾದ ಮಾನವನು ವರುಣನ ದಯೆಯಿಂದಲೇ ಇಂದು ಆಗುತ್ತಿರುವ ಮತ್ತು ಮುಂದೆ ಜರುಗುವ—ಎಲ್ಲಾ ಅದ್ಭುತವಾದ ಘಟನೆಗಳನ್ನು ತಿಳಿಯಾಗಿ ನೋಡುತ್ತಾನೆ.　　॥ ೧೧ ॥

೨೮೦. ಸ ನೋ ವಿಶ್ವಾಹಾ ಸುಕ್ರತು—ರಾದಿತ್ಯಃ ಸುಪಥಾಕರತ್ ।
　　ಪ್ರ ಣ ಆಯೂಂಷಿ ತಾರಿಷತ್　　॥ ೧೨ ॥

ಅದೇ ಸತ್ಕರ್ಮಪರಾಯಣನಾದ ಮತ್ತು ಅದಿತಿಯ ಪುತ್ರನಾದ ವರುಣನು ನಮಗೆ ಯಾವಾಗಲೂ ಸುಪಥಗಾಮಿಗಳನ್ನಾಗಿ ಪರಿವರ್ತಿಸಿ, ನಮ್ಮ ಆಯುಷ್ಯವನ್ನು ವರ್ಧಿಸಲಿ.　　॥ ೧೨ ॥

೨೮೧. ಬಿಭ್ರದ್ ದ್ರಾಪಿಂ ಹಿರಣ್ಯಯಂ ವರುಣೋ ವಸ್ತ ನಿರ್ಣಿಜಂ ।
　　ಪರಿ ಸ್ಪಶೋ ನಿ ಷೇದಿರೇ　　॥ ೧೩ ॥

ತನ್ನ ಪುಷ್ಟವಾದ ಶರೀರವನ್ನು ಆಚ್ಛಾದಿಸಲು ವರುಣನು ಸ್ವರ್ಣವಸ್ತ್ರವನ್ನು ಧರಿಸುವದರಿಂದ ನಾಲ್ಕೂ ಕಡೆಗೆ ಹಿರಣ್ಯಸ್ಪರ್ಶಿಗಳಾದ ಕಿರಣಗಳು ಮನಮೋಹಕವಾಗಿ ಹರಡುತ್ತಿವೆ.　　॥ ೧೩ ॥

೨೮೨. ನ ಯಂ ದಿಪ್ಸಂತಿ ದಿಪ್ಸವೋ ನ ದ್ರುಹ್ವಾಣೋ ಜನಾನಾಂ ।
　　ನ ದೇವಮಭಿಮಾತಯಃ　　॥ ೧೪ ॥

ವರುಣದೇವನ ಹತ್ತಿರ ಶತ್ರುಗಳು ಶತ್ರುತ್ವವನ್ನು ಮಾಡಲು ಅಸಮರ್ಥರಾಗುತ್ತಾರೆ, ಮನುಷ್ಯಪೀಡಕರಿಗೆ ಅವನನ್ನು ಪೀಡಿಸಲು ಆಗುವದಿಲ್ಲ ಮತ್ತು ಪಾಪಿಗಳು ಅವನ ಬಳಿಗೆ ಬಂದರೆ ತಮ್ಮ ಪಾಪಾಚರಣೆಯನ್ನು ಬಿಟ್ಟುಬಿಡುತ್ತಾರೆ—ಅವನ ಮಹಿಮೆಯೇ ಈ ತರಹದ್ದು.　　॥ ೧೪ ॥

೨೮೩. ಉತ ಯೋ ಮಾನುಷೇಷ್ವಾ ಯಶಶ್ಚಕ್ರೇ ಅಸಾಮ್ಯಾ ।
　　ಅಸ್ಮಾಕಮುದರೇಷ್ವಾ　　॥ ೧೫ ॥

ಮಾನವರ ಉದರಪೂರ್ತಿಗಾಗಿ, ಅದರಲ್ಲೂ ನಮ್ಮ ಹೊಟ್ಟೆಯ ಸಲುವಾಗಿ, ವರುಣನು ಯಥೇಷ್ಟವಾಗಿ ಅನ್ನವನ್ನು ತಯಾರಿಸಿರುವನು.　　॥ ೧೫ ॥

## [ವರ್ಗಃ ೧೯]

೨೮೪. ಪರಾ ಮೇ ಯಂತಿ ಧೀತಯೋ ಗಾವೋ ನ ಗವ್ಯೂತೀರನು ।

ಇಚ್ಛಂತೀರುರುಚಕ್ಷಸಂ ॥ ೧೬ ॥

ಬಹಳ ಮಂದಿಗಳು ವರುಣನನ್ನು ನೋಡಿರುವರು. ದನಕರುಗಳು ಹಟ್ಟಿಯ ಕಡೆಗೆ ಅಭಿಮುಖವಾಗಿ ಹೋಗುವಂತೆ, ನಮ್ಮ ನಿವೃತ್ತಿರಹಿತವಾದ ವಿಚಾರಗಳು ವರುಣನ ಕಡೆಗೆ ಅಭಿಮುಖವಾಗಲಿ. ॥ ೧೬ ॥

೨೮೫. ಸಂ ನು ವೋಚಾವಹೈ ಪುನರ್ಯತೋ ಮೇ ಮಧ್ವಾಭೃತಂ ।

ಹೋತೇವ ಕ್ಷದಸೇ ಪ್ರಿಯಂ ॥ ೧೭ ॥

ವರುಣನೇ! ನನ್ನ ಮಧುರವಾದ ಹವ್ಯವು ಸಿದ್ಧವಾಗಿದೆ; ಆದ್ದರಿಂದ ಹೋತಾರನಂತೆ ನೀನು ಪ್ರಿಯಕರವಾದ ಹವ್ಯವನ್ನು ಭಕ್ಷಿಸಯ್ಯಾ. ಅದರ ತರುವಾಯ ನಾವಿಬ್ಬರೂ ಮಾತನಾಡುವಾ. ॥ ೧೭ ॥

೨೮೬. ದರ್ಶಂ ನು ವಿಶ್ವದರ್ಶತಂ ದರ್ಶಂ ರಥಮಧಿ ಕ್ಷಮಿ ।

ಏತಾ ಜುಷತ ಮೇ ಗಿರಃ ॥ ೧೮ ॥

ಸರ್ವ-ದರ್ಶನೀಯನಾದ ವರುಣನನ್ನು ನಾನು ನೋಡಿದ್ದೇನೆ. ಅನೇಕ ಸಲ ಭೂಮಿಯ ಮೇಲೆ ವರುಣನ ರಥವನ್ನು ನಾನು ಕಂಡಿದ್ದೇನೆ. ವರುಣನು ನನ್ನ ಸ್ತುತಿಯನ್ನು ಸ್ವೀಕರಿಸಿರುವನು. ॥ ೧೮ ॥

೨೮೭. ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಳಯ ।

ತ್ವಾಮವಸ್ಯುರಾ ಚಕೇ ॥ ೧೯ ॥

ವರುಣನೇ! ನನ್ನ ಈ ಆಹ್ವಾನವನ್ನು ಅವಧರಿಸು. ಇಂದು ನನ್ನನ್ನು ಸಂತೋಷಗೊಳಿಸು. ನನ್ನ ರಕ್ಷಣೆಗಾಗಿ ನಾನು ನಿನ್ನನ್ನು ಕರೆಯುತ್ತೇನೆ. ॥ ೧೯ ॥

೨೮೮. ತ್ವಂ ವಿಶ್ವಸ್ಯ ಮೇಧಿರ ದಿವಶ್ಚ ಗ್ಮಶ್ಚ ರಾಜಸಿ ।

ಸ ಯಾಮನಿ ಪ್ರತಿ ಶ್ರುಧಿ ॥ ೨೦ ॥

ಮೇಧಾವಿಯಾದ ವರುಣನೇ! ನೀನು ದ್ಯುಲೋಕ, ಭೂಲೋಕ ಮತ್ತು ಸಮಸ್ತ ಸಂಸಾರದಲ್ಲಿ ದೀಪ್ತಿಮಂತನಾಗಿರುವೆ. ನಮ್ಮ ರಕ್ಷಣೆಯ ಸಲುವಾಗಿ ಮಾಡಿದ ಪ್ರಾರ್ಥನೆಯನ್ನು ಕೇಳಿ ನೀನು ಅದಕ್ಕೆ ಓಗೊಡು. ॥ ೨೦ ॥

೨೮೯. ಉದುತ್ತಮಂ ಮುಮುಗ್ಧಿ ನೋ ವಿ ಪಾಶಂ ಮಧ್ಯಮಂ ಚೃತ ।

ಅವಾಧಮಾನಿ ಜೀವಸೇ ॥ ೨೧ ॥

ನಮ್ಮ ಮೇಲಿನ ಪಾಶವನ್ನು ಮೇಲಿಂದಲೇ ಬಿಚ್ಚಿಬಿಡು. ನಾವು ಜೀವಿತರಾಗಿ ಬಾಳುವಂತೆ ನಮ್ಮ ಮಧ್ಯದ ಮತ್ತು ಕೆಳಗಿನ ಪಾಶಗಳನ್ನೂ ಸಡಿಲಿಸಯ್ಯಾ. ॥ ೨೧ ॥

## ಸೂಕ್ತ: ೨೬

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಶುನಃಶೇಪನು; ಛಂದಸ್ಸು: ಗಾಯತ್ರೀ.

### [ವರ್ಗ: ೨೦]

೨೯೦. ವಸಿಷ್ವಾ ಹಿ ಮಿಯೇಧ್ಯ ವಸ್ತ್ರಾಣ್ಯೂರ್ಜಾಂ ಪತೇ ।

ಸೇಮಂ ನೋ ಅಧ್ವರಂ ಯಜ ॥ ೧ ॥

ಯಜ್ಞಪಾತ್ರನೂ, ಅನ್ನಭಾಜನನೂ ಆದ ಅಗ್ನಿದೇವನೇ! ಸ್ವತೇಜಗ್ರಹಣ ಮಾಡಿ ನಮ್ಮ ಯಜ್ಞವನ್ನು ಸಂಪಾದಿಸಯ್ಯಾ. ॥ ೧ ॥

೨೯೧. ನಿ ನೋ ಹೋತಾ ವರೇಣ್ಯಃ ಸದಾ ಯವಿಷ್ಠ ಮನ್ಮಭಿಃ ।

ಅಗ್ನೇ ದಿವಿತ್ಮತಾ ವಚಃ ॥ ೨ ॥

ಅಗ್ನಿಯೇ! ನೀನು ಯಾವಾಗಲೂ ತರುಣನೂ, ಶ್ರೇಷ್ಠನೂ, ತೇಜಸ್ವಿಯೂ ಆಗಿರುವೆ. ನಮ್ಮ ಹೋಮದ ಕರ್ತಾರನಾಗಿಯೂ, ನಮ್ಮ ಪ್ರಕಾಶಮಯವಾದ ವಾಕ್ಯಗಳಿಂದ ಸ್ತುತಿಸಲ್ಪಟ್ಟವನಾಗಿಯೂ ಆಸೀನನಾಗು. ॥ ೨ ॥

೨೯೨. ಆ ಹಿ ಷ್ಮಾ ಸೂನವೇ ಪಿತಾ—ಪಿರ್ಯಜತ್ಯಾಪಯೇ ।

ಸಖಾ ಸಖ್ಯೇ ವರೇಣ್ಯಃ ॥ ೩ ॥

ಶ್ರೇಷ್ಠನಾದ ಅಗ್ನಿದೇವನೇ! ತಂದೆಯು ಮಗನಿಗೆ, ಬಂಧುವು ಬಂಧುವಿಗೆ ಮತ್ತು ಮಿತ್ರನಾದವನು ಗೆಳೆಯನಿಗೆ ದಾನಕೊಡುವಂತೆ, ನೀನು ನನಗೆ ದಾನಪರಾಯಣನಾಗಯ್ಯಾ. ॥ ೩ ॥

೨೯೩. ಆ ನೋ ಬರ್ಹೀ ರಿಶಾದಸೋ ವರುಣೋ ಮಿತ್ರೋ ಅರ್ಯಮಾ ।

ಸೀದಂತು ಮನುಷೋ ಯಥಾ ॥ ೪ ॥

ಯಾವ ರೀತಿಯಲ್ಲಿ ಶತ್ರುಂಜಯರಾದ ಮಿತ್ರ, ವರುಣ ಮತ್ತು ಅರ್ಯಮ ಇವರು ಮನುವಿನ ಯಜ್ಞದಲ್ಲಿ ಬಂದು ಕುಳಿತಿದ್ದರೋ, ಅದೇ ರೀತಿಯಲ್ಲಿ ಈಗಲೂ ನಮ್ಮ ಯಜ್ಞದ ಕುಶಗಳ ಮೇಲೆ ಆಸೀನರಾಗಲಿ. ॥ ೪ ॥

೨೯೪. ಪೂರ್ವ್ಯ ಹೋತರಸ್ಯ ನೋ ಮಂದಸ್ವ ಸಖ್ಯಸ್ಯ ಚ ।

ಇಮಾ ಉ ಷು ಶ್ರುಧೀ ಗಿರಃ ॥ ೫ ॥

ಪುರಾಣಹೋಮಸಂಪಾದಕನೇ! ನಮ್ಮ ಈ ಯಜ್ಞ ಮತ್ತು ಗೆಳೆತನಗಳಿಂದ ನೀನು ಪ್ರಸನ್ನನಾಗಿ, ನಾವು ಹಾಡುವ ಸ್ತುತಿ-ವಚನಗಳನ್ನು ಕೇಳಯ್ಯಾ. ॥ ೫ ॥

## [ವರ್ಗ: ೨೧]

೨೯೫. ಯಚ್ಚಿದ್ಧಿ ಶಶ್ವತಾ ತನಾ ದೇವಂ ದೇವಂ ಯಜಾಮಹೇ ।
ತ್ವೇ ಇದ್ಧೂಯತೇ ಹವಿಃ ॥ ೬ ॥

ನಿತ್ಯವಾದ ಮತ್ತು ವಿಸ್ತೀರ್ಣವಾದ ಯಾವ ಹವ್ಯದ ಸಹಾಯದಿಂದ ನಾವು ಮತ್ತು ಇತರರೂ ಸಹ ಬೇರೆ ಬೇರೆ ದೇವತೆಗಳಿಗಾಗಿ ಯಜ್ಞವನ್ನು ಮಾಡುತ್ತೇವೋ, ಆ ಎಲ್ಲ ಹವ್ಯವು ನಿನಗೆ ತಲಪುತ್ತದೆ. ॥ ೬ ॥

೨೯೬. ಪ್ರಿಯೋ ನೋ ಅಸ್ತು ವಿಶ್ಪತಿ—ರ್ಹೋತಾ ಮಂದ್ರೋ ವರೇಣ್ಯಃ ।
ಪ್ರಿಯಾಃ ಸ್ವಗ್ನಯೋ ವಯಂ ॥ ೭ ॥

ಸರ್ವ-ಪ್ರಜಾ-ರಕ್ಷಕನೂ, ಹೋಮ-ಸಂಪಾದಕನೂ, ಪ್ರಸನ್ನನೂ, ವರೇಣ್ಯನೂ ಆಗಿರುವ ಅಗ್ನಿಯು ನಮಗೆ ಪ್ರಿಯನಾಗಲಿ; ನಾವಾದರೂ ಶೋಭನವಾದ ಅಗ್ನಿಯಿಂದ ಸಂಯುಕ್ತರಾಗಿ ಅಗ್ನಿಗೆ ಪ್ರಿಯರಾಗುವಾ. ॥ ೭ ॥

೨೯೭. ಸ್ವಗ್ನಯೋ ಹಿ ವಾರ್ಯಂ ದೇವಾಸೋ ದಧಿರೇ ಚ ನಃ ।
ಸ್ವಗ್ನಯೋ ಮನಾಮಹೇ ॥ ೮ ॥

ಶೋಭನೀಯವಾದ ಅಗ್ನಿಯಿಂದ ಯುಕ್ತರಾದ ಮತ್ತು ದೀಪ್ತಿಮಂತರಾದ ಋತ್ವಿಜರು ನಮ್ಮ ಶ್ರೇಷ್ಠವಾದ ಹವ್ಯವನ್ನು ಧಾರಣಮಾಡಿದ್ದಾರೆ; ಆದ್ದರಿಂದ ನಾವು ಶೋಭಿಸುವ ಅಗ್ನಿಯಿಂದ ಸಂಯುಕ್ತರಾಗಿ ಪ್ರಾರ್ಥನೆಯನ್ನು ಪ್ರಾರಂಭಿಸುತ್ತೇವೆ. ॥ ೮ ॥

೨೯೮. ಅಥಾ ನ ಉಭಯೇಷಾ—ಮಮೃತ ಮರ್ತ್ಯಾನಾಂ ।
ಮಿಥಃ ಸಂತು ಪ್ರಶಸ್ತಯಃ ॥ ೯ ॥

ಅಗ್ನಿದೇವನೇ! ನೀನು ಅಮರನಾಗಿರುವೆ ಮತ್ತು ನಾವಾದರೊ ಮರಣಶೀಲರಾದ ಮನುಷ್ಯರು. ಬಾರಯ್ಯಾ, ನಾವು ಪರಸ್ಪರ ಪ್ರಶಂಸೆಯನ್ನು ಮಾಡುವಾ. ॥ ೯ ॥

೨೯೯. ವಿಶ್ವೇಭಿರಗ್ನೇ ಅಗ್ನಿಭಿ—ರಿಮಂ ಯಜ್ಞಮಿದಂ ವಚಃ ।
ಚನೋ ಧಾಃ ಸಹಸೋ ಯಹೋ ॥ ೧೦ ॥

ಶಕ್ತಿಯ ಪುತ್ರನಾದ ಅಗ್ನಿಯೇ! ನೀನು ಎಲ್ಲ ಅಗ್ನಿಗಳೊಂದಿಗೆ ಈ ಯಜ್ಞ ಮತ್ತು ಸ್ತೋತ್ರಗಳನ್ನು ಸ್ವೀಕರಿಸಿ ಅನ್ನಪ್ರದಾನ ಮಾಡಯ್ಯಾ. ॥ ೧೦ ॥

## ಸೂಕ್ತ: ೨೭

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಶುನಃಶೇಪನು; ಛಂದಸ್ಸು: ಗಾಯತ್ರೀ.

### [ವರ್ಗ: ೨೨]

೩೦೦. ಅಶ್ವಂ ನ ತ್ವಾ ವಾರವಂತಂ ವಂದಧ್ಯಾ ಅಗ್ನಿಂ ನಮೋಭಿಃ ।
ಸಮ್ರಾಜಂತಮಧ್ವರಾಣಾಂ ॥ ೧ ॥

ಅಗ್ನಿದೇವನೇ! ನೀನು ಬಾಲವಿದ್ದ ಕುದುರೆಗೆ ಸಮಾನನಾಗಿರುವೆ, ಅದರೊಡನೆಯೇ ಸಮ್ರಾಟನೂ ಕೂಡ ಆಗಿರುವೆ. ನಾವು ಸ್ತುತಿಯಿಂದ ನಿನಗೆ ವಂದನೆಯನ್ನರ್ಪಿಸಲು ಪ್ರವೃತ್ತರಾಗಿದ್ದೇವೆ. ॥ ೧ ॥

೩೦೧. ಸ ಘಾ ನಃ ಸೂನುಃ ಶವಸಾ ಪೃಥುಪ್ರಗಾಮಾ ಸುಶೇವಃ ।
ಮೀಢ್ವಾ ಅಸ್ಮಾಕಂ ಬಭೂಯಾತ್ ॥ ೨ ॥

ಅಗ್ನಿಯು ಶಕ್ತಿಯ ಪುತ್ರನೂ, ಸ್ಥೂಲ-ಗಮನನೂ ಆಗಿರುವನು. ಅವನು ನಮ್ಮ ಮೇಲೆ ಪ್ರಸನ್ನನಾಗಲಿ, ನಮಗೆ ಇಚ್ಛಿತವಸ್ತುವನ್ನು ಕರುಣಿಸಲಿ. ॥ ೨ ॥

೩೦೨. ಸ ನೋ ದೂರಾಚ್ಚಾಸಾಚ್ಚ ನಿ ಮರ್ತ್ಯಾದಘಾಯೋಃ ।
ಪಾಹಿ ಸದಮಿದ್ ವಿಶ್ವಾಯುಃ ॥ ೩ ॥

ಸರ್ವತ್ರಗಾಮಿಯಾದ ಅಗ್ನಿಯೇ! ನೀನು ದೂರದ ದೇಶದಲ್ಲಿಯೂ, ಸಮೀಪದಲ್ಲಿರುವ ಪ್ರದೇಶದಲ್ಲಿಯೂ ವಾಸಮಾಡುವ ಪಾಪಾಚಾರಿಗಳಾದ ಮನುಷ್ಯರಿಂದ ನಮ್ಮನ್ನು ಯಾವಾಗಲೂ ಕಾಪಾಡು. ॥ ೩ ॥

೩೦೩. ಇಮಮೂ ಷು ತ್ವಮಸ್ಮಾಕಂ ಸನಿಂ ಗಾಯತ್ರಂ ನವ್ಯಾಂಸಂ ।
ಅಗ್ನೇ ದೇವೇಷು ಪ್ರ ವೋಚಃ ॥ ೪ ॥

ಅಗ್ನಿಯೇ! ನೀನು ನಮ್ಮ ಈ ಹವ್ಯದಿ ಮಾತನ್ನೂ ಮತ್ತು ಈ ಅಭಿನವ-ಗಾಯತ್ರೀ ಛಂದಸ್ಸಿನಲ್ಲಿ ವಿರಚಿತವಾದ ಸ್ತೋತ್ರದ ಸಂಗತಿಯನ್ನೂ ದೇವತೆಗಳಲ್ಲಿ ಪ್ರಸಿದ್ಧಗೊಳಿಸು. ॥ ೪ ॥

೩೦೪. ಆ ನೋ ಭಜ ಪರಮೇ—ಷ್ವಾ ವಾಜೇಷು ಮಧ್ಯಮೇಷು ।
ಶಿಕ್ಷಾ ವಸ್ವೋ ಅಂತಮಸ್ಯ ॥ ೫ ॥

ಪರಮ, ಮಧ್ಯಮ ಮತ್ತು ಅಂತಿಕಸ್ಥ, ಈ ಪ್ರಕಾರವಾಗಿ ಮೂರು ತರಹದ ಧನವನ್ನು ನಮಗೆ ದಯೆಪಾಲಿಸು. ॥ ೫ ॥

## [ವರ್ಗ: ೨೪]

೩೦೫. ವಿಭಕ್ತಾಸಿ ಚಿತ್ರಭಾನೋ ಸಿಂಧೋರೂರ್ಮಾ ಉಪಾಕ ಆ ।

ಸದ್ಯೋ ದಾಶುಷೇ ಕ್ಷರಸಿ　　॥ ೬ ॥

ವಿಲಕ್ಷಣವಾದ ಕಿರಣಗಳುಳ್ಳ ಅಗ್ನಿಯೇ! ಸಿಂಧುವಿನ ತರಂಗದಂತೆ ನೀನು ಧನದ ವಿಭಾಗಕರ್ತನಾಗಿರುವೆ. ಹವ್ಯದಾತಾರನಿಗೆ ನೀನು ಶೀಘ್ರವಾಗಿ ಕರ್ಮ ಫಲಪ್ರದಾನ ಮಾಡಯ್ಯಾ.　　॥ ೬ ॥

೩೦೬. ಯಮಗ್ನೇ ಪೃತ್ಸು ಮರ್ತ್ಯ—ಮವಾ ವಾಜೇಷು ಯಂ ಜುನಾಃ ।

ಸ ಯಂತಾ ಶಶ್ವತೀರಿಷಃ　　॥ ೭ ॥

ಅಗ್ನಿಯೇ! ನೀನು ಯಾವಾತನನ್ನು ರಣಾಂಗಣದಲ್ಲಿ ಕಳುಹಿಸಿಕೊಡುತ್ತೀಯೋ ಮತ್ತು ಯುದ್ಧಕ್ಷೇತ್ರದಲ್ಲಿ ನೀನು ಯಾವಾತನನ್ನು ಕಾಪಾಡುತ್ತೀಯೋ, ಅಂಥ ಮನುಷ್ಯನು ನಿತ್ಯವಾದ ಅನ್ನವನ್ನು ಸಂಪಾದಿಸುವನು. ॥ ೭ ॥

೩೦೭. ನಕಿರಸ್ಯ ಸಹಂತ್ಯ ಪರ್ಯೇತಾ ಕಯಸ್ಯ ಚಿತ್ ।

ವಾಜೋ ಅಸ್ತಿ ಶ್ರವಾಯ್ಯಃ　　॥ ೮ ॥

ರಿಪು–ದಮನನಾದ ಅಗ್ನಿಯೇ! ನಿನ್ನ ಭಕ್ತನ ಮೇಲೆ ಯಾರೂ ಆಕ್ರಮಣ ವನ್ನು ಮಾಡಲಾರರು; ಯಾಕೆಂದರೆ ಅವನ ಹತ್ತರ ಪ್ರಸಿದ್ಧವಾದ ಶಕ್ತಿಯಿದೆ.　　॥ ೮ ॥

೩೦೮. ಸ ವಾಜಂ ವಿಶ್ವಚರ್ಷಣಿ—ರರ್ವದ್ಭಿರಸ್ತು ತರುತಾ ।

ವಿಪ್ರೇಭಿರಸ್ತು ಸನಿತಾ ।　　॥ ೯ ॥

ಸಮಸ್ತ ಮಾನವರಿಂದ ಪೂಜಿತನಾದ ಅಗ್ನಿಯು ಕುದುರೆಗಳ ಸಹಾಯದಿಂದ ನಮ್ಮನ್ನು ಯುದ್ಧದಿಂದ ಪಾರುಮಾಡಲಿ; ಮೇಧಾವಿಯಾದ ಋತ್ವಿಜರಿಗೆ ಕರ್ಮದ ಫಲದಾತಾರನಾಗಲಿ.　　॥ ೯ ॥

೩೦೯. ಜರಾಬೋಧ ತದ್ ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ ।

ಸ್ತೋಮಂ ರುದ್ರಾಯ ದೃಶೀಕಂ　　॥ ೧೦ ॥

ಅಗ್ನಿಯೇ! ನಮ್ಮ ಪ್ರಾರ್ಥನೆಯನ್ನು ಕೇಳಿ ನೀನು ಜಾಗ್ರತನಾಗು. ಬೇರೆ ಬೇರೆ ಯಜಮಾನರ ಮೇಲೆ ಕೃಪೆಮಾಡಿ ಯಜ್ಞಾನುಷ್ಠಾನಕ್ಕಾಗಿ ಯಜ್ಞದಲ್ಲಿ ಪ್ರವೇಶಿಸು. ನೀನು ರುದ್ರ ಅಥವಾ ಉಗ್ರನಾಗಿರುವೆ. ರುಚಿಕರವಾದ ಸ್ತೋತ್ರಗಳಿಂದ ಆ ಯಜಮಾನರು ನಿನ್ನ ಸ್ತುತಿಯನ್ನು ಮಾಡುತ್ತಾರೆ.　　॥ ೧೦ ॥

## [ವರ್ಗಃ ೨೪]

೩೧೦. ಸ ನೋ ಮಹಾಁ ಅನಿಮಾನೋ ಧೂಮಕೇತುಃ ಪುರುಶ್ಚಂದ್ರಃ ।
ಧಿಯೇ ವಾಜಾಯ ಹಿನ್ವತು ॥ ೧೧ ॥

ಅಗ್ನಿಯು ವಿಶಾಲನೂ, ಅಸೀಮನೂ, ಹೊಗೆಯೆಂಬ ಪತಾಕೆಯುಳ್ಳವನೂ, ಅತಿ ಪ್ರಕಾಶಸಂಪನ್ನನೂ ಆಗಿರುವನು. ಅಗ್ನಿಯು ನಮ್ಮ ಯಜ್ಞ ಮತ್ತು ಅನ್ನಗಳಲ್ಲಿ ಪ್ರಸನ್ನನಾಗಿ ಇರಲಿ. ॥ ೧೧ ॥

೩೧೧. ಸ ರೇವಾಁ ಇವ ವಿಶ್ಪತಿ—ರ್ದೈವ್ಯಃ ಕೇತುಃ ಶೃಣೋತು ನಃ ।
ಉಚ್ಚೈರಗ್ನಿರ್ಬೃಹದ್ಭಾನುಃ ॥ ೧೨ ॥

ಅಗ್ನಿಯು ಪ್ರಜಾರಕ್ಷಕನೂ, ದೇವತೆಗಳ ಹೋತೃವೂ, ದೇವದೂತನೂ, ಸ್ತೋತ್ರಪಾತ್ರನೂ, ಪ್ರೌಢಕಿರಣಶಾಲಿಯೂ ಆಗಿರುತ್ತಾನೆ. ಅವನು ಧನವಂತರಂತೆ ಉದಾರನಾಗಿ ನಮ್ಮ ಸ್ತುತಿಯನ್ನು ಕೇಳಲಿ. ॥ ೧೨ ॥

೩೧೨. ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ
ನಮ ಆಶಿನೇಭ್ಯಃ ।
ಯಜಾಮ ದೇವಾನ್ ಯದಿ ಶಕ್ನವಾಮ ಮಾಜ್ಯಾಯಸಃ ಶಂಸಮಾ
ವೃಕ್ಷಿ ದೇವಾಃ ॥ ೧೩ ॥

ದೊಡ್ಡವರು, ಬಾಲಕರಾದವರು, ಯುವಕರಾಗಿರುವವರು ಮತ್ತು ವೃದ್ಧರು — ಈ ಪ್ರಕಾರ ಬೇರೆ ಬೇರೆ ತರಗತಿಯ ಎಲ್ಲ ದೇವತೆಗಳಿಗೆ ನಮ್ಮ ನಮಸ್ಕಾರಗಳು. ಶಕ್ಯವಾದರೆ ನಾವು ದೇವತೆಗಳನ್ನು ಪೂಜಿಸುತ್ತೇವೆ. ದೇವಗಣವೇ! ನಾವು ವೃದ್ಧ ದೇವತೆಗಳ ಸ್ತುತಿಯನ್ನು ಬಿಡದಿರುವಂತೆ ನಮಗೆ ಸುಬುದ್ಧಿಯನ್ನು ದಯೆಪಾಲಿಸಿರಿ. ॥ ೧೩ ॥

## ಸೂಕ್ತ: ೨೮

ಈ ಸೂಕ್ತದ ದೇವತೆ: ಇಂದ್ರ ಮುಂತಾದವರು; ಋಷಿ: ಶುನಃಶೇಪನು;
ಛಂದಸ್ಸು: ಗಾಯತ್ರೀ.

## [ವರ್ಗಃ ೨೫]

೩೧೩. ಯತ್ರ ಗ್ರಾವಾ ಪೃಥುಬುಧ್ನ ಊರ್ಧ್ವೋ ಭವತಿ ಸೋತವೇ ।
ಉಲೂಖಲಸುತಾನಾ—ಮವೇದ್ವಿಂದ್ರ ಜಲ್ಗುಲಃ ॥ ೧ ॥

ಯಾವ ಯಜ್ಞದಲ್ಲಿ ಸೋಮರಸವನ್ನು ಹನಿಸುದಕ್ಕಾಗಿ ಸ್ಥೂಲಮೂಲವಾದ ಕಲ್ಲು ಎತ್ತಲ್ಪಡುವದೋ, ಅದೇ ಯಜ್ಞದಲ್ಲಿ, ಇಂದ್ರನೇ! ಒರಳಿನಲ್ಲಿ ಸಿದ್ಧವಾದ ಸೋಮರಸವನ್ನು, ನಿನ್ನದೇ ಎಂದು ತಿಳಿದು ಪಾನಮಾಡಯ್ಯಾ. ॥ ೧ ॥

೩೧೪. ಯತ್ರ ದ್ವಾವಿವ ಜಘನಾ—ಧಿಷವಣ್ಯಾ ಕೃತಾ ।

ಉಲೂಖಲಸುತಾನಾ—ಮವೇದ್ವಿಂದ್ರ ಜಲ್ಗುಲಃ ॥ ೨ ॥

ಯಾವ ಯಜ್ಞದಲ್ಲಿ ಸೋಮವನ್ನು ಹಿಂಡುವದಕ್ಕಾಗಿ ಎರಡು ಹಲಿಗೆಗಳು, ಸ್ತ್ರೀಯರ ತೊಡೆಗಳಂತೆ, ವಿಸ್ತೃತವಾಗಿರುವವೋ, ಅದೇ ಯಜ್ಞದಲ್ಲಿ ಇಂದ್ರನೇ! ಒರಳಿನಲ್ಲಿ ಸಿದ್ಧವಾದ ಸೋಮರಸವನ್ನು ನಿನ್ನದೇ ಎಂದು ತಿಳಿದು ಪಾನಮಾಡಯ್ಯಾ. ॥ ೨ ॥

೩೧೫. ಯತ್ರ ನಾರ್ಯಪಚ್ಯವ—ಮುಪಚ್ಯವಂ ಚ ಶಿಕ್ಷತೇ ।

ಉಲೂಖಲಸುತಾನಾ—ಮವೇದ್ವಿಂದ್ರ ಜಲ್ಗುಲಃ ॥ ೩ ॥

ಯಾವ ಯಜ್ಞದಲ್ಲಿ ಯಜಮಾನನ ಪತ್ನಿಯು ಪ್ರವೇಶಿಸುವಳೋ ಮತ್ತು ಅದರೊಳಗಿಂದ ಹೊರಗೆ ಬರುತ್ತಿರುವಳೋ, ಅದೇ ಯಜ್ಞದಲ್ಲಿ, ಇಂದ್ರನೇ! ಒರಳಿನಲ್ಲಿ ಸಿದ್ಧವಾದ ಸೋಮರಸವನ್ನು ನಿನ್ನದೇ ಎಂದು ತಿಳಿದು ಪಾನಮಾಡಯ್ಯಾ. ॥ ೩ ॥

೩೧೬. ಯತ್ರ ಮಂಥಾಂ ವಿಬಧ್ನತೇ ರಶ್ಮೀನ್ ಯಮಿತವಾ ಇವ ।

ಉಲೂಖಲಸುತಾನಾ—ಮವೇದ್ವಿಂದ್ರ ಜಲ್ಗುಲಃ ॥ ೪ ॥

ಯಾವ ಯಜ್ಞದಲ್ಲಿ ಕಡಿವಾಣದಂತಿರುವ ಚಿಕ್ಕ ಹಗ್ಗದಿಂದ ಮಂಥನ-ದಂಡವು ಕಟ್ಟಲ್ಪಡುವದೋ, ಅದೇ ಯಜ್ಞದಲ್ಲಿ, ಇಂದ್ರನೇ! ಒರಳಿನಲ್ಲಿ ಸಿದ್ಧವಾದ ಸೋಮರಸವನ್ನು ನಿನ್ನದೇ ಎಂದು ತಿಳಿದು ಪಾನಮಾಡಯ್ಯಾ. ॥ ೪ ॥

೩೧೭. ಯಚ್ಚಿದ್ಧಿ ತ್ವಂ ಗೃಹೇ ಗೃಹ ಉಲೂಖಲಕ ಯುಜ್ಯಸೇ ।

ಇಹ ದ್ಯುಮತ್ತಮಂ ವದ ಜಯತಾಮಿವ ದುಂದುಭಿಃ ॥ ೫ ॥

ಒರಳೇ! ಪ್ರತಿಯೊಂದು ಮನೆಯಲ್ಲಿಯೂ ನಿನ್ನಿಂದಲೇ ಕೆಲಸವು ಸಾಂಗವಾಗಿ ಮಾಡಲ್ಪಡುತ್ತಿದೆಯಾದರೂ ಸಹ ಈ ಯಜ್ಞದಲ್ಲಿ ಮಾತ್ರ ವಿಜಯಿಗಳಾದ ಜನರು ಮಾಡುವ ದುಂದುಭಿಯಂತೆ ನೀನು ಸಪ್ಪಳಮಾಡು. ॥ ೫ ॥

## [ವರ್ಗಃ ೨೬]

೩೧೮. ಉತ ಸ್ಮ ತೇ ವನಸ್ಪತೇ ವಾತೋ ವಿ ವಾತ್ಯಗ್ರಮಿತ್ ।

ಅಥೋ ಇಂದ್ರಾಯ ಪಾತವೇ ಸುನು ಸೋಮಮುಲೂಖಲ ॥ ೬ ॥

ಒರಳಿನ ರೂಪದಲ್ಲಿರುವ ಕಟ್ಟಿಗೆಯೇ! ನಿನ್ನ ಮುಂದೆಯೇ ಗಾಳಿಯು ಬೀಸುತ್ತಿದೆ; ಆದ್ದರಿಂದಲೇ ಒರಳೇ! ಇಂದ್ರನ ಪಾನಕ್ಕಾಗಿ ಸೋಮರಸವನ್ನು ಸಿದ್ಧಗೊಳಿಸಯ್ಯಾ. ॥ ೬ ॥

೩೧೯. ಆಯಜೀ ವಾಜಸಾತಮಾ ತಾ ಹ್ಯುಗಚ್ಚಾ ವಿಜರ್ಭೃತಃ ।
ಹರೀ ಇವಾಂಧಾಂಸಿ ಬಪ್ಸತಾ ॥ ೭ ॥

ಅನ್ನವನ್ನೀಯುವ ಯಜ್ಞದ ಎರಡು ಸಾಧನಗಳಾದ ಒರಳು ಮತ್ತು ಒನಿಕೆಗಳಿರಾ! ಯಾವ ರೀತಿಯಲ್ಲಿ ತಮ್ಮ ಭಕ್ಷ್ಯವನ್ನು ಮೆಲುಕುಹಾಕುವಾಗ್ಗೆ ಇಂದ್ರನ ಎರಡೂ ಕುದುರೆಗಳು ಧ್ವನಿಯನ್ನು ಮಾಡುವವೋ, ಅದೇ ಪ್ರಕಾರ ವಾಗಿ ತುಮುಲಧ್ವನಿಯಿಂದ ಯುಕ್ತರಾಗಿ ನೀವಿಬ್ಬರೂ ತಿರುಗಿ-ತಿರುಗಿ ವಿಹಾರ ಮಾಡುತ್ತೀರಿ. ॥ ೭ ॥

೩೨೦. ತಾ ನೋ ಅದ್ಯ ವನಸ್ಪತೀ ಋಷ್ವಾವೃಷ್ವೇಭಿಃ ಸೋತೃಭಿಃ ।
ಇಂದ್ರಾಯ ಮಧುಮತ್ ಸುತಂ ॥ ೮ ॥

ಸುದರ್ಶನೀಯರಾಗಿರುವ ಕಾಷ್ಠದ್ವಯಗಳೇ! ಸುಂದರವಾದ ಅಭಿಷವ-ಮಂತ್ರಗಳ ಸಹಾಯದಿಂದ ನೀವಿಂದು ಇಂದ್ರನಿಗಾಗಿ ಮಧುರವಾದ ಸೋಮ ರಸವನ್ನು ಸಿದ್ಧಗೊಳಿಸಿರಿ. ॥ ೮ ॥

೩೨೧. ಉಚ್ಛಿಷ್ಟಂ ಚಮ್ವೋರ್ಭರ ಸೋಮಂ ಪವಿತ್ರ ಆ ಸೃಜ ।
ನಿ ಧೇಹಿ ಗೋರಧಿ ತ್ವಚಿ ॥ ೯ ॥

ಋತ್ವಿಜನೇ! ಎರಡೂ ಅಭಿಷವ-ಫಲಕಗಳಿಂದ, ಅವಶಿಷ್ಟವಾಗಿರುವ ಸೋಮವನ್ನು ಮೇಲಕ್ಕೆತ್ತಿಡು ಮತ್ತು ಅದನ್ನು ಪವಿತ್ರವಾದ ಕುಶಗಳ ಮೇಲೆ ಇಡು. ಆ ಮೇಲೆ ಅದನ್ನು ಗೋಚರ್ಮದಿಂದ ನಿರ್ಮಿತವಾದ ಪಾತ್ರೆಯಲ್ಲಿ ತಂದಿಡು. ॥ ೯ ॥

## ಸೂಕ್ತ: ೨೯

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಶುನಃಶೇಪನು; ಛಂದಸ್ಸು: ಪಂಕ್ತಿ.

### [ವರ್ಗ: ೨೭]

೩೨೨. ಯಚ್ಚಿದ್ಧಿ ಸತ್ಯ ಸೋಮಪಾ ಅನಾಶಸ್ತಾ ಇವ ಸ್ಮಸಿ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು
ತುವೀಮಘ ॥ ೧ ॥

ಸೋಮಪಾಯಿಯಾದ ಮತ್ತು ಸತ್ಯವಾದಿಯಾದ ಇಂದ್ರನೇ! ನಾವೇನು ಅಷ್ಟು ಶ್ರೀಮಂತರಾಗಿರುವುದಿಲ್ಲವಾದ್ದರಿಂದ, ಬಹು ಧನಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ—ಇವು ಗಳಿಂದ ನಮ್ಮನ್ನು ಪ್ರಶಸ್ತವಾಗಿ ಧನವಂತರನ್ನಾಗಿ ಮಾಡಯ್ಯಾ. ॥ ೧ ॥

೩೨೩. ಶಿಪ್ರಿನ್ ವಾಜಾನಾಂ ಪತೇ ಶಚೀವಸ್ತವ ದಂಸನಾ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು
ತುವೀಮಘ ॥ ೨ ॥

ಶಕ್ತಿಶಾಲಿಯೂ, ಸುಂದರವಾದ ಮೂಗುಳ್ಳವನೂ, ಧನರಕ್ಷಕನೂ ಆಗಿರುವ ಇಂದ್ರನೇ! ನಿನ್ನ ದಯೆಯು ಚಿರಸ್ಥಾಯಿಯಾಗಲಿ. ಬಹು ಧನ ಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ— ಇವುಗಳಿಂದ ನಮ್ಮನ್ನು ಪ್ರಶಂಸನೀಯರನ್ನಾಗಿ ಮಾಡಯ್ಯಾ. ॥ ೨ ॥

೩೨೪. ನಿ ಷ್ವಾಪಯಾ ಮಿಥೂದೃಶಾ ಸಸ್ತಾಮಬುಧ್ಯಮಾನೇ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು
ತುವೀಮಘ ॥ ೩ ॥

ಯಾವ ಇಬ್ಬರು ಯಮದೂತಿಗಳು ಪರಸ್ಪರವಾಗಿ ನೋಡುತ್ತಿರುವರೋ, ಅವರನ್ನು ಮಲಗಿಸು; ಅವರು ಪ್ರಜ್ಞೆತಪ್ಪಿದವರಾಗಿರಲಿ. ಬಹು ಧನಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ— ಇವುಗಳಿಂದ ನಮ್ಮನ್ನು ಪ್ರಶಂಸನೀಯರನ್ನಾಗಿ ಮಾಡಯ್ಯಾ. ॥ ೩ ॥

೩೨೫. ಸಸಂತು ತ್ಯಾ ಅರಾತಯೋ ಬೋಧಂತು ಶೂರ ರಾತಯಃ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು
ತುವೀಮಘ ॥ ೪ ॥

ಶೂರನೇ! ನಮ್ಮ ಶತ್ರುಗಳು ನಿದ್ರಿತರಾಗಿರಲಿ, ಆದರೆ ನಾವು ಜಾಗ್ರತರಾಗಿರುವಾ. ಬಹು ಧನಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ— ಇವುಗಳಿಂದ ನಮ್ಮನ್ನು ಪ್ರಶಸ್ತರನ್ನಾಗಿ ಮಾಡಯ್ಯಾ. ॥ ೪ ॥

೩೨೬. ಸಮಿಂದ್ರ ಗರ್ದಭಂ ಮೃಣ ನುವಂತಂ ಪಾಪಯಾಮುಯಾ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು
ತುವೀಮಘ ॥ ೫ ॥

ಇಂದ್ರನೇ! ಈ ಗರ್ದಭ-ರೂಪಿಯಾದ ಶತ್ರುವು ಪಾಪರೂಪವಾದ ವಚನದಿಂದ ನಿನ್ನನ್ನು ನಿಂದಿಸುತ್ತಾನೆ, ಅವನನ್ನು ವಧಿಸು. ಬಹು ಧನಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ— ಇವುಗಳಿಂದ ನಮ್ಮನ್ನು ಪ್ರಶಸ್ತರನ್ನಾಗಿ ಮಾಡಯ್ಯಾ. ॥ ೫ ॥

೩೨೭. ಪತಾತಿ ಕುಂಡೃಣಾಚ್ಯಾ ದೂರಂ ವಾತೋ ವನಾದಧಿ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥ ೬ ॥

ವಿರುದ್ಧವಾದ ಗಾಳಿಯು ತನ್ನ ಕುಟಿಲಗತಿಯಿಂದ ಈ ವನದಿಂದ ದೂರ ಹೋಗಲಿ. ಬಹು ಧನಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ— ಇವುಗಳಿಂದ ನಮ್ಮನ್ನು ಪ್ರಶಸ್ತರನ್ನಾಗಿ ಮಾಡಯ್ಯಾ. ॥ ೬ ॥

೩೨೮. ಸರ್ವಂ ಪರಿಕ್ರೋಶಂ ಜಹಿ ಜಂಭಯಾ ಕೃಕದಾಶ್ವಂ ।
ಆ ತೂ ನ ಇಂದ್ರ ಶಂಸಯ ಗೋಷ್ವಶ್ವೇಷು ಶುಭ್ರಿಷು ಸಹಸ್ರೇಷು ತುವೀಮಘ ॥ ೭ ॥

ಹೊಟ್ಟೆಕಿಚ್ಚು ಮಾಡುವವರನ್ನು ವಧಿಸು. ಹಿಂಸಕರನ್ನು ವಿನಾಶಿಸು. ಬಹು ಧನಶಾಲಿಯಾದ ಇಂದ್ರನೇ! ಸುಂದರವಾದ ಮತ್ತು ಅಸಂಖ್ಯವಾಗಿರುವ ದನಕರು ಮತ್ತು ಕುದುರೆ—ಇವುಗಳಿಂದ ನಮ್ಮನ್ನು ಪ್ರಶಂಸನೀಯರನ್ನಾಗಿ ಮಾಡಯ್ಯಾ. ॥ ೭ ॥

## ಸೂಕ್ತ: ೩೦

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಶುನಃಶೇಪನು;
ಛಂದಸ್ಸು: ಗಾಯತ್ರೀ ಮತ್ತು ತ್ರಿಷ್ಟುಪ್

### [ವರ್ಗ: ೨೮]

೩೨೯. ಆ ವ ಇಂದ್ರಂ ಕ್ರಿವಿಂ ಯಥಾ ವಾಜಯಂತಃ ಶತಕ್ರತುಂ ।
ಮಂಹಿಷ್ಠಂ ಸಿಂಚ ಇಂದುಭಿಃ ॥ ೧ ॥

ಸಂಸಾರದಲ್ಲಿ ಯಾವ ರೀತಿಯಿಂದ ಬಾವಿಯನ್ನು ಜಲಭರಿತವನ್ನಾಗಿ ಮಾಡುವರೋ, ಅದೇ ಪ್ರಕಾರವಾಗಿ ನಾವಾದರೂ ನಿರಾಕಾಂಕ್ಷಿಗಳಾಗಿ, ಯಜಮಾನರೇ! ನಿಮ್ಮ ಈ ಯಜ್ಞವನ್ನು ನೆರವೇರಿಸುತ್ತಿರುವ ಮತ್ತು ಅತಿವೃದ್ಧನಾಗಿರುವ ಇಂದ್ರನನ್ನು ಸೋಮರಸದಿಂದ ಚಿಮುಕಿಸುತ್ತೇವೆ. ॥ ೧ ॥

೩೩೦. ಶತಂ ವಾ ಯಃ ಶುಚೀನಾಂ ಸಹಸ್ರಂ ವಾ ಸಮಾಶಿರಾಂ ।
ಏದು ನಿಮ್ನಂ ನ ರೀಯತೇ ॥ ೨ ॥

ಯಾವ ರೀತಿಯಲ್ಲಿ ನೀರು ತನ್ನಿಂದ ತಾನೇ ಕೆಳಗಡೆಗೆ ಹರಿಯುತ್ತದೆಯೋ, ಅದೇ ರೀತಿಯಲ್ಲಿ ಇಂದ್ರನು ನೂರಾರು ವಿಶುದ್ಧ ಸೋಮರಸಗಳಿಂದ ಮತ್ತು "ಆಶಿರ್" ನಾಮಧೇಯವುಳ್ಳ ಸಹಸ್ರ-ಕ್ಷಪಣ-ದ್ರವ್ಯಗಳಿಂದ ಸಂಯುಕ್ತವಾದ ಸೋಮರಸದ ಬಳಿಗೆ ಸಾರುತ್ತಾನೆ. ॥ ೨ ॥

೩೩೧. ಸಂ ಯನ್ಮದಾಯ ಶುಷ್ಮಿಣ ಏನಾ ಹ್ಯಸ್ಯೋದರೇ ।
ಸಮುದ್ರೋ ನ ವ್ಯಚೋ ದಧೇ ॥ ೩ ॥

ಈ ಅನಂತಪ್ರಕಾರದ ಸೋಮವು ಇಂದ್ರನ ಪ್ರಸನ್ನತೆಗಾಗಿ ಒತ್ತಟ್ಟಿಗೆ ಬರುತ್ತಿದೆ. ಇದರಿಂದ ಇಂದ್ರನ ಉದರಪ್ರದೇಶವು ಸಮುದ್ರದಂತೆ ವ್ಯಾಪ್ತವಾಗುತ್ತದೆ. ॥ ೩ ॥

೩೩೨. ಅಯಮು ತೇ ಸಮತಸಿ ಕಪೋತ ಇವ ಗರ್ಭಧಿಂ ।
ವಚಸ್ತಚ್ಚಿನ್ನ ಓಹಸೇ ॥ ೪ ॥

ಯಾವ ರೀತಿಯಲ್ಲಿ ಪಾರಿವಾಳವು ಗರ್ಭಿಣಿಯಾದ ತನ್ನ ಹೆಣ್ಣು ಪಾರಿವಾಳವನ್ನು ಹಿಡಿದು ಉಪಚರಿಸುತ್ತಿದೆಯೋ, ಅದೇ ರೀತಿಯಲ್ಲಿ ಇಂದ್ರನೇ! ಈ ಸೋಮವು ನಿನ್ನದಾಗಿರುವದು; ನೀನಾದರೂ ಇದನ್ನು ಯಥೋಪಚಾರವಾಗಿ ಸ್ವೀಕರಿಸು ಮತ್ತು ಇದೇ ಕಾರಣದಿಂದ ನಾವು ಮಾಡುವ ಸ್ತುತಿವಚನಗಳನ್ನೂ ಸಹ ಅಂಗೀಕರಿಸು. ॥ ೪ ॥

೩೩೩. ಸ್ತೋತ್ರಂ ರಾಧಾನಾಂ ಪತೇ ಗಿರ್ವಾಹೋ ವೀರ ಯಸ್ಯತೇ ।
ವಿಭೂತಿರಸ್ತು ಸೂನೃತಾ ॥ ೫ ॥

ಧನರಕ್ಷಕನೂ, ಸ್ತೋತ್ರಪಾತ್ರನೂ ಆಗಿರುವ ಇಂದ್ರನೇ! ನಿನಗಾಗಿ ರಚಿಸಿದ ಈ ಸ್ತೋತ್ರವು ನಿನ್ನ ಪ್ರತಿಭಾ-ಪ್ರಿಯವಾಗಿ ಸದಾ ಸತ್ಯವಾಗಲಿ. ॥ ೫ ॥

## [ವರ್ಗ: ೨೯]

೩೩೪. ಊರ್ಧ್ವಸ್ತಿಷ್ಠಾ ನ ಊತಯೇ—ಽಸ್ಮಿನ್ ವಾಜೇ ಶತಕ್ರತೋ ।
ಸಮನ್ಯೇಷು ಬ್ರವಾವಹೈ ॥ ೬ ॥

ಶತಕ್ರತುವಾದ ಇಂದ್ರನೇ! ಈ ಯುದ್ಧದಲ್ಲಿ ನಮ್ಮನ್ನು ಕಾಪಾಡುವದಕ್ಕಾಗಿ ಆತುರನಾಗಯ್ಯಾ. ಇನ್ನಿತರ ಕೆಲಸಗಳ ವಿಷಯದಲ್ಲಿ ನಾವಿಬ್ಬರೂ ಕೂಡಿಯೇ ವಿಚಾರಮಾಡುವಾ. ॥ ೬ ॥

೩೩೫. ಯೋಗೇಯೋಗೇ ತವಸ್ತರಂ ವಾಜೇವಾಜೇ ಹವಾಮಹೇ ।
ಸಖಾಯ ಇಂದ್ರಮೂತಯೇ ॥ ೭ ॥

ತರಹ-ತರಹದ ಉದ್ಯಮಗಳನ್ನು ಪ್ರಾರಂಭಿಸುವಾಗ ಮತ್ತು ವಿಧ-ವಿಧದ ಯುದ್ಧಗಳಲ್ಲಿ, ನಾವು ಅತ್ಯಂತ ಬಲಶಾಲಿಯಾಗಿರುವ ಇಂದ್ರನನ್ನು, ನಮ್ಮ ರಕ್ಷಣೆಗೋಸುಗ, ಸಖನನ್ನು ಕರೆಯುವಂತೆ, ಕರೆಯುತ್ತೇವೆ. ॥ ೭ ॥

೩೩೬. ಆ ಘಾ ಗಮದ್ಯದಿ ಶ್ರವತ್ಸಹಸ್ರಿಣೀಭಿರೂತಿಭಿಃ ।
ವಾಜೇಭಿರುಪ ನೋ ಹವಂ ॥ ೮ ॥

ಇಂದ್ರನು ನಮ್ಮ ಆಹ್ವಾನವನ್ನು ಕೇಳಿದರೆ, ನಿಶ್ಚಯವಾಗಿಯೂ ಸಹಸ್ರ ಶಕ್ತಿಗಳಿಂದಲೂ, ಧನಶಕ್ತಿಯಿಂದಲೂ ಯುಕ್ತನಾಗಿ ನಮ್ಮ ಬಳಿಗೆ ಬರುವನು. ॥ ೮ ॥

೩೩೭. ಅನು ಪ್ರತ್ನಸ್ಯೌಕಸೋ ಹುವೇ ತುವಿಪ್ರತಿಂ ನರಂ ।
ಯಂ ತೇ ಪೂರ್ವಂ ಪಿತಾ ಹುವೇ ॥ ೯ ॥

ಇಂದ್ರನು ಅನೇಕ ಜನರ ಬಳಿಗೆ ಹೋಗುತ್ತಾನೆ. ನನ್ನ ಪಿತನು ಯಾವಾತನನ್ನು ಮೊದಲು ಆಹ್ವಾನಿಸಿದ್ದನೋ, ಅಂಥ ಪುರುಷನನ್ನು ನಾನು ಪುರಾತನ-ನಿವಾಸವಾದ ಸ್ವರ್ಗದಿಂದ ಇಲ್ಲಿಗೆ ಆಹ್ವಾನಿಸುತ್ತೇನೆ. ॥ ೯ ॥

೩೩೮. ತಂ ತ್ವಾ ವಯಂ ವಿಶ್ವವಾರಾಽಽಶಾಸ್ಮಹೇ ಪುರುಹೂತ ।
ಸಖೇ ವಸೋ ಜರಿತೃಭ್ಯಃ ॥ ೧೦ ॥

ಇಂದ್ರನೇ! ನಿನ್ನನ್ನು ಎಲ್ಲರೂ ಪ್ರೀತಿಸುತ್ತಾರೆ: ನಿನ್ನನ್ನು ಅಸಂಖ್ಯವಾದ ಜನರು ಆಹ್ವಾನಮಾಡುತ್ತಾರೆ. ನೀನು ಗೆಳೆಯನೂ ಮತ್ತು ನಿವಾಸಕ್ಕೆ ಕಾರಣನೂ ಆಗಿರುವೆ. ನಿನ್ನ ಸ್ತುತಿಮಾಡುವವರ ಮೇಲೆ ನೀನು ಅನುಗ್ರಹಿಸೆಂದು ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ॥ ೧೦ ॥

## [ವರ್ಗಃ ೩೦]

೩೩೯. ಅಸ್ಮಾಕಂ ಶಿಪ್ರಿಣೀನಾಂ ಸೋಮಪಾಃ ಸೋಮಪಾವ್ನಾಂ ।
ಸಖೇ ವಜ್ರಿಂತ್ಸಖೀನಾಂ ॥ ೧೧ ॥

ಸೋಮಪಾಯಿಯೂ, ಸಖನೂ, ವಜ್ರಧಾರಿಯೂ ಆಗಿರುವ ಇಂದ್ರನೇ! ನಾವಾದರೂ ನಿನಗೆ ಗೆಳೆಯರೂ, ಸೋಮಪಾಯಿಗಳೂ ಆಗಿರುತ್ತೇವೆ. ನಮ್ಮ ಉದ್ದವಾದ ಮೂತಿಗಳುಳ್ಳ ದನಕರುಗಳನ್ನು ವೃದ್ಧಿಗೊಳಿಸಯ್ಯಾ. ॥ ೧೧ ॥

೩೪೦. ತಥಾ ತದಸ್ತು ಸೋಮಪಾಃ ಸಖೇ ವಜ್ರಿನ್ ತಥಾ ಕೃಣು ।
ಯಥಾ ತ ಉಶ್ಮಸೀಷ್ಟಯೇ ॥ ೧೨ ॥

ಸೋಮರಸವನ್ನು ಕುಡಿಯುವಂಥ, ನಮ್ಮ ಗೆಳೆಯನಾದ ಮತ್ತು ವಜ್ರಧರನಾದ ಇಂದ್ರನೇ! ನಾವು ಕಲ್ಯಾಣದ ಸಲುವಾಗಿ ನಿನ್ನ ಅಭಿಲಾಷೆಯನ್ನು ಮಾಡುವಂತೆ ನಿನ್ನ ಆಚರಣೆಯಿರಲಿ. ॥ ೧೨ ॥

೩೪೧. ರೇವತೀರ್ನಃ ಸಧಮಾದ ಇಂದ್ರೇ ಸಂತು ತುವಿವಾಜಾಃ ।
ಕ್ಷುಮಂತೋ ಯಾಭಿರ್ಮದೇಮ ॥ ೧೩ ॥

ಇಂದ್ರನು ನಮ್ಮ ಮೇಲೆ ಪ್ರಸನ್ನನಾದರೆ ನಮ್ಮ ಗೋವುಗಳು ವಿಪುಲವಾದ ಹಾಲುಳ್ಳವುಗಳಾಗಿ ಸರಿಯಾಗಿ ಶಕ್ತಿಶಾಲಿಯಾಗುತ್ತವೆ. ಆ ಆಕಳುಗಳಿಂದ ಪ್ರಚುರವಾದ ಖಾದ್ಯಗಳನ್ನು ಸಂಪಾದಿಸಿ ನಾವಾದರೂ ಪ್ರಸನ್ನರಾಗುತ್ತೇವೆ. ॥ ೧೩ ॥

೩೪೨. ಆ ಘ ತ್ವಾವಾನ್ ತ್ಮನಾಪ್ತಃ ಸ್ತೋತೃಭ್ಯೋ ಧೃಷ್ಣವಿಯಾನಃ ।
ಋಣೋರಕ್ಷಂ ನ ಚಕ್ರ್ಯೋಃ ॥ ೧೪ ॥

ಸಾಹಸಿಯಾದ ಇಂದ್ರನೇ! ನಿನಗೆ ಸಮಾನವಾದ ಯಾವುದೇ ದೇವತೆಯು ಪ್ರಸನ್ನನಾದರೆ ಮತ್ತು ನಮ್ಮಿಂದ ಪ್ರಾರ್ಥಿಸಲ್ಪಟ್ಟವನಾದರೆ, ಸ್ತೋತಾರರ ಸಲುವಾಗಿ ಅಭೀಷ್ಟವಾದ ಧನವನ್ನು ಅವಶ್ಯವಾಗಿ ತಂದುಕೊಡುತ್ತಾನೆ. ಕುದುರೆಗಳು ರಥದ ಎರಡೂ ಗಾಲಿಗಳ ಅಚ್ಚನ್ನು ತಿರುಗಿಸಿಬಿಡುವಂತೆ, ಆ ದೇವತೆಯೂ ಸಹ ಧನವನ್ನು ಕೊಡುತ್ತಿರುತ್ತಾನೆ. ॥ ೧೪ ॥

೩೪೩. ಆ ಯದ್ ದುವಃ ಶತಕ್ರತ—ವಾ ಕಾಮಂ ಜರಿತೄಣಾಂ ।
ಋಣೋರಕ್ಷಂ ನ ಶಚೀಭಿಃ ॥ ೧೫ ॥

ಶತಕ್ರತುವಾದ ಇಂದ್ರನೇ! ಯಾವ ರೀತಿಯಲ್ಲಿ ಗಾಡಿಯ ಗತಿಯು ಅಚ್ಚುಗಳನ್ನು ತಿರುಗಿಸುವದೋ, ಅದೇ ರೀತಿಯಲ್ಲಿ ನೀನು ಸ್ತೋತಾರರಿಗೆ ಅವರ ಕಾಮನೆಗಳಿಗೆ ಅನುಸಾರವಾಗಿ ಧನವನ್ನು ಅರ್ಪಿಸಯ್ಯಾ. ॥ ೧೫ ॥

## [ವರ್ಗಃ ೩೧]

೩೪೪. ಶಶ್ವದಿಂದ್ರಃ ಪೋಪ್ರುಥದ್ಭಿರ್ಜಿಗಾಯ ನಾನದದ್ಭಿಃ ಶಾಶ್ವಸದ್ಭಿರ್ಧನಾನಿ ।
ಸ ನೋ ಹಿರಣ್ಯರಥಂ ದಂಸನಾವಾನ್ ತ್ಸ ನಃ ಸನಿತಾ ಸನಯೇ ಸ
ನೋಽದಾತ್ ॥ ೧೬ ॥

ಇಂದ್ರನ ಯಾವ ಕುದುರೆಗಳು ತಿಂದಾದ ಮೇಲೆ ಫರ್-ಫರ್ ಸಪ್ಪಳದೊಂದಿಗೆ ಕೆನೆಯುತ್ತ, ಆಳವಾದ ಉಸಿರನ್ನು ಹೊರಗೆ ಬಿಡುತ್ತವೋ, ಆ ಕುದುರೆಗಳ ಸಹಾಯದಿಂದಲೇ ಇಂದ್ರನು ಯಾವಾಗಲೂ ಧನವನ್ನು ಜಯಿಸಿರುತ್ತಾನೆ. ಕರ್ಮಠನೂ, ದಾನಪರಾಯಣನೂ ಆಗಿರುವ ಇಂದ್ರನು ನಮಗೆ ಸ್ವರ್ಣರಥವನ್ನು ಕೊಟ್ಟಿದ್ದನು. ॥ ೧೬ ॥

೩೪೫. ಆಶ್ವಿನಾವಶ್ವಾವತ್ಯೇಷಾ ಯಾತಂ ಶವೀರಯಾ ।
ಗೋಮದ್ ದಸ್ರಾ ಹಿರಣ್ಯವತ್ ॥ ೧೭ ॥

ಅಶ್ವಿನೀಕುಮಾರದ್ವಯರೇ! ಅನೇಕ ಕುದುರೆಗಳಿಂದ ಪ್ರೇರಿತವಾದ ಅನ್ನದೊಂದಿಗೆ ಆಗಮಿಸಿರಿ. ಶತ್ರುಸಂಹಾರಿಗಳಿರಾ! ನಮ್ಮ ಮನೆಯಲ್ಲಿ ಆಕಳುಗಳೂ, ಧನವೂ ಬರಲಿ. ॥ ೧೭ ॥

೩೪೬. ಸಮಾನಯೋಜನೋ ಹಿ ವಾಂ ರಥೋ ದಸ್ರಾವಮರ್ತ್ಯಃ ।
ಸಮುದ್ರೇ ಅಶ್ವಿನೇಯತೇ ॥ ೧೮ ॥

ಶತ್ರುನಾಶಕರಾದ ಅಶ್ವಿನೀಕುಮಾರದ್ವಯರೇ! ನಿಮ್ಮಿರ್ವರಿಗಾಗಿಯೂ ನಿರ್ಮಿಸಲ್ಪಟ್ಟ ರಥವು ವಿನಾಶ-ರಹಿತವಾದದ್ದು: ಆ ರಥವು ಸಮುದ್ರದ ಮೇಲೆ ಅಥವಾ ಅಂತರಿಕ್ಷದಲ್ಲಿ ನಡೆಯುತ್ತದೆ. ॥ ೧೮ ॥

೩೪೭. ನ್ಯಘ್ನ್ಯಸ್ಯ ಮೂರ್ಧನಿ ಚಕ್ರಂ ರಥಸ್ಯ ಯೇಮಥುಃ ।
ಪರಿ ದ್ಯಾಮನ್ಯದೀಯತೇ ॥ ೧೯ ॥

ಅಶ್ವಿನೀಕುಮಾರರೇ! ನೀವು ನಿಮ್ಮ ರಥದ ಒಂದು ಗಾಲಿಯನ್ನು ಅವಿನಾಶಿಯಾದ ಪರ್ವತದ ಮೇಲೆ ಸ್ಥಿರಮಾಡಿರುತ್ತೀರಿ. ಆ ರಥದ ಇನ್ನೊಂದು ಚಕ್ರವು ಆಕಾಶದ ನಾಲ್ಕೂ ಬದಿಗೆ ತಿರುಗುತ್ತಿರುತ್ತದೆ. ॥ ೧೯ ॥

೩೪೮. ಕಸ್ತ ಉಷಃ ಕಧಪ್ರಿಯೇ ಭುಜೇ ಮರ್ತೋ ಅಮರ್ತ್ಯೇ ।
ಕಂ ನಕ್ಷಸೇ ವಿಭಾವರಿ ॥ ೨೦ ॥

ಸ್ತುತಿಪ್ರಿಯಳೂ, ಅಮರಳೂ ಆದ ಉಷಾದೇವಿಯೇ! ನಿನ್ನ ಆನಂದಕ್ಕಾಗಿ ಯಾವ ಪುರುಷನಿರುವನು? ಪ್ರಭಾವ-ಸಂಪನ್ನೆಯೇ! ನೀನು ಯಾರಿಗೆ ಪ್ರಾಪ್ತಳಾಗುವೆ? ॥ ೨೦ ॥

೩೪೯. ವಯಂ ಹಿ ತೇ ಅಮನ್ಮಹ್ಯಾಽಽನ್ತಾದಾ ಪರಾಕಾತ್ ।
ಅಶ್ವೇ ನ ಚಿತ್ರೇ ಅರುಷಿ ॥ ೨೧ ॥

ವ್ಯಾಪಕಳಾದ ಮತ್ತು ವಿಚಿತ್ರ-ಪ್ರಕಾಶವತಿಯಾದ ಉಷಾದೇವಿಯೇ! ನಾವು ದೂರದಿಂದಲೂ, ಸಮೀಪದಿಂದಲೂ ನಿನ್ನನ್ನರಿಯಲು ಸಮರ್ಥರಾಗಲಾರೆವು. ॥ ೨೧ ॥

೩೫೦. ತ್ವಂ ತ್ಯೇಭಿರಾ ಗಹಿ ವಾಜೇಭಿರ್ದುಹಿತರ್ದಿವಃ ।
ಅಸ್ಮೇ ರಯಿಂ ನಿ ಧಾರಯ ॥ ೨೨ ॥

ಸ್ವರ್ಗಪುತ್ರಿಯೇ! ಆ ಅನ್ನವನ್ನು ಸಂಗಡ ತಕ್ಕೊಂಡು ಬಾರವ್ವಾ; ನಮಗೆ ಶಾಶ್ವತವಾದ ಧನವನ್ನು ಕೊಡು, ತಾಯೇ! ॥ ೨೨ ॥

# ಏಳನೇ ಅನುವಾಕ

## ಸೂಕ್ತ: ೩೧

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಅಂಗಿರಸನ ಪುತ್ರನಾದ ಹಿರಣ್ಯಸ್ತೂಪನು; ಛಂದಸ್ಸು: ಗಾಯತ್ರೀ, ಜಗತೀ, ತ್ರಿಷ್ಟುಪ್.

### [ವರ್ಗಃ ೩೨]

೩೫೧. ತ್ವಮಗ್ನೇ ಪ್ರಥಮೋ ಅಂಗಿರಾ ಋಷಿ—ರ್ದೇವೋ ದೇವಾನಾಮಭವಃ
ಶಿವಃ ಸಖಾ ।
ತವ ವ್ರತೇ ಕವಯೋ ವಿದ್ಮನಾಪಸೋ—ಽಜಾಯಂತ ಮರುತೋ
ಭ್ರಾಜದೃಷ್ಟಯಃ ॥ ೧ ॥

ಅಗ್ನಿಯೇ! ಅಂಗಿರಸ ಋಷಿ ಮೊದಲಾದವರಿಗೆ ನೀನು ಆದಿ ಋಷಿಯಾಗಿದ್ದೀ. ದೇವತೆಯಾಗಿ ದೇವತೆಗಳ ಕಲ್ಯಾಣವಾಹಿಯಾದ ಮಿತ್ರನಾಗಿದ್ದೀ. ನಿನ್ನ ಉದ್ಯಮದ ಮೂಲಕವೇ ಮೇಧಾವಿಗಳೂ, ಜ್ಞಾನ-ಕಾರ್ಯಗಳನ್ನು ಮಾಡುವವರೂ, ಶುಭಶಸ್ತ್ರಧಾರಿಗಳೂ ಆಗಿರುವ ಮಾರುತರು ಜನ್ಮಗ್ರಹಣ ಮಾಡಿದ್ದರು. ॥ ೧ ॥

೩೫೨. ತ್ವಮಗ್ನೇ ಪ್ರಥಮೋ ಅಂಗಿರಸ್ತಮಃ ಕವಿರ್ದೇವಾನಾಂ ಪರಿ ಭೂ-
ಷಸಿ ವ್ರತಂ ।
ವಿಭುರ್ವಿಶ್ವಸ್ಮೈ ಭುವನಾಯ ಮೇಧಿರೋ ದ್ವಿಮಾತಾ ಶಯುಃ ಕತಿಧಾ
ಚಿದಾಯವೇ ॥ ೨ ॥

ಅಗ್ನಿಯೇ! ನೀನು ಅಂಗಿರಸಜನರಲ್ಲಿ ಪ್ರಥಮನೂ, ಸರ್ವೋತ್ತಮನೂ ಆಗಿರುವೆ. ನೀನು ಮೇಧಾವಿಯಾಗಿರುವೆ ಮತ್ತು ದೇವತೆಗಳ ಯಜ್ಞವನ್ನು ಶೋಭಿಸುತ್ತೀ. ನೀನು ಸಮಸ್ತ ಸಂಸಾರದ ವಿಭುವಾಗಿರುವೆ. ನೀನು ಬುದ್ಧಿಶಾಲಿಯೂ, ಎರಡು ಕಾಷ್ಠಗಳಿಂದ ಹುಟ್ಟಿರುವೆಯಾದ್ದರಿಂದ ದ್ವಿಮಾತೃಕನೂ ಆಗಿರುವೆ. ಮನುಷ್ಯರ ಉಪಕಾರಕ್ಕಾಗಿ ವಿಧ-ವಿಧದ ರೂಪಗಳಲ್ಲಿ ಸರ್ವತ್ರವೂ ವರ್ತಮಾನನಾಗಿರುವೆ. ॥ ೨ ॥

೩೫೩. ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ
ವಿವಸ್ವತೇ ।
ಅರೇಜೇತಾಂ ರೋದಸೀ ಹೋತೃವೂರ್ಯೇ—ಽಸಘ್ನೋರ್ಭಾರ
ಮಯಜೋ ಮಹೋ ವಸೋ ॥ ೩ ॥

ಅಗ್ನಿಯೇ! ನೀನು ಮಾತರಿಶ್ವಾ ಅಥವಾ ವಾಯುವಿನ ಅಗ್ರಗಾಮಿಯಾಗಿರುವೆ. ಯಜ್ಞದ ಅಭಿಲಾಷೆಯಿಂದ ನಿನ್ನ ಸೇವೆಮಾಡುವ ಯಜಮಾನನ ಸಾನ್ನಿಧ್ಯದಲ್ಲಿ ನೀನು ಪ್ರಕಟನಾಗಯ್ಯಾ. ನಿನ್ನ ಶಕ್ತಿಯನ್ನು ಕಂಡು ಆಕಾಶ ಮತ್ತು ಪೃಥ್ವಿಗಳು ಥರಥರ ನಡುಗುತ್ತಿವೆ. ನೀನು ಹೋತಾರನೆಂದು ತಿಳಿಯಲ್ಪಟ್ಟಿದ್ದೀ; ಇದಕ್ಕಾಗಿಯೇ ಯಜ್ಞದಲ್ಲಿ ಆ ಗುರುತರವಾದ ಭಾರವನ್ನು ನೀನು ವಹನಮಾಡಿದ್ದೀ. ಆವಾಸಕ್ಕೆ ಕಾರಣನಾದ ಅಗ್ನಿಯೇ! ಪೂಜನೀಯರಾದ ದೇವತೆಗಳ ಯಜ್ಞದ ನಿಷ್ಪತ್ತಿಯನ್ನು ನೀನೇ ಮಾಡಿರುತ್ತೀ. ॥ ೩ ॥

೩೫೪. ತ್ವಮಗ್ನೇ ಮನವೇ ದ್ಯಾಮವಾಶಯಃ ಪುರೂರವಸೇ ಸುಕೃತೇ
ಸುಕೃತ್ತರಃ ।
ಶ್ವಾತ್ರೇಣ ಯತ್ ಪಿತ್ರೋರ್ಮುಚ್ಯಸೇ ಪರ್ಯಾ—ಽಽತ್ವಾ
ಪೂರ್ವಮನಯನ್ನಾಪರಂ ಪುನಃ ॥ ೪ ॥

ಅಗ್ನಿಯೇ! ನೀನೇ ಮನುವಿಗೆ ಸ್ವರ್ಗಲೋಕದ ಕಥೆಯನ್ನು ಹೇಳಿದ್ದೀ. ನಿನ್ನ ಪರಿಚರ್ಯೆಯನ್ನು ಮಾಡಿದ ಪುರೂರವಸ್ ಎಂಬ ಅರಸನನ್ನು ಅನುಗ್ರಹಿಸುವದಕ್ಕಾಗಿ ನೀನು ಅತ್ಯಂತ ಶುಭಫಲದಾಯಕನಾಗಿ ಪರಿಣಮಿಸಿದ್ದೀ. ಯಾವ ಸಮಯದಲ್ಲಿ ನಿನ್ನ ಪಿತೃರೂಪದಲ್ಲಿರುವ ಎರಡು ಕಾಷ್ಠಗಳ ಘರ್ಷಣದಿಂದ ನೀನು ಹುಟ್ಟುವಿಯೋ, ಆ ಕಾಲಕ್ಕೆ ಋತ್ವಿಜರು ನಿನ್ನನ್ನು ವೇದಿಕೆಯ ಪೂರ್ವದ ಬದಿಗೆ ಒಯ್ಯುತ್ತಾರೆ; ಅದರನಂತರ ನಿನ್ನನ್ನು ವೇದಿಕೆಯ ಪಶ್ಚಿಮದ ಬದಿಗೆ ಒಯ್ಯುತ್ತಾರೆ. ॥ ೪ ॥

೩೫೫. ತ್ವಮಗ್ನೇ ವೃಷಭಃ ಪುಷ್ಟಿವರ್ಧನ ಉದ್ಯತಸ್ರುಚೇ ಭವಸಿ ಶ್ರವಾಯ್ಯಃ ।
ಯ ಆಹುತಿಂ ಪರಿ ವೇದಾ ವಷಟ್ಕೃತಿ—ಮೇಕಾಯುರಗ್ರೇ ವಿಶ
ಆವಿವಾಸಸಿ ॥ ೫ ॥

ಅಗ್ನಿಯೇ! ನೀನು ಈಪ್ಸಿತಫಲ-ದಾತಾರನೂ, ಪುಷ್ಟಿಕಾರಕನೂ ಆಗಿರುವೆ. ಯಜ್ಞಪಾತ್ರೆಯನ್ನು ಮೇಲಕ್ಕೆಬ್ಬಿಸುವ ಸಮಯದಲ್ಲಿ ಯಜಮಾನನು ನಿನ್ನ ಯಶವನ್ನು ಹಾಡುತ್ತಾನೆ. ಯಾವ ಯಜಮಾನನು ನಿನಗೆ ವಷಟ್ಕಾರದಿಂದ

ಯುಕ್ತವಾದ ಆಹುತಿಯನ್ನು ಕೊಡುವನೋ, ಏಕಮಾತ್ರ ಅನ್ನದಾತೃವಾದ ಅಗ್ನಿಯೇ! ಆ ಯಜಮಾನನಿಗೆ ಸರ್ವಪ್ರಥಮವಾಗಿ ಪ್ರಕಾಶವನ್ನೀಯುತ್ತೀ; ಆ ಯಜಮಾನನಿಗೆ ಪ್ರಕಾಶವು ದೊರಕಿದನಂತರ, ಸಮಸ್ತಲೋಕವು ಪ್ರಕಾಶವನ್ನು ಪಡೆಯುವದು. ॥ ೫ ॥

## [ವರ್ಗ: ೩೩]

೩೫೬. ತ್ವಮಗ್ನೇ ವೃಜಿನವರ್ತನಿಂ ನರಂ ಸಕ್ಮನ್ ಪಿಪರ್ಷಿ ವಿದಥೇ
ವಿಚರ್ಷಣೇ ।
ಯಃ ಶೂರಸಾತಾ ಪರಿತಕ್ಮ್ಯೇ ಧನೇ ದಭ್ರೇಭಿಶ್ಚಿತ್ ಸಮೃತಾ
ಹಂಸಿ ಭೂಯಸಃ ॥ ೬ ॥

ವಿಶೇಷ-ಜ್ಞಾನಶಾಲಿಯಾದ ಅಗ್ನಿಯೇ! ಕುಮಾರ್ಗಗಾಮಿಯಾದ ಪುರುಷನನ್ನು ಅವನ ಉದ್ಧಾರಕ್ಕೆ ಯೋಗ್ಯವಾದ ಕೆಲಸದಲ್ಲಿ ನಿಯಮಿಸು. ಯುದ್ಧವು ಚೆನ್ನಾಗಿ ಪ್ರಾರಂಭವಾಗಿ ನಾಲ್ಕೂ ಬದಿಗೆ ಹಬ್ಬಿದ ಮೇಲೆ, ನಿನ್ನ ಭಕ್ತರಾದ ಪುರುಷರು ಅಲ್ಪಸಂಖ್ಯಾಕರೂ, ವೀರತಾವಿಹೀನರೂ ಆಗಿದ್ದರೂ ಸಹ, ಅವರಿಂದ ದೊಡ್ಡ ದೊಡ್ಡ ವೀರರನ್ನೂ ಕೂಡ ವಧಿಸುತ್ತೀ. ॥ ೬ ॥

೩೫೭. ತ್ವಂ ತಮಗ್ನೇ ಅಮೃತತ್ವ ಉತ್ತಮೇ ಮರ್ತಂ ದಧಾಸಿ ಶ್ರವಸೇ
ದಿವೇದಿವೇ ।
ಯಸ್ತಾತೃಷಾಣ ಉಭಯಾಯ ಜನ್ಮನೇ ಮಯಃ ಕೃಣೋಷಿ
ಪ್ರಯ ಆ ಚ ಸೂರಯೇ ॥ ೭ ॥

ಅಗ್ನಿಯೇ! ನಿನ್ನನ್ನು ಸೇವಿಸುವ ಮಾನವನನ್ನು, ಪ್ರತಿನಿತ್ಯವೂ ಅನ್ನದ ಸಲುವಾಗಿ, ಉತ್ಕೃಷ್ಟನನ್ನಾಗಿ ಮಾಡಿ, ಅಮರಪದದ ಮೇಲೆ ಪ್ರತಿಷ್ಠಿತಗೊಳಿಸುಪೆ. ಯಾವಾತನು ಸ್ವರ್ಗಲೋಕ ಮತ್ತು ಜನ್ಮಾಂತರದ ಪ್ರಾಪ್ತಿಗಾಗಿ ಅಥವಾ ಈ ಉಭಯರೂಪ ಜನ್ಮದ ಸಲುವಾಗಿ, ಅತೀವ ಪಿಪಾಸುವಾಗಿರುವನೋ, ಅಂಥ ಜ್ಞಾನಿಯಾದ ಯಜಮಾನನಿಗೆ ಸುಖ ಮತ್ತು ಅನ್ನಗಳನ್ನು ಕೊಡಯ್ಯಾ. ॥ ೭ ॥

೩೫೮. ತ್ವಂ ನೋ ಅಗ್ನೇ ಸನಯೇ ಧನಾನಾಂ ಯಶಸಂ ಕಾರುಂ
ಕೃಣುಹಿ ಸ್ತವಾನಃ ।
ಋಧ್ಯಾಮ ಕರ್ಮಾಪಸಾ ನವೇನ ದೇವೈರ್ದ್ಯಾವಾಪೃಥಿವೀ
ಪ್ರಾವತಂ ನಃ ॥ ೮ ॥

ಅಗ್ನಿಯೇ! ಧನಲಾಭಕ್ಕಾಗಿ ನಾವು ನಿನ್ನನ್ನು ಸ್ತುತಿಸುತ್ತೇವೆ. ನೀನು ನಮಗೆ ಯಶಸ್ವಿಗಳೂ, ಯಜ್ಞಕರ್ತೃಗಳೂ ಆದ ಪುತ್ರರನ್ನು ಕರುಣಿಸು. ಈ ಪುತ್ರರ ಸಹಾಯದಿಂದ ನಾವು ಯಜ್ಞಕರ್ಮವನ್ನು ವರ್ಧಿಸುವೆವು. ದ್ಯು ಮತ್ತು ಪೃಥಿವಿಗಳೇ! ದೇವತೆಗಳೊಂದಿಗೆ ನಮ್ಮನ್ನು ಬಹಳ ಸುಂದರವಾದ ರೂಪದಲ್ಲಿ ಕಾಪಾಡಿರಿ. ॥ ೮ ॥

೩೫೯. ತ್ವಂ ನೋ ಅಗ್ನೇ ಪಿತ್ರೋರುಪಸ್ಥ ಆ ದೇವೋ ದೇವೇಷ್ವನವದ್ಯ ಜಾಗೃವಿಃ ।
ತನೂಕೃದ್ ಬೋಧಿ ಪ್ರಮತಿಶ್ಚ ಕಾರವೇ ತ್ವಂ ಕಲ್ಯಾಣ ವಸು ವಿಶ್ವಮೋಪಿಷೇ ॥ ೯ ॥

ದೋಷರಹಿತನಾದ ಅಗ್ನಿದೇವನೇ! ನೀನು ಎಲ್ಲ ದೇವತೆಗಳಲ್ಲಿ ಜಾಗರೂಕನಾಗಿರುವೆ. ನಿನ್ನ ಪಿತೃಮಾತೃರೂಪರಾದ ದ್ಯಾವಾ-ಪೃಥಿವಿಗಳ ಹತ್ತಿರವೇ ಇದ್ದುಕೊಂಡು ಮತ್ತು ನಮಗೆ ಪುತ್ರದಾನಮಾಡಿ ಅನುಗ್ರಹಿಸು. ಯಜ್ಞಕರ್ತಾರನಿಗೆ ಪ್ರಸನ್ನಬುದ್ಧಿಯಾಗು. ಕಲ್ಯಾಣವಾಹಿಯಾದ ಅಗ್ನಿಯೇ! ನೀನು ಯಜಮಾನನ ಸಲುವಾಗಿ ಸಂಸಾರದಲ್ಲಿಯು ಎಲ್ಲ ತರಹದ ಧನಗಳನ್ನು ಅನುಗ್ರಹಿಸು. ॥ ೯ ॥

೩೬೦. ತ್ವಮಗ್ನೇ ಪ್ರಮತಿಸ್ತ್ವಂ ಪಿತಾಸಿ ನಸ್ ತ್ವಂ ವಯಸ್ಕೃತ್ ತವ ಜಾಮಯೋ ವಯಂ ।
ಸಂ ತ್ವಾ ರಾಯಃ ಶತಿನಃ ಸಂ ಸಹಸ್ರಿಣಃ ಸುವೀರಂ ಯಂತಿ ವ್ರತಪಾಮದಾಭ್ಯ ॥ ೧೦ ॥

ಅಗ್ನಿಯೇ! ನೀನು ನಮಗಾಗಿ ಪ್ರಸನ್ನಮತಿಯಾಗು. ನೀನು ನಮಗೆ ಪಿತೃರೂಪನಾಗಿರುವೆ. ನೀನು ಪರಮಾಯುಷ್ಯದ ದಾತಾರನಾಗಿರುವೆ. ನಾವಾದರೊ ನಿನ್ನ ಬಂಧುಗಳು. ಹಿಂಸಾರಹಿತನಾದ ಅಗ್ನಿಯೇ! ನೀನು ವ್ರತಪಾಲಕನಾಗಿರುವೆ ಯಾದ್ದರಿಂದ ಶುಭಕರ್ಮಿಗಳಾದ ಪುರುಷರು ನಿನ್ನನ್ನು ಭಜಿಸುತ್ತಾರೆ. ನಿನಗೆ ಸಹಸ್ರಧನದ ಪ್ರಾಪ್ತಿಯಾಗಲಿ. ॥ ೧೦ ॥

## [ವರ್ಗಃ ೩೪]

೩೬೧. ತ್ವಾಮಗ್ನೇ ಪ್ರಥಮಮಾಯುಮಾಯವೇ ದೇವಾ ಅಕೃಣ್ವನ್ ನಹುಷಸ್ಯ ವಿಶ್ಪತಿಂ ।
ಇಳಾಮಕೃಣ್ವನ್ ಮನುಷಸ್ಯ ಶಾಸನೀಂ ಪಿತುರ್ಯತ್ ಪುತ್ರೋ ಮಮಕಸ್ಯ ಜಾಯತೇ ॥ ೧೧ ॥

ಅಗ್ನಿಯೇ! ದೇವತೆಗಳು ಪುರಾತನಕಾಲದಲ್ಲಿ ಪುರುರವಸನ ಮಾನವ ರೂಪಧಾರಿ ಮೊಮ್ಮಗನಾದ ನಹುಷನ ಮನುಷ್ಯಶರೀರವುಳ್ಳ ಸೇನಾಪತಿಯನ್ನಾಗಿ ನಿನ್ನನ್ನು ನಿಯಮಿಸಿದ್ದರು. ಅದರೊಡನೆಯೇ ಅವರು ಇಳಾದೇವಿಯನ್ನು ಮನುವಿನ ಧರ್ಮೋಪದೇಶಿಕೆಯನ್ನಾಗಿ ಮಾಡಿದ್ದರು. ಆ ಕಾಲದಲ್ಲಿ ನನ್ನ ತಂದೆಯಾದ ಅಂಗಿರಸಋಷಿಯ ಪುತ್ರರೂಪದಿಂದ ನೀನು ಜನ್ಮವನ್ನು ಧರಿಸಿದ್ದೀ. ॥ ೧೧ ॥

೩೬೨. ತ್ವಂ ನೋ ಅಗ್ನೇ ತವ ದೇವ ಪಾಯುಭಿ—ರ್ಮಘೋನೋ
ರಕ್ಷ ತನ್ವಶ್ಚ ವಂದ್ಯ ।
ತ್ರಾತಾ ತೋಕಸ್ಯ ತನಯೇ ಗವಾಮ—ಸ್ಯನಿಮೇಷಂ
ರಕ್ಷಮಾಣಸ್ತವ ವ್ರತೇ ॥ ೧೨ ॥

ವಂದನೀಯನಾದ ಅಗ್ನಿಯೇ! ನೀನು ಬಹು ಧನಶಾಲಿಯಾಗಿರುವೆ. ನೀನು ನಿನ್ನ ರಕ್ಷಣಶಕ್ತಿಯಿಂದ ನಮ್ಮ ಮತ್ತು ನಮ್ಮ ಮಕ್ಕಳ ದೇಹಗಳನ್ನು ರಕ್ಷಿಸಯ್ಯಾ. ನಮ್ಮ ಮೊಮ್ಮಗಂದಿರು ನಿನ್ನಯ ವ್ರತದಲ್ಲಿ ನಿರಂತರವಾಗಿ ನಿಯುಕ್ತರಾಗಿದ್ದಾರೆ. ॥ ೧೨ ॥

೩೬೩. ತ್ವಮಗ್ನೇ ಯಜ್ಯವೇ ಪಾಯುರಂತರೋ—ಽನಿಷಂಗಾಯ
ಚತುರಕ್ಷ ಇಧ್ಯಸೇ ।
ಯೋ ರಾತಹವ್ಯೋಽವೃಕಾಯ ಧಾಯಸೇ ಕೀರೇಶ್ಚಿನ್
ಮಂತ್ರಂ ಮನಸಾ ವನೋಷಿ ತಂ ॥ ೧೩ ॥

ಅಗ್ನಿಯೇ! ನೀನು ಯಜಮಾನ-ರಕ್ಷಕನಾಗಿರುವೆ. ಯಜ್ಞದ ತೊಂದರೆಗಳನ್ನೆಲ್ಲ ದೂರಮಾಡುವದಕ್ಕಾಗಿ ಹತ್ತಿರವೇ ಇದ್ದುಕೊಂಡು, ಯಜ್ಞದ ನಾಲ್ಕೂ ಬದಿಗೆ ದೀಪ್ತಿಶಾಲಿಯಾಗಿರುವೆ. ನೀನು ಅಹಿಂಸಕನಾಗಿರುವೆ, ಪೋಷಕನಾಗಿರುವೆ. ಯಾವಾತನು ನಿನಗೆ ಹವ್ಯದಾನವನ್ನು ಮಾಡುತ್ತಾನೋ, ಅಂಥ ಸ್ತೋತ್ರಕರ್ತಾರರನ ಮಂತ್ರವನ್ನು ನೀನು ಧ್ಯಾನದಿಂದ ಗ್ರಹಿಸುತ್ತೀ. ॥ ೧೩ ॥

೩೬೪. ತ್ವಮಗ್ನ ಉರುಶಂಸಾಯ ವಾಘತೇ ಸ್ಪಾರ್ಹಂ ಯದ್
ರೇಕ್ಣಃ ಪರಮಂ ವನೋಷಿತತ್ ।
ಆಧ್ರಸ್ಯ ಚಿತ್ ಪ್ರಮತಿರುಚ್ಯಸೇ ಪಿತಾ ಪ್ರ ಪಾಕಂ ಶಾಸ್ಸಿ
ಪ್ರ ದಿಶೋ ವಿದುಷ್ಟರಃ ॥ ೧೪ ॥

ಅಗ್ನಿಯೇ! ನಿನ್ನನ್ನು ಸ್ತುತಿಸುವ ಋತ್ವಿಜನು ತನ್ನ ಮನದಣಿಯಾಗಿ ಪರಮಧನವನ್ನು ಸಂಪಾದಿಸುವಂತೆ ನೀನು ಇಚ್ಛೆಯಿಸಯ್ಯಾ. ನೀನು ಪಾಲ

ನೇಯನಾದ ಮತ್ತು ದುರ್ಬಲನಾದ ಯಜಮಾನನಿಗೆ ಪ್ರಸನ್ನಮತಿಯಾದ ಪಿತೃಸ್ವರೂಪನಾಗಿರುವೆ ಎಂದು ಸಂಸಾರವೇ ಹೇಳುತ್ತಿದೆ. ನೀನು ಪೂರ್ಣಜ್ಞಾನಿಯಾಗಿರುವೆಯಾದ್ದರಿಂದ ಅಜ್ಞನಾದ ಯಜಮಾನನಿಗೆ ಶಿಕ್ಷಣವನ್ನು ದಯಪಾಲಿಸಯ್ಯಾ ಮತ್ತು ಅದರೊಡನೆಯೇ ಎಲ್ಲ ದಿಶಿಗಳ ನಿರ್ಣಯವನ್ನೂ ಕೂಡ ಮಾಡಯ್ಯಾ. ॥ ೧೪ ॥

೩೬೫. ತ್ವಮಗ್ನೇ ಪ್ರಯತದಕ್ಷಿಣಂ ನರಂ ವರ್ಮೇವ ಸ್ಯೂತಂ
ಪರಿ ಪಾಸಿ ವಿಶ್ವತಃ ।
ಸ್ವಾದುಕ್ಷದ್ಮಾ ಯೋ ವಸತೌ ಸ್ಯೋನಕೃಜ್ ಜೀವಯಾಜಂ
ಯಜತೇ ಸೋಪಮಾ ದಿವಃ ॥ ೧೫ ॥

ಅಗ್ನಿಯೇ! ಯಾವ ಯಜಮಾನನು ಋತ್ವಿಜರಿಗೆ ದಕ್ಷಿಣೆಯನ್ನು ಕೊಟ್ಟಿರುವನೋ, ಅವನನ್ನು ಹೊಲಿದ ಕವಚದಂತೆ ಚೆನ್ನಾಗಿ ಕಾಪಾಡಯ್ಯಾ. ಯಾವ ಯಜಮಾನನು ಸುಸ್ವಾದುವಾದ ಅನ್ನದಿಂದ ಅತಿಥಿಗಳನ್ನು ಸುಖಿಸಿ ತನ್ನ ಮನೆಯಲ್ಲಿ ಜೀವತೃಪ್ತಿಕಾರಿಯಾದ ಅಥವಾ ಜೀವರಿಂದ ವಿಧೀಯಮಾನವಾದ ಯಜ್ಞಾನುಷ್ಠಾನವನ್ನು ಮಾಡುವನೋ, ಅವನು ಸ್ವರ್ಗೀಯವಾದ ಉಪಮೆಗೆ ಪಾತ್ರನಾಗುತ್ತಾನೆ. ॥ ೧೫ ॥

## [ವರ್ಗ: ೩೫]

೩೬೬. ಇಮಾಮಗ್ನೇ ಶರಣಿಂ ಮೀಮೃಷೋ ನ ಇಮಮಧ್ವಾನಂ
ಯಮಗಾಮ ದೂರಾತ್ ।
ಆಪಿಃ ಪಿತಾ ಪ್ರಮತಿಃ ಸೋಮ್ಯಾನಾಂ ಭೃಮಿರಸ್ಯೃಷಿಕೃನ್
ಮರ್ತ್ಯಾನಾಂ ॥ ೧೬ ॥

ಅಗ್ನಿಯೇ! ನಮ್ಮ ಈ ಯಜ್ಞಕಾರ್ಯದ ಭ್ರಾಂತಿಯನ್ನು ಕ್ಷಮಿಸು ಮತ್ತು ಬಹುದೂರದಿಂದ ಬಂದು ಕುಮಾರ್ಗದಲ್ಲಿ ಯಾವಾತನು ಬಿದ್ದಿರುವನೋ, ಅವನನ್ನೂ ಕ್ಷಮಿಸು. ಸೋಮಯಜ್ಞ ಮಾಡುವ ಮಾನವರಿಗೆ ನೀನು ಸುಲಭವಾಗಿ ಪ್ರಾಪ್ಯನಾಗು, ಪಿತೃತುಲ್ಯನಾಗು, ಪ್ರಸನ್ನಮತಿಯಾಗು ಮತ್ತು ಕರ್ಮನಿರ್ವಾಹಕನಾಗು. ಅವರಿಗೆ ಪ್ರತ್ಯಕ್ಷನಾಗಿ ದರ್ಶನ ಕೊಡಯ್ಯಾ. ॥ ೧೬ ॥

೩೬೭. ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್
ಸದನೇ ಪೂರ್ವವಚ್ಛುಚೇ ।
ಅಚ್ಛ ಯಾಹ್ಯಾ ವಹಾ ದೈವ್ಯಂ ಜನ—ಮಾ ಸಾದಯ ಬರ್ಹಿಷಿ
ಯಕ್ಷಿ ಚ ಪ್ರಿಯಂ ॥ ೧೭ ॥

ಪವಿತ್ರನಾದ ಅಗ್ನಿದೇವನೇ! ಅಂಗಿರಸನೇ! ಮನು, ಅಂಗಿರಸ, ಯಯಾತಿ ಮೊದಲಾದ ಬೇರೆ ಬೇರೆ ಪೂರ್ವಕಾಲದ ಪುರುಷರಂತೆ ನೀನಾದರೂ ಸಮ್ಮುಖವರ್ತಿಯಾಗಿ ಯಜ್ಞದೇಶದಲ್ಲಿ ಬಾರಯ್ಯಾ. ಬರುವಾಗ್ಗೆ ದೇವತೆಗಳನ್ನೂ ಸಂಗಡ ತಂದು, ಅವರನ್ನು ಕುಶಗಳ ಮೇಲೆ ಕುಳ್ಳಿರಿಸಿ, ಅವರಿಗೆ ಅಭೀಷ್ಟವಾದ ಹವ್ಯದಾನಗಳನ್ನು ಮಾಡಯ್ಯಾ. ॥ ೧೭ ॥

೩೬೮. ಏತೇನಾಗ್ನೇ ಬ್ರಹ್ಮಣಾ ವಾವೃಧಸ್ವ ಶಕ್ತೀ ವಾ ಯತ್ ತೇ
ಚಕೃಮಾ ವಿದಾ ವಾ ।
ಉತ ಪ್ರ ಣೇಷ್ಯಭಿ ವಸ್ಯೋ ಅಸ್ಮಾನ್ ತ್ಸಂ ನಃ ಸೃಜ ಸುಮತ್ಯಾ
ವಾಜವತ್ಯಾ ॥ ೧೮ ॥

ಅಗ್ನಿಯೇ! ಈ ಮಂತ್ರದಿಂದ ನೀನು ವೃದ್ಧಿಂಗತನಾಗು. ನಮ್ಮ ಶಕ್ತಿ-ಜ್ಞಾನಗಳಿಗನುಸಾರವಾಗಿ ನಾವು ನಿನ್ನ ಸ್ತುತಿಯನ್ನು ಮಾಡಿದೆವು. ಇದರಿಂದ ನೀನು ಪ್ರಸನ್ನನಾಗಿ ನಮಗೆ ವಿಶೇಷವಾದ ಧನವನ್ನೂ, ಅನ್ನಸಂಪನ್ನವಾದ ಮತ್ತು ಶೋಭನವಾದ ಬುದ್ಧಿಯನ್ನೂ ದಯಪಾಲಿಸಯ್ಯಾ. ॥ ೧೮ ॥

## ಸೂಕ್ತ: ೩೨

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಹಿರಣ್ಯಸ್ತೂಪನು; ಛಂದಸ್ಸು: ತ್ರಿಷ್ಟುಪ್.

### [ವರ್ಗ: ೩೬]

೩೬೯. ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ ಯಾನಿ
ಚಕಾರ ಪ್ರಥಮಾನಿ ವಜ್ರೀ ।
ಅಹನ್ನಹಿಮನ್ವಪಸ್ತತರ್ದ ಪ್ರ ವಕ್ಷಣಾ ಅಭಿನತ್ ಪರ್ವತಾನಾಂ ॥ ೧ ॥

ವಜ್ರಧಾರಕನಾದ ಇಂದ್ರನು ಮೊದಲು ಯಾವ ಪರಾಕ್ರಮದ ಕಾರ್ಯವನ್ನೆಸಗಿದ್ದನೋ, ಅದೇ ಕಾರ್ಯದ ವರ್ಣನೆಯನ್ನು ನಾವು ಮಾಡುತ್ತೇವೆ. ಇಂದ್ರನು ಮೇಘವನ್ನು ವಧಿಸಿದ್ದನು. ತರುವಾಯ ಅವನು ಮಳೆಗರೆಸಿದ್ದನು. ಹರಿಯುತ್ತಿರುವ ಪಾರ್ವತೀಯ ನದಿಗಳ ಮಾರ್ಗವನ್ನು ಭಿನ್ನಮಾಡಿದ್ದನು. ॥ ೧ ॥

೩೭೦. ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ।
ವಾಶ್ರಾ ಇವ ಧೇನವಃ ಸ್ಯಂದಮಾನಾ ಅಂಜಃ ಸಮುದ್ರಮವ
ಜಗ್ಮುರಾಪಃ ॥ ೨ ॥

ಇಂದ್ರನು ಪರ್ವತದ ಮೇಲೆ ಆಶ್ರಿತವಾದ ಮೇಘವನ್ನು ತುಂಡರಿಸಿದ್ದನು. ವಿಶ್ವಕರ್ಮನಾದ ತ್ವಷ್ಟಾರನು ಇಂದ್ರನಿಗಾಗಿ ದೂರವೇಧಿಯಾದ ವಜ್ರವನ್ನು ನಿರ್ಮಿಸಿದ್ದನು. ತರುವಾಯ ಯಾವ ರೀತಿಯಲ್ಲಿ ಆಕಳು ವೇಗವಾಗಿ ತನ್ನ ಕರುವಿನೆಡೆಗೆ ಓಡುತ್ತದೆಯೋ, ಅದೇ ರೀತಿಯಲ್ಲಿ ಧಾರಾವಾಹಿಯಾದ ಜಲವು ಸುವೇಗದಿಂದ ಸಮುದ್ರದೆಡೆಗೆ ಹರಿಯತೊಡಗಿತ್ತು. ॥ ೨ ॥

೩೭೧. ವೃಷಾಯಮಾಣೋಽವೃಣೀತ ಸೋಮಂ ತ್ರಿಕದ್ರುಕೇಷ್ವ—
ಪಿಬತ್ ಸುತಸ್ಯ ।
ಆ ಸಾಯಕಂ ಮಘವಾದತ್ತ ವಜ್ರ—ಮಹನ್ನೇನಂ
ಪ್ರಥಮಜಾಮಹೀನಾಂ ॥ ೩ ॥

ಎತ್ತಿನಂತೆ ವೇಗಸಹಿತವಾಗಿ ಇಂದ್ರನು ಸೋಮವನ್ನು ಗ್ರಹಿಸಿದ್ದನು. ತ್ರಿಕದ್ರುಕ-ಯಜ್ಞಗಳಲ್ಲಿ ಅಂದರೆ ಜ್ಯೋತಿಷ್ಟೋಮ, ಗೋಮೇಧ ಮತ್ತು ಆಯು ಈ ನಾಮಧೇಯಗಳುಳ್ಳ ಯಜ್ಞಗಳಲ್ಲಿ ಹನಿಯುವ ಸೋಮವನ್ನು ಇಂದ್ರನು ಪಾನಮಾಡಿದ್ದನು. ಧನವಂತನಾದ ಇಂದ್ರನು ವಜ್ರದ ಖಡ್ಗವನ್ನು ಧರಿಸಿ, ಅದರಿಂದ ಅಹಿ ಅಥವಾ ಮೇಘಗಳ ಅಗ್ರಜನನ್ನು ತುಂಡರಿಸಿದ್ದನು. ॥ ೩ ॥

೩೭೨. ಯದಿಂದ್ರಾಹನ್ ಪ್ರಥಮಜಾಮಹೀನಾ—ಮಾನ್ಮಾಯಿನಾಮಮಿನಾಃ
ಪ್ರೋತ ಮಾಯಾಃ ।
ಆತ್ ಸೂರ್ಯಂ ಜನಯನ್ ದ್ಯಾಮುಷಾಸಂ ತಾದೀತ್ನಾ ಶತ್ರುಂ
ನ ಕಿಲಾ ವಿವಿತ್ಸೇ ॥ ೪ ॥

ಇಂದ್ರನೇ! ಯಾವ ಸಮಯದಲ್ಲಿ ನೀನು ಮೇಘಗಳ ಅಗ್ರಜನನ್ನು ತುಂಡರಿಸಿದ್ದಿಯೋ, ಆ ಸಮಯದಲ್ಲಿ ನೀನು ಮಾಯಾವಿಗಳ ಮಾಯೆಯನ್ನೂ ನಾಶಿಸಿದ್ದೀ. ತರುವಾಯ ಸೂರ್ಯ, ಉಷೆ ಮತ್ತು ಆಕಾಶ ಇವುಗಳ ಪ್ರಕಾಶವನ್ನು ಮಾಡಿದ್ದೀ. ಅಂತ್ಯದಲ್ಲಿ ನಿನಗೆ ಯಾರೂ ಶತ್ರುಗಳು ಇಲ್ಲವಾದರು. ॥ ೪ ॥

೩೭೩. ಅಹನ್ ವೃತ್ರಂ ವೃತ್ರತರಂ ವ್ಯಂಸ—ಮಿಂದ್ರೋ ವಜ್ರೇಣ
ಮಹತಾ ವಧೇನ ।
ಸ್ಕಂಧಾಂಸೀವ ಕುಲಿಶೇನಾ ವಿವೃಕ್ಣಾ—ಽಹಿಃ ಶಯತ ಉಪಪೃಕ್
ಪೃಥಿವ್ಯಾಃ ॥ ೫ ॥

ಸಂಸಾರದಲ್ಲಿ ಕತ್ತಲೆಯನ್ನು ಪಸರಿಸುವ ವೃತ್ರನನ್ನು ಇಂದ್ರನು ಮಹಾ ಧ್ವಂಸಕಾರಿಯಾದ ವಜ್ರದ ಸಹಾಯದಿಂದ, ಛಿನ್ನಬಾಹುವನ್ನಾಗಿ ಮಾಡಿ ವಿನಷ್ಟ ಗೊಳಿಸಿದನು. ಕೊಡಲಿಯಿಂದ ಕಡಿಯಲ್ಪಟ್ಟ ಮರದ ಕೊಂಬೆಯಂತೆ ಅಹಿ ಅಥವಾ ವೃತ್ರನು ಪೃಥಿವಿಯ ಮೇಲೆ ಬಿದ್ದಿರುತ್ತಾನೆ. ॥ ೫ ॥

## [ವರ್ಗಃ ೩೭]

೩೭೪. ಅಯೋದ್ಧೇವ ದುರ್ಮದ ಆ ಹಿ ಜುಹ್ವೇ ಮಹಾವೀರಂ
ತುವಿಬಾಧಮೃಜೀಷಂ ।
ನಾತಾರೀದಸ್ಯ ಸಮೃತಿಂ ವಧಾನಾಂ ಸಂ ರುಜಾನಾಃ ಪಿಪಿಷ
ಇಂದ್ರಶತ್ರುಃ ॥ ೬ ॥

ದರ್ಪಾಂಧನಾದ ವೃತ್ರನು ತನಗೆ ಸಮಾನನಾದ ಯೋದ್ಧನು ಇವನಲ್ಲ ಎಂದು ತುಚ್ಛವಾಗಿ ತಿಳಿದು ಮಹಾವೀರನೂ, ಬಹುಧ್ವಂಸಕನೂ, ಶತ್ರುಂಜ ಯನೂ ಆದ ಇಂದ್ರನನ್ನು ಯುದ್ಧದಲ್ಲಿ ಆಹ್ವಾನಿಸಿದನು. ಇಂದ್ರನ ವಿನಾಶ ಕಾರ್ಯದಿಂದ ವೃತ್ರನಿಗೆ ರಕ್ಷಣೆಯು ದೊರೆಯದೆ ಹೋಯಿತು. ಇಂದ್ರಶತ್ರು ವಾದ ವೃತ್ರನು ನದಿಯಲ್ಲಿ ಬಿದ್ದು ನದಿಗಳನ್ನೂ ಕೂಡ ಅರೆದುಬಿಟ್ಟನು. ॥ ೬ ॥

೩೭೫. ಅಪಾದಹಸ್ತೋ ಅಪೃತನ್ಯದಿಂದ್ರ—ಮಾಸ್ಯ ವಜ್ರಮಧಿ ಸಾನೌ ಜಘಾನ ।
ವೃಷ್ಣೋ ವಧ್ರಿಃ ಪ್ರತಿಮಾನಂ ಬುಭೂಷನ್ ಪುರುತ್ರಾ ವೃತ್ರೋ
ಅಶಯದ್ ವ್ಯಸ್ತಃ ॥ ೭ ॥

ಕೈಕಾಲುಗಳಿಲ್ಲದ ವೃತ್ರನು ಯುದ್ಧದಲ್ಲಿ ಇಂದ್ರನನ್ನು ಆಹ್ವಾನಿಸಿದ್ದನು. ಇಂದ್ರನು ಗಿರಿಸಾನುತುಲ್ಯವಾದ ಮತ್ತು ಬಲಶಾಲಿಯಾದ ವೃತ್ರನ ಭುಜಕ್ಕೆ ವಜ್ರವನ್ನು ಹೊಡೆದಿದ್ದನು. ಯಾವ ರೀತಿಯಲ್ಲಿ ವೀರ್ಯಹೀನನಾದ ಮನುಷ್ಯನು ಪೌರುಷಶಾಲಿಯಾದ ಮನುಷ್ಯನನ್ನು ಎದುರಿಸಲು ವ್ಯರ್ಥವಾಗಿ ಯತ್ನಿಸು ತ್ತಾನೋ, ಅದೇ ರೀತಿಯಲ್ಲಿ ವೃತ್ರನೂ ಕೂಡ ವೃಥಾಯತ್ನವನ್ನು ಮಾಡಿದನು ಮತ್ತು ಅನೇಕ ಸ್ಥಳಗಳಲ್ಲಿ ಕ್ಷತ–ವಿಕ್ಷತನಾಗಿ ನೆಲದ ಮೇಲೆ ಉರುಳಿದನು. ॥ ೭ ॥

೩೭೬. ನದಂ ನ ಭಿನ್ನಮಮುಯಾ ಶಯಾನಂ ಮನೋ ರುಹಾಣಾ
ಅತಿ ಯಂತ್ಯಾಪಃ ।
ಯಾಶ್ಚಿದ್ ವೃತ್ರೋ ಮಹಿನಾ ಪರ್ಯತಿಷ್ಠತ್ ತಾಸಾಮಹಿಃ
ಪತ್ಸುತಃಶೀರ್ಬಭೂವ ॥ ೮ ॥

ಯಾವ ರೀತಿಯಲ್ಲಿ ಮುರಿದುಹೋದ ದಂಡೆಗಳನ್ನು ದಾಟಿ ನದಿಯು ಹರಿಯುತ್ತದೆಯೋ, ಅದೇ ಪ್ರಕಾರವಾಗಿ ಮನೋಹರವಾದ ನೀರು ತನ್ನಲ್ಲಿ ಬಿದ್ದ ವೃತ್ರಾಸುರನ ದೇಹವನ್ನು ಅತಿಕ್ರಮಿಸಿ ಹರಿಯುತ್ತಿರುವದು. ಜೀವಿತನಾಗಿದ್ದಾಗ ತನ್ನ ಮಹಿಮೆಯಿಂದ ವೃತ್ರಾಸುರನು ಯಾವ ನೀರನ್ನು ಕಟ್ಟಿಟ್ಟಿದ್ದನೋ, ಈಗ ಅದೇ ವೃತ್ರನು ಅದೇ ನೀರಿನ ಪದಪ್ರದೇಶದಲ್ಲಿ ಬಿದ್ದಿರುತ್ತಾನೆ. ॥ ೮ ॥

೩೭೭. ನೀಚಾವಯಾ ಅಭವದ್ ವೃತ್ರಪುತ್ರೇಂದ್ರೋ ಅಸ್ಯಾ
ಅವ ವಧರ್ಜಭಾರ ।
ಉತ್ತರಾ ಸೂರಧರಃ ಪುತ್ರ ಆಸೀದ್ ದಾನುಃ ಶಯೇ
ಸಹವತ್ಸಾ ನ ಧೇನುಃ ॥ ೯ ॥

ವೃತ್ರನ ತಾಯಿಯು ವೃತ್ರನ ರಕ್ಷಣೆಗಾಗಿ ಅವನ ದೇಹದ ಮೇಲೆ ಡೊಂಕಾಗಿ ಬಿದ್ದಿದ್ದಳು; ಆದರೆ ಆ ಕಾಲಕ್ಕೆ ಇಂದ್ರನು ಅವನ ಕೆಳಗಿನ ಭಾಗದ ಮೇಲೆ ಅಸ್ತ್ರಪ್ರಹಾರ ಮಾಡಿದನು. ಆಗ ತಾಯಿಯು ಮೇಲೆ ಮತ್ತು ಮಗನು ಕೆಳಗೆ, ಈ ಪ್ರಕಾರ ಆದರು. ತರುವಾಯ ಕರುವಿನೊಡನಿದ್ದ ಆಕಳಂತೆ ವೃತ್ರನ ತಾಯಿಯಾದ 'ದಾನು'ವು ಅನಂತನಿದ್ರೆಯಲ್ಲಿ ಮಲಗಿದಳು. ॥ ೯ ॥

೩೭೮. ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ ।
ವೃತ್ರಸ್ಯ ನಿಣ್ಯಂ ವಿ ಚರಂತ್ಯಾಪೋ ದೀರ್ಘಂ ತಮ
ಆಶಯದಿಂದ್ರಶತ್ರುಃ ॥ ೧೦ ॥

ಸ್ಥಿತಿಶೂನ್ಯವಾದ, ವಿಶ್ರಾಮರಹಿತವಾದ, ಜಲಮಧ್ಯ-ನಿಹಿತವಾದ ಮತ್ತು ನಾಮಪಿರಹಿತವಾದ ದೇಹದ ಮೇಲಿಂದ ನೀರು ಹರಿಯುತ್ತ ಮುಂದಕ್ಕೆ ಸಾಗುತ್ತಿದೆ; ಇಂದ್ರದ್ರೋಹಿಯಾದ ವೃತ್ರನು ಚಿರನಿದ್ರೆಯಲ್ಲಿ ಬಿದ್ದಿದ್ದಾನೆ. ॥ ೧೦ ॥

## [ವರ್ಗಃ ೩೮]

೩೭೯. ದಾಸಪತ್ನೀರಹಿಗೋಪಾ ಅತಿಷ್ಠನ್ ನಿರುದ್ಧಾ ಆಪಃ ಪಣಿನೇವ ಗಾವಃ ।
ಅಪಾಂ ಬಿಲಮಪಿಹಿತಂ ಯದಾಸೀದ್ ವೃತ್ರಂ ಜಘನ್ವಾ ಅಪ ತದ್
ವವಾರ ॥ ೧೧ ॥

'ಪಣಿ' ನಾಮದ ಅಸುರನಿಂದ ಯಾವರೀತಿಯಲ್ಲಿ ದನಗಳು ಅಡಗಿಸಲ್ಪಟ್ಟಿದ್ದವೋ, ಅದೇ ಪ್ರಕಾರವಾಗಿ ವೃತ್ರಾಸುರನ ಸ್ತ್ರೀಯರಾದರೂ ಮೇಘದಿಂದ ತೊರೆದವರಾಗಿ ಪ್ರತಿಬಂಧಿತರಾಗಿದ್ದರು. ಜಲದ ವಾಹಕವಾದ ದ್ವಾರವೂ

ಕೂಡ ಮುಚ್ಚಿತ್ತು. ವೃತ್ರನ ವಧೆಯಾದ ಮೇಲೆ ಇಂದ್ರನು ಆ ಬಾಗಿಲನ್ನು ತೆರೆದಿದ್ದನು. ॥ ೧೧ ॥

೩೮೦. ಅಶ್ವ್ಯೋ ವಾರೋ ಅಭವಸ್ತದಿಂದ್ರ ಸೃಕೇ ಯತ್ ತ್ವಾ ಪ್ರತ್ಯಹನ್
ದೇವ ಏಕಃ ।
ಅಜಯೋ ಗಾ ಅಜಯಃ ಶೂರ ಸೋಮ—ಮವಾಸೃಜಃ ಸರ್ತವೇ
ಸಪ್ತ ಸಿಂಧೂನ್ ॥ ೧೨ ॥

ಇಂದ್ರನೇ! ಯಾವಾಗ ಆ ಒಬ್ಬಂಟಿಗನಾದ ವೃತ್ರಾಸುರನು ನಿನ್ನ ವಜ್ರದ ಮೇಲೆ ಆಘಾತವನ್ನು ಮಾಡಿದ್ದನೋ, ಆಗ ನೀನು ಕುದುರೆಯ ಬಾಲದಂತೆ ಇದ್ದು ಅದರ ನಿವಾರಣವನ್ನು ಮಾಡಿದೆ. ನೀನು ಪಣಿಯಿಂದ ಅಡಗಿಸಲ್ಪಟ್ಟ ದನಗಳನ್ನೂ ಗೆದ್ದು ಸಂಪಾದಿಸಿದೆ, ತ್ವಷ್ಟಾರನ ಸೋಮರಸವನ್ನೂ ಜಯಿಸಿದೆ ಮತ್ತು ಸಪ್ತಸಿಂಧುಗಳ ಪ್ರವಾಹವನ್ನು ಅಪ್ರತಿಹತವನ್ನಾಗಿ ಮಾಡಿದೆ. ॥ ೧೨ ॥

೩೮೧. ನಾಸ್ಮೈ ವಿದ್ಯುನ್ನ ತನ್ಯತುಃ ಸಿಷೇಧ ನ ಯಾಂ ಮಿಹಮಕಿರದ್
ಧ್ರಾದುನಿಂ ಚ ।
ಇಂದ್ರಶ್ಚ ಯದ್ ಯುಯುಧಾತೇ ಅಹಿಶ್ಚೋ—ತಾಪರೀಭ್ಯೋ
ಮಘವಾ ವಿಜಿಗ್ಯೇ ॥ ೧೩ ॥

ಇಂದ್ರ-ವೃತ್ರರ ಕಾಳಗದಲ್ಲಿ ವೃತ್ರನು ಯಾವ ವಿದ್ಯುತ್‌ಶಕ್ತಿ, ಮೇಘ-ಧ್ವನಿ, ಜಲವೃಷ್ಟಿ ಮತ್ತು ವಜ್ರಗಳನ್ನು ಇಂದ್ರನ ಮೇಲೆ ಪ್ರಯೋಗಿಸಿದ್ದನೋ, ಅವೆಲ್ಲವೂ ಇಂದ್ರನನ್ನು ಮುಟ್ಟಲಾರದೇ ಹೋದವು. ಇದೂ ಅಲ್ಲದೆ, ಇಂದ್ರನು ವೃತ್ರಾಸುರನ ಬೇರೆ ಮಾಯೆಗಳನ್ನೂ ಜಯಿಸಿದನು. ॥ ೧೩ ॥

೩೮೨. ಅಹೇರ್ಯಾತಾರಂ ಕಮಪಶ್ಯ ಇಂದ್ರ ಹೃದಿ ಯತ್ ತೇ
ಜಘ್ನುಷೋ ಭೀರಗಚ್ಛತ್ ।
ನವ ಚ ಯನ್ ನವತಿಂ ಚ ಸ್ರವಂತೀಃ ಶ್ಯೇನೋ ನ ಭೀತೋ
ಅತರೋ ರಜಾಂಸಿ ॥ ೧೪ ॥

ಇಂದ್ರನೇ! ವೃತ್ರ-ಹನನದ ಸಮಯದಲ್ಲಿ ಯಾವಾಗ ನಿನ್ನ ಹೃದಯದಲ್ಲಿ ಭೀತಿಯ ಸಂಚಾರವಾಗಲಿಲ್ಲ ಅಂದಮೇಲೆ ನೀನು ಯಾವುದೇ ಬೇರೆ ವೃತ್ರ-ಹಂತಾರನಿಂದ ಯಾವ ಪ್ರತೀಕ್ಷೆ ಮಾಡಿದೆ ಅಥವಾ ಯಾವ ಸಹಾಯವನ್ನು ಅಪೇಕ್ಷಿಸಿದೆ? ನಿರ್ಭೀಕವಾದ ಶ್ಯೇನಪಕ್ಷಿಯಂತೆ ನೀನು ತೊಂಬತ್ತೊಂಬತ್ತು ನದಿನದಗಳನ್ನು ಏಕೆ ಪಾರಮಾಡಿದೆ? ॥ ೧೪ ॥

೩೮೩. ಇಂದ್ರೋ᳚ ಯಾ॒ತೋಽವ॑ಸಿತಸ್ಯ॒ ರಾಜಾ॒ ಶಮ॑ಸ್ಯ ಚ ಶೃ॒ಙ್ಗಿಣೋ॒
ವಜ್ರ॑ಬಾಹುಃ ।
ಸೇದು॒ ರಾಜಾ॑ ಕ್ಷಯತಿ ಚರ್ಷಣೀ॒ನಾ—ಮ॒ರಾನ್ ನ ನೇ॒ಮಿಃ
ಪರಿ॒ ತಾ ಬ॑ಭೂವ ॥ ೧೫ ॥

ಶತ್ರುವಿನಾಶವಾದ ಮೇಲೆ ವಜ್ರಬಾಹುವಾದ ಇಂದ್ರನು ಸ್ಥಾವರ, ಜಂಗಮ, ಶಾಂತ ಪಶು ಮತ್ತು ಶೃಂಗೀ ಪಶು, ಇವೆಲ್ಲವುಗಳಿಗೆ ಅಧಿಪತಿಯಾದನು. ಇಂದ್ರನು ಮಾನವರಲ್ಲಿ ಅರಸನಾಗಿ ನಿವಾಸವನ್ನು ಮಾಡುತ್ತಾನೆ. ಯಾವ ರೀತಿಯಲ್ಲಿ ಚಕ್ರದ ಪರಿಧಿಯು ಪಟ್ಟಿಗಳನ್ನು ಧರಿಸುತ್ತಿದೆಯೋ, ಅದೇ ತರಹದಲ್ಲಿ ಇಂದ್ರನಾದರೂ ತನ್ನಲ್ಲಿ ಚರಾಚರವನ್ನು ಧಾರಣಮಾಡಿರುವನು. ॥ ೧೫ ॥

ಎರಡನೆಯ ಅಧ್ಯಾಯವು ಮುಗಿದುದು

# ಮೂರನೆಯ ಅಧ್ಯಾಯವು

## ಸೂಕ್ತ: ೩೩

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಹಿರಣ್ಯಸ್ತೂಪನು; ಛಂದಸ್ಸು: ತ್ರಿಷ್ಟುಪ್.

### [ವರ್ಗ: ೧]

೩೮೪. ಏತಾಯಾಮೋಪ ಗವ್ಯಂತ ಇಂದ್ರ—ಮಸ್ಮಾಕಂ ಸು ಪ್ರಮತಿಂ ವಾವೃಧಾತಿ ।
ಅನಾಮೃಣಃ ಕುವಿದಾದಸ್ಯ ರಾಯೋ ಗವಾಂ ಕೇತಂ ಪರಮಾವರ್ಜತೇ ನಃ ॥ ೧ ॥

ಬನ್ನಿರಿ, ಆಕಳುಗಳನ್ನು ಸಂಪಾದಿಸುವ ಇಚ್ಛೆಯಿಂದ ನಾವು ಇಂದ್ರನ ಹತ್ತಿರ ಹೋಗುವಾ. ಇಂದ್ರನು ಹಿಂಸಾರಹಿತನಾಗಿರುವನು ಮತ್ತು ನಮ್ಮ ಉತ್ಕೃಷ್ಟವಾದ ಬುದ್ಧಿಯನ್ನು ಪರಿವರ್ಧಿಸುತ್ತಾನೆ. ಅಂತ್ಯದಲ್ಲಿ ಅವನು ಈ ಗೋಸ್ವರೂಪವಾದ ಧನದ ವಿಷಯದಲ್ಲಿ ನಮಗೆ ಉಚ್ಚಜ್ಞಾನದ ದಾನ ಮಾಡುತ್ತಾನೆ. ॥ ೧ ॥

೩೮೫. ಉಪೇದಹಂ ಧನದಾಮಪ್ರತೀತಂ ಜುಷ್ಟಾಂ ನ ಶ್ಯೇನೋ ವಸತಿಂ ಪತಾಮಿ ।
ಇಂದ್ರಂ ನಮಸ್ಯನ್ನುಪಮೇಭಿರರ್ಕೈ—ರ್ಯಃ ಸ್ತೋತೃಭ್ಯೋ ಹವ್ಯೋ ಅಸ್ತಿ ಯಾಮನ್ ॥ ೨ ॥

ಯಾವ ರೀತಿಯಲ್ಲಿ ಶ್ಯೇನಪಕ್ಷಿಯು ತನ್ನ ಪೂರ್ವಸೇವಿತವಾದ ಗೂಡಿನ ಕಡೆಗೆ ಓಡುತ್ತಿದೆಯೋ, ಅದೇ ತರಹದಲ್ಲಿ ನಾನಾದರೂ ಉಪಮಾನಸ್ಥಾನೀಯ ಸ್ತೋತ್ರಗಳಿಂದ ಪೂಜಿಸಿ, ಧನದಾತೃವೂ, ಅಪ್ರತಿಹತನೂ ಆಗಿರುವ ಇಂದ್ರನ ಕಡೆಗೆ ಓಡುತ್ತೇನೆ. ಯುದ್ಧಕಾಲದಲ್ಲಿ ಇಂದ್ರನು ಸ್ತೋತಾರರಿಗೆ ಆರಾಧ್ಯನಾಗಿರುವನು. ॥ ೨ ॥

೩೮೬. ನಿ ಸರ್ವಸೇನ ಇಷುಧೀರಸಕ್ತ ಸಮರ್ಯೋ ಗಾ ಅಜತಿ ಯಸ್ಯ ವಷ್ಟಿ ।
ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ ಮಾ ಪಣಿರ್ಭೂರಸ್ಮದಧಿ ಪ್ರವೃದ್ಧ ॥ ೩ ॥

ಸಮಸ್ತ ಸೇನೆಗೆ ಸೇನಾಪತಿಯಾದ ಇಂದ್ರನು ಬೆನ್ನಿನ ಮೇಲೆ ಬಿಲ್ಲನ್ನು ಜೋಡಿಸಿ ಇಟ್ಟಿರುತ್ತಾನೆ. ಸ್ವಾಮಿಸ್ವರೂಪನಾದ ಇಂದ್ರನು ಯಾವಾತನನ್ನು

ಪ್ರೀತಿಸುವನೋ, ಅವನ ಹತ್ತಿರ ದನಗಳನ್ನು ಕಳುಹಿಸಿಕೊಡುವನು. ಉಚ್ಚವಾದ ಬುದ್ಧಿಯುಳ್ಳ ಇಂದ್ರನೇ! ನಮಗೆ ತುಂಬ ಹಣವನ್ನು ಕೊಟ್ಟು ನಮ್ಮ ಹತ್ತಿರ ವ್ಯಾಪಾರಿಯಂತೆ ವರ್ತಿಸಬೇಡಯ್ಯಾ. ॥ ೩ ॥

೩೮೭. ವಧೀರ್ಹಿ ದಸ್ಯುಂ ಧನಿನಂ ಘನೇನಁ ಏಕಶ್ಚರನ್ನುಪಶಾಕೇಭಿರಿಂದ್ರ ।
ಧನೋರಧಿ ವಿಷುಣಕ್ ತೇ ವ್ಯಾಯ—ನ್ನಯಜ್ವಾನಃ ಸನಕಾಃ
ಪ್ರೇತಿಮೀಯುಃ ॥ ೪ ॥

ಇಂದ್ರನೇ! ಶಕ್ತಿಶಾಲಿಗಳಾದ ಮಾರುತರು ನಿನ್ನ ಸಹಾಯಕ್ಕೆ ಬರಲು ಸಿದ್ಧರಾಗಿದ್ದರೂ ಕೂಡ, ನೀನು ಒಬ್ಬಂಟಿಗನಾಗಿ ಧನವಂತನೂ, ಕಳ್ಳನೂ ಆಗಿರುವ ವೃತ್ರಾಸುರನನ್ನು ನಿನ್ನ ಕಠಿಣವಾದ ವಜ್ರದಿಂದ ತುಂಡರಿಸಿದೆ. ಯಜ್ಞಶತ್ರುಗಳಾದ ವೃತ್ರನ ಅನುಚರರು ನಿನ್ನ ಬಿಲ್ಲಿನಿಂದ ವಿನಾಶದ ಉದ್ದೇಶದಿಂದಲೋ ಏನೋ ಎಂಬಂತೆ ಬಂದು ತಲುಪಿ, ಮೃತ್ಯುವನ್ನು ಪ್ರಾಪ್ತರಾದರು. ॥ ೪ ॥

೩೮೮. ಪರಾ ಚಿಚ್ಛೀರ್ಷಾ ವವೃಜುಸ್ತ ಇಂದ್ರಾ—ಽಯಜ್ವಾನೋ
ಯಜ್ವಭಿಃ ಸ್ಪರ್ಧಮಾನಾಃ ।
ಪ್ರಯದ್ ದಿವೋ ಹರಿವಃ ಸ್ಥಾತರುಗ್ರ ನಿರವ್ರತಾಁ ಅಧಮೋ
ರೋದಸ್ಯೋಃ ॥ ೫ ॥

ಇಂದ್ರನೇ! ಆ ಯಜ್ಞರಹಿತರಾದವರು ಮತ್ತು ಯಜ್ಞದ ಅನುಷ್ಠಾನ ಮಾಡುವವರ ವಿರೋಧಿಗಳು ತಲೆತಿರುಗಿಸಿ ಓಡಿಹೋಗಿರುವರು. ಹರಿನಾಮದ ಕುದುರೆಗಳುಳ್ಳ, ಪಲಾಯನ-ವಿರಹಿತನಾದ ಮತ್ತು ಉಗ್ರನಾಗಿರುವ ಇಂದ್ರನೇ! ನೀನು ದಿವ್ಯಲೋಕ, ಆಕಾಶ ಮತ್ತು ಪೃಥಿವೀ, ಇವುಗಳೊಳಗಿಂದ ವ್ರತಬಾಹಿರರಾದ ಜನರನ್ನು ಹೊರಗೆ ಹಾಕಿರುವೆ. ॥ ೫ ॥

## [ವರ್ಗಃ ೨]

೩೮೯. ಅಯುಯುತ್ಸನ್ನನವದ್ಯಸ್ಯ ಸೇನಾ—ಮಯಾತಯಂತ
ಕ್ಷಿತಯೋ ನವಗ್ವಾಃ ।
ವೃಷಾಯುಧೋ ನ ವಧ್ರಯೋ ನಿರಷ್ಟಾಃ ಪ್ರವದ್ಭಿರಿಂದ್ರಾಚ್ಚಿತಯಂತ
ಆಯನ್ ॥ ೬ ॥

ಆ ವ್ರತವಿರಹಿತರಾದ ಜನರು ದೋಷರಹಿತನಾದ ಇಂದ್ರನ ಸೇನೆಯೊಡನೆ ಯುದ್ಧಮಾಡಲು ಇಚ್ಛಿಸಿದರು. ಆದರೆ ಚರಿತ್ರವಂತರಾದ ಮನುಷ್ಯರು ಇಂದ್ರನನ್ನು ಪ್ರೋತ್ಸಾಹಿಸಿದ್ದರು. ಶೂರರೊಂದಿಗೆ ಯುದ್ಧವು ನಿಶ್ಚಯವಾದ ಮೇಲೆ ನಪುಂಸಕರು ಯಾವ ರೀತಿಯಲ್ಲಿ ಓಡಿಹೋಗುವರೋ, ಅದೇ ಪ್ರಕಾರ

ವಾಗಿ ಆ ವ್ರತಬಾಹಿರರು ಇಂದ್ರನಿಂದ ನಿರಾಕೃತರಾಗಿ ಮತ್ತು ತಮ್ಮ ಶಕ್ತಿ ಹೀನತೆಯನ್ನು ಚೆನ್ನಾಗಿ ತಿಳಿದುಕೊಂಡು ಇಂದ್ರನ ಸನಿಯದಿಂದ ಸಿಕ್ಕಿದ ದಾರಿ ಯಲ್ಲಿ ದೂರ ಓಡಿಹೋದರು. ॥ ೬ ॥

೩೯೦. ತ್ವಮೇತಾನ್ ರುದತೋ ಜಕ್ಷತಶ್ಚಾ-ಯೋಧಯೋ ರಜಸ ಇಂದ್ರ ಪಾರೇ ।
ಅವಾದಹೋ ದಿವ ಆ ದಸ್ಯುಮುಚ್ಚಾ ಪ್ರ ಸುನ್ವತಃ ಸ್ತುವತಃ
ಶಂಸಮಾವಃ ॥ ೭ ॥

ಇಂದ್ರನೇ! ನೀನು ಹಾಸ್ಯಾಸಕ್ತರಿಗೂ, ಅಳುವಂಥವರಿಗೂ, ಅಂತರಿಕ್ಷ ದಲ್ಲಿ ಯುದ್ಧದಾನ ಮಾಡಿರುವೆ. ದಸ್ಯುವಾದ ವೃತ್ರನನ್ನು ದಿವ್ಯಲೋಕದಿಂದ ತಂದು, ಅವನನ್ನು ಚೆನ್ನಾಗಿ ಸುಟ್ಟುಹಾಕಿರುವೆ. ಇದರಂತೆಯೇ ಸೋಮರಸ ವನ್ನು ತಯಾರಿಸುವವರ ಮತ್ತು ಸ್ತೋತಾರರ ಸ್ತುತಿರಕ್ಷಣವನ್ನೂ ಮಾಡಿರುವೆ. ॥ ೭ ॥

೩೯೧. ಚಕ್ರಾಣಾಸಃ ಪರೀಣಹಂ ಪೃಥಿವ್ಯಾ ಹಿರಣ್ಯೇನ ಮಣಿನಾ ಶುಂಭಮಾನಾಃ ।
ನ ಹಿನ್ವಾನಾಸಸ್ತಿತಿರುಸ್ತ ಇಂದ್ರಂ ಪರಿ ಸ್ಪಶೋ ಅದಧಾತ್
ಸೂರ್ಯೇಣ ॥ ೮ ॥

ಆ ವೃತ್ರನ ಅನುಚರರು ಪೃಥಿವಿಯನ್ನು ಸಂಪೂರ್ಣವಾಗಿ ಆಚ್ಛಾದಿಸಿ, ಸುವರ್ಣ ಮತ್ತು ಮಣಿ-ರತ್ನಗಳಿಂದ ಸಂಪನ್ನರಾಗಿದ್ದರು. ಆದರೆ ಅವರಿಗೆ ಇಂದ್ರನನ್ನು ಜಯಿಸಲು ಸಾಧ್ಯವಾಗಲಿಲ್ಲ. ಇಂದ್ರನು ಆ ವಿಘ್ನ-ಕರ್ತಾರರನ್ನು ಸೂರ್ಯನಿಂದ ತಿರೋಹಿತರನ್ನಾಗಿ ಮಾಡಿಬಿಟ್ಟನು. ॥ ೮ ॥

೩೯೨. ಪರಿ ಯದಿಂದ್ರ ರೋದಸೀ ಉಭೇ ಅಬುಭೋಜೀರ್ಮಹಿನಾ ವಿಶ್ವತಃ ಸೀಂ ।
ಅಮನ್ಯಮಾನಾ ಅಭಿ ಮನ್ಯಮಾನೈ-ರ್ನಿರ್ಬ್ರಹ್ಮಭಿರಧಮೋ
ದಸ್ಯುಮಿಂದ್ರ ॥ ೯ ॥

ಇಂದ್ರನೇ! ನೀನು ನಿನ್ನ ಮಹಿಮೆಯಿಂದ ದ್ಯುಲೋಕ ಮತ್ತು ಭೂಲೋಕ ಇವುಗಳನ್ನು ಸಂಪೂರ್ಣವಾಗಿ ವೇಷ್ಟನಮಾಡಿ ಎಲ್ಲ ಭೋಗ ಗಳನ್ನು ಹುಟ್ಟಿಸಿದೆ; ಆ ಕಾರಣದಿಂದಲೇ ಮಂತ್ರಾರ್ಥಗ್ರಹಣ ಮಾಡಲು ಅಸ ಮರ್ಥರಾದ ಯಜಮಾನರನ್ನೂ ಸಹ ಕಾಪಾಡಲು ಸಮರ್ಥವಾದ ಮಂತ್ರ ಗಳಿಂದ ವೃತ್ರರೂಪಿನ ಕಳ್ಳನನ್ನು ದೂರಗೊಳಿಸಿದೆ. ॥ ೯ ॥

೩೯೩. ನ ಯೇ ದಿವಃ ಪೃಥಿವ್ಯಾ ಅಂತಮಾಪು-ರ್ನ ಮಾಯಾಭಿರ್ಧನದಾಂ
ಪರ್ಯಭೂವನ್ ।
ಯುಜಂ ವಜ್ರಂ ವೃಷಭಶ್ಚಕ್ರ ಇಂದ್ರೋ ನಿರ್ಜ್ಯೋತಿಷಾ ತಮಸೋ
ಗಾ ಅದುಕ್ಷತ್ ॥ ೧೦ ॥

ಯಾವ ಕಾಲದಲ್ಲಿ ದಿವ್ಯಲೋಕದಿಂದ ಜಲವು ಪೃಥಿವಿಯ ಮೇಲೆ ಅಪ್ರಾಪ್ಯವಾಗಿ ಫಲಪ್ರದವಾದ ಭೂಮಿಯನ್ನು ಉಪಕಾರಿಯಾದ ದ್ರವ್ಯಗಳಿಂದ ಪರಿಪೂರ್ಣವನ್ನಾಗಿ ಮಾಡಲಿಲ್ಲವೋ, ಆ ಕಾಲದಲ್ಲಿ ಮಳೆಗರೆಯುವ ಇಂದ್ರನು ತನ್ನ ಕೈಗಳಿಂದ ವಜ್ರವನ್ನು ಮೇಲಕ್ಕೆ ಎತ್ತಿಹಿಡಿದು ಆ ಚಕಚಕಿಸುವ ವಜ್ರದಿಂದ ಅಂಧಕಾರರೂಪಿನ ಮೇಘದಿಂದ ಬೀಳುವಂಥ ನೀರನ್ನು ಸಂಪೂರ್ಣವಾಗಿ ದೋಹನಮಾಡಿದನು. ॥ ೧೦ ॥

## [ವರ್ಗ: ೩]

೩೯೪. ಅನು ಸ್ವಧಾಮಕ್ಷರನ್ನಾಪೋ ಅಸ್ಯಾ—ಽವರ್ಧತ ಮಧ್ಯ ಆ ನಾವ್ಯಾನಾಂ ।
ಸಧ್ರೀಚೀನೇನ ಮನಸಾ ತಮಿಂದ್ರ ಓಜಿಷ್ಠೇನ
ಹನ್ಮನಾಹನ್ನಭಿದ್ಯೂನ್ ॥ ೧೧ ॥

ಪ್ರಕೃತಿಗನುಸಾರವಾಗಿ ನೀರು ಹರಿಯತೊಡಗಿತು; ಆದರೆ ವೃತ್ರನು ನೌಕಾಗಮ್ಯವಾದ ನದಿಗಳನ್ನು ವ್ಯಾಪಿಸಿಬಿಟ್ಟನು. ಆ ವೇಳೆಯಲ್ಲಿ ಇಂದ್ರನು ತನ್ನ ಮಹಾಬಲಶಾಲಿಯಾದ ಮತ್ತು ಪ್ರಾಣಸಂಹಾರಿಯಾದ ಆಯುಧದಿಂದ ಕೆಲವೇ ದಿನಗಳಲ್ಲಿ ಸ್ಥಿರಮನಸ್ಸುಳ್ಳ ವೃತ್ರನನ್ನು ತುಂಡರಿಸಿದನು. ॥ ೧೧ ॥

೩೯೫. ನ್ಯಾವಿಧ್ಯದಿಲೀಬಿಶಸ್ಯ ದೃಳ್ಹಾ ವಿ ಶೃಂಗಿಣಮಭಿನಚ್ಛುಷ್ಣಮಿಂದ್ರಃ ।
ಯಾವತ್ತರೋ ಮಘವನ್ ಯಾವದೋಜೋ ವಜ್ರೇಣ ಶತ್ರುಮವಧೀಃ
ಪೃತನ್ಯುಂ ॥ ೧೨ ॥

ಭೂಮಿಯ ಮೇಲೆ ಒರಗಿದ ವೃತ್ರಾಸುರನ ಸೇನೆಯನ್ನು ಇಂದ್ರನು ಗಾಯಗೊಳಿಸಿದ್ದನು ಮತ್ತು ಶೃಂಗಿಯೂ, ಜಗಚ್ಛೋಷಕನೂ ಆಗಿದ್ದ ವೃತ್ರಾಸುರನಿಗೆ ವಿಧವಿಧವಾಗಿ ಹೊಡೆತಗಳನ್ನು ಕೊಟ್ಟಿದ್ದನು. ಇಂದ್ರನೇ! ನಿನ್ನ ಹತ್ತರ ಎಷ್ಟು ವೇಗ ಮತ್ತು ಬಲಗಳಿವೆಯೋ, ಅವುಗಳಿಂದ ಯುದ್ಧಾಕಾಂಕ್ಷಿಯಾದ ಶತ್ರುವನ್ನು ವಜ್ರದಿಂದ ಹನನಮಾಡಿದೆ. ॥ ೧೨ ॥

೩೯೬. ಅಭಿ ಸಿಧ್ಮೋ ಅಜಿಗಾದಸ್ಯ ಶತ್ರೂನ್ ವಿ ತಿಗ್ಮೇನ ವೃಷಭೇಣಾ
ಪುರೋಽಭೇತ್ ।
ಸಂ ವಜ್ರೇಣಾಸೃಜದ್ ವೃತ್ರಮಿಂದ್ರಃ ಪ್ರ ಸ್ವಾಂ
ಮತಿಮತಿರಚ್ಛಾಶದಾನಃ ॥ ೧೩ ॥

ಇಂದ್ರನ ಕಾರ್ಯಸಾಧಕವಾದ ವಜ್ರವು ಶತ್ರುವನ್ನನುಲಕ್ಷಿಸಿ ಬಿದ್ದಿತ್ತು. ಇಂದ್ರನು ತನ್ನ ತೀಕ್ಷ್ಣವಾದ ಮತ್ತು ಶ್ರೇಷ್ಠವಾದ ಆಯುಧದಿಂದ ವೃತ್ರನ ನಗರಗಳನ್ನು ವಿವಿಧ ಪ್ರಕಾರವಾಗಿ ಭೇದಿಸಿದನು. ಕೊನೆಯಲ್ಲಿ ಇಂದ್ರನು ವೃತ್ರನ ಮೇಲೆ ವಜ್ರದಿಂದ ಅಘಾತಮಾಡಿದನು ಮತ್ತು ಅವನನ್ನು ಕೊಂದು ತನ್ನ ಉತ್ಸಾಹವನ್ನು ಚೆನ್ನಾಗಿ ವರ್ಧಿಸಿದನು. ॥ ೧೩ ॥

೩೯೭. ಆವಃ ಕುತ್ಸಮಿಂದ್ರ ಯಸ್ಮಿಂಚಾಕನ್ ಪ್ರಾವೋ ಯುಧ್ಯಂತಂ
ವೃಷಭಂ ದಶದ್ಯುಂ ।
ಶಫಚ್ಯುತೋ ರೇಣುರ್ನಕ್ಷತ ದ್ಯಾ- ಮುಚ್ಛ್ವೈತ್ರೇಯೋ
ನೃಷಾಹ್ಯಾಯ ತಸ್ಥೌ　　॥ ೧೪ ॥

ಇಂದ್ರನೇ! ನೀನು ಯಾವ ಕುತ್ಸನ ಸ್ತುತಿಯನ್ನು ಪ್ರೀತಿಸುವೆಯೋ, ಅದೇ ಕುತ್ಸನನ್ನು ನೀನು ರಕ್ಷಿಸಿದೆ. ನೀನು ಯುದ್ಧರತನಾದ, ಶ್ರೇಷ್ಠನಾದ ಮತ್ತು ಹತ್ತೂ ದಿಕ್ಕುಗಳಲ್ಲಿ ಬೆಳಗುವ ದಶದ್ಯುವಿನ ರಕ್ಷಣೆಯನ್ನು ಮಾಡಿದೆ. ನಿನ್ನ ಕುದುರೆಗಳ ಖುರಗಳಿಂದ ಬಿದ್ದ ಧೂಳಿಯು ದೇವಲೋಕದ ವರೆಗೆ ಹಬ್ಬಿತು. ಶತ್ರುಭಯದಿಂದ ನೀರೊಳಗೆ ಮುಳುಗಿ ಅಡಗಿದ್ದ ಶ್ವೈತ್ರೇಯ ಋಷಿಯು, ಮಾನವರಲ್ಲಿ ಅಗ್ರಣಿಯಾಗುವ ಇಚ್ಛೆಯಿಂದ, ನಿನ್ನ ಅನುಗ್ರಹವಿದ್ದ ಮೂಲಕವೇ ಹೊರಗೆ ಬಂದನು.　　॥ ೧೪ ॥

೩೯೮. ಆವಃ ಶಮಂ ವೃಷಭಂ ತುಗ್ರ್ಯಾಸು ಕ್ಷೇತ್ರಜೇಷೇ
ಮಘವಂಛ್ವಿತ್ರ್ಯಂ ಗಾಂ ।
ಜ್ಯೋಕ್ ಚಿದತ್ರ ತಸ್ಥಿವಾಂಸೋ ಅಕ್ರ-ಞ್ಛತ್ರೂಯತಾಮಧರಾ
ವೇದನಾಕಃ　　॥ ೧೫ ॥

ಇಂದ್ರನೇ! ಸೌಮ್ಯನೂ, ಶ್ರೇಷ್ಠನೂ, ಜಲಮಗ್ನನೂ ಆಗಿರುವ ಶ್ವೈತ್ರೇಯನನ್ನು ಕ್ಷೇತ್ರಪ್ರಾಪ್ತಿಗಾಗಿ ನೀನು ಕಾಪಾಡಿರುತ್ತೀ. ನಮ್ಮೊಂದಿಗೆ ಬಹು ಸಮಯದಿಂದ ಯುದ್ಧಮಾಡುತ್ತಿರುವ ಆ ಶತ್ರುಗಳನ್ನು ನೀನು ಪೀಡಿಸಿ ದುಃಖಗೊಳಿಸು.　　॥ ೧೫ ॥

## ಸೂಕ್ತ: ೩೪

ಈ ಸೂಕ್ತದ ದೇವತೆ: ಅಶ್ವಿದ್ವಯವು; ಋಷಿ: ಹಿರಣ್ಯಸ್ತೂಪನು; ಛಂದಸ್ಸು: ತ್ರಿಷ್ಟುಪ್.

### [ವರ್ಗಃ ೪]

೩೯೯. ತ್ರಿಶ್ಚಿನ್ ನೋ ಅದ್ಯಾ ಭವತಂ ನವೇದಸಾ ವಿಭುರ್ವಾಂ ಯಾಮ
ಉತ ರಾತಿರಶ್ವಿನಾ ।
ಯುವೋರ್ಹಿ ಯಂತ್ರಂ ಹಿಮ್ಯೇವ ವಾಸಸೋ-ಽಭ್ಯಾಯಂಸೇನ್ಯಾ
ಭವತಂ ಮನೀಷಿಭಿಃ　　॥ ೧ ॥

ಮೇಧಾವಿಯಾದ ಅಶ್ವಿನೀಕುಮಾರದ್ವಯರೇ! ನಮ್ಮ ಸಲುವಾಗಿ ಇಂದು ನೀವು ಮೂರು ಸರ್ತಿ ಬನ್ನಿರಿ. ನಿಮ್ಮ ರಥವು ಮತ್ತು ನಿಮ್ಮ ದಾನವು ಬಹು

ವ್ಯಾಪಿಯಾಗಿರುವದು. ಯಾವ ರೀತಿಯಲ್ಲಿ ರಶ್ಮಿಯುಕ್ತವಾದ ದಿನವು ಮತ್ತು ಹಿಮಯುಕ್ತವಾದ ರಾತ್ರಿಯು ಪರಸ್ಪರವಾದ ನಿಯಮರೂಪದಿಂದ ಸಂಬಂಧಿತ ವಾಗಿರುತ್ತವೋ, ಅದೇ ತರಹದ ಸಂಬಂಧವು ನಿಮ್ಮಿಬ್ಬರ ನಡುವೆ ಇರುತ್ತದೆ. ದಯವಮಾಡಿ ನೀವು ಮೇಧಾವಿಗಳಾದ ಋತ್ವಿಜರ ವಶದಲ್ಲಿ ಬನ್ನಿರಿ. ॥ ೧ ॥

೪೦೦. ತ್ರಯಃ ಪವಯೋ ಮಧುವಾಹನೇ ರಥೇ ಸೋಮಸ್ಯ ವೇನಾಮನು
ವಿಶ್ವ ಇದ್ ವಿದುಃ ।
ತ್ರಯಃ ಸ್ಕಂಭಾಸಃ ಸ್ಕಭಿತಾಸ ಆರಭೇ ತ್ರಿರ್ನಕ್ತಂ
ಯಾಥಸ್ತ್ರಿರ್ವಶ್ವಿನಾ ದಿವಾ ॥ ೨ ॥

ನಿಮ್ಮ ಮಧುರಖಾದ್ಯ-ವಾಹಕವಾದ ರಥಕ್ಕೆ ಮೂರು ಸುದೃಢವಾದ ಗಾಲಿಗಳಿರುತ್ತವೆ; ಚಂದ್ರಮನ ಸುಂದರ ಹೆಂಡತಿಯಾದ ವೇನಾದೇವಿಯ ವಿವಾಹ ಯಾತ್ರೆಯ ಸಮಯದಲ್ಲಿ ಎಲ್ಲ ದೇವತೆಗಳು ಆ ಮೂರೂ ಚಕ್ರಗಳನ್ನು ನೋಡಿ ದರು. ಆ ರಥದ ಮೇಲೆ ಆಧಾರದ ಸಲುವಾಗಿ ಮೂರು ಕಂಬಗಳಿವೆ. ಅಶ್ವಿ ದ್ವಯರೇ! ಅದೇ ರಥದಲ್ಲಿ ಆಸೀನರಾಗಿ ಹಗಲಿನಲ್ಲಿ ಮೂರು ಸಲ ಮತ್ತು ಇರುಳಿನಲ್ಲಿ ಮೂರು ಸಲ, ಈ ಪ್ರಕಾರವಾಗಿ ಗಮನಮಾಡುತ್ತೀರಿ. ॥ ೨ ॥

೪೦೧. ಸಮಾನೇ ಅಹನ್ ತ್ರಿರವದ್ಯ ಗೋಹನಾ ತ್ರಿರದ್ಯ ಯಜ್ಞಂ
ಮಧುನಾ ಮಿಮಿಕ್ಷತಂ ।
ತ್ರಿರ್ವಾಜವತೀರಿಷೋ ಅಶ್ವಿನಾ ಯುವಂ ದೋಷಾ
ಅಸ್ಮಭ್ಯಮುಷಸಶ್ಚ ಪಿನ್ವತಂ ॥ ೩ ॥

ಅಶ್ವಿದ್ವಯರೇ! ನೀವು ದಿನಕ್ಕೆ ಮೂರು ಸಲ ಯಜ್ಞಾನುಷ್ಠಾನದ ಹೋಮವನ್ನು ಶುದ್ಧಮಾಡಿರಿ. ಈ ಹೊತ್ತು ಮೂರು ಸಲ ಮಧುರವಾದ ರಸ ದಿಂದ ಯಜ್ಞದ ಹವ್ಯವನ್ನು ಒದ್ದೆಮಾಡಿರಿ. ಹಗಲಿನಲ್ಲಿಯೂ ಇರುಳಿನಲ್ಲಿಯೂ ಕೂಡಿ ಮೂರು ಸಲ ಪುಷ್ಟಿಕರವಾದ ಅನ್ನದಿಂದ ನಮ್ಮ ಹೊಟ್ಟೆಯನ್ನು ತೃಪ್ತ ಗೊಳಿಸಿರಿ. ॥ ೩ ॥

೪೦೨. ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ
ತ್ರೇಧೇವ ಶಿಕ್ಷತಂ ।
ತ್ರಿರ್ನಾಂದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ
ಅಕ್ಷರೇವ ಪಿನ್ವತಂ ॥ ೪ ॥

ಅಶ್ವಿದ್ವಯರೇ! ನಮ್ಮ ಮನೆಯಲ್ಲಿ ಮೂರು ಸಲ ಬನ್ನಿರಿ. ನಮಗೆ ಅನುಕೂಲವಾದ ವ್ಯಾಪಾರದಲ್ಲಿ ತೊಡಗಿರುವ ಮನುಷ್ಯನ ಹತ್ತರ ಮೂರು ಸಲ

ಬನ್ನಿರಿ. ಕಾಪಾಡಲು ಯೋಗ್ಯನಾದ ಮನುಷ್ಯನ ಹತ್ತಿರ ಮೂರು ಸಲ ಬನ್ನಿರಿ. ನಮಗೆ ಮೂರು ಪ್ರಕಾರದ ಶಿಕ್ಷಣವನ್ನು ಕರುಣಿಸಿರಿ. ನಮಗೆ ಮೂರು ಸಲ ಆನಂದಜನಕವಾದ ಫಲಪ್ರದಾನ ಮಾಡಿರಿ. ಇಂದ್ರನು ನೀರನ್ನು ಕೊಡುವಂತೆ ನಮಗೆ ಮೂರು ಸಲ ಅನ್ನವನ್ನು ದಯೆಪಾಲಿಸಿರಿ. ॥ ೪ ॥

೪೦೩. ತ್ರಿರ್ನೋ ರಯಿಂ ವಹತಮಶ್ವಿನಾ ಯುವಂ ತ್ರಿರ್ದೇವತಾತಾ
ತ್ರಿರುತಾವತಂ ಧಿಯಃ ।
ತ್ರಿಃ ಸೌಭಗತ್ವಂ ತ್ರಿರುತ ಶ್ರವಾಂಸಿ ನಸ್ ತ್ರಿಷ್ಠಂ ವಾಂ ಸೂರೇ
ದುಹಿತಾ ರುಹದ್ ರಥಂ ॥ ೫ ॥

ಅಶ್ವಿದ್ವಯರೇ! ನಮಗೆ ಮೂರು ಸಲ ಧನಪ್ರದಾನ ಮಾಡಿರಿ. ದೇವ ಯುಕ್ತವಾದ ಕರ್ಮಾನುಷ್ಠಾನದಲ್ಲಿ ಮೂರು ಸಲ ಬನ್ನಿರಿ. ನಮ್ಮ ಬುದ್ಧಿಯ ರಕ್ಷಣವನ್ನು ಮೂರು ಸಲ ಮಾಡಿರಿ. ನಮಗೆ ಮೂರು ಸಲ ಸೌಭಾಗ್ಯವನ್ನು ಸಂಪಾದಿಸಿಕೊಡಿರಿ. ನಮಗೆ ಮೂರು ಸಲ ಅನ್ನವನ್ನು ದಯೆಪಾಲಿಸಿರಿ. ನಿಮ್ಮ ಮೂರು ಚಕ್ರಗಳುಳ್ಳ ರಥದ ಮೇಲೆ ಸೂರ್ಯನ ಮಗಳು ಆಸೀನಳಾಗಿದ್ದಾಳೆ. ॥ ೫ ॥

೪೦೪. ತ್ರಿರ್ನೋ ಅಶ್ವಿನಾ ದಿವ್ಯಾನಿ ಭೇಷಜಾ ತ್ರಿಃ ಪಾರ್ಥಿವಾನಿ
ತ್ರಿರು ದತ್ತಮದ್ಭ್ಯಃ ।
ಓಮಾನಂ ಶಂಯೋರ್ಮಮಕಾಯ ಸೂನವೇ ತ್ರಿಧಾತು ಶರ್ಮ
ವಹತಂ ಶುಭಸ್ಪತೀ ॥ ೬ ॥

ಅಶ್ವಿದ್ವಯರೇ! ದಿವ್ಯಲೋಕದ ಔಷಧವನ್ನು ನಮಗೆ ಮೂರು ಸಲ ಅನುಗ್ರಹಿಸಿರಿ. ಪೃಥಿವಿಯ ಔಷಧವನ್ನು ನಮಗೆ ಮೂರು ಸಲ ಕೊಡಿರಿ. ಅಂತರಿಕ್ಷದಿಂದ ಮೂರು ಸಲ ಔಷಧ-ಪ್ರದಾನ ಮಾಡಿರಿ. ಬೃಹಸ್ಪತಿಯ ಮಗನಾದ ಶಂಯುವಿನಂತೆ ನಮ್ಮ ಸಂತಾನಕ್ಕೆ ಸುಖವನ್ನು ಕರುಣಿಸಿರಿ. ಶೋಭನೀಯವಾದ ಔಷಧಗಳ ರಕ್ಷಕರೇ! ನೀವು ವಾತ, ಪಿತ್ತ, ಶ್ಲೇಷ್ಮ ಇವೇ ಮೊದಲಾದ ಮೂರು ಧಾತು-ಸಂಬಂಧಿಯಾದ ಸುಖವನ್ನು ದಯೆಪಾಲಿಸಿರಿ. ॥ ೬ ॥

## [ವರ್ಗಃ ೫]

೪೦೫. ತ್ರಿರ್ನೋ ಅಶ್ವಿನಾ ಯಜತಾ ದಿವೇದಿವೇ ಪರಿ ತ್ರಿಧಾತು
ಪೃಥಿವೀಮಶಾಯತಂ ।
ತಿಸ್ರೋ ನಾಸತ್ಯಾ ರಥ್ಯಾ ಪರಾವತ ಆತ್ಮೇವ ವಾತಃ ಸ್ವಸರಾಣಿ
ಗಚ್ಛತಂ ॥ ೭ ॥

ಅಶ್ವಿದ್ವಯರೇ! ನೀವು ನಮಗೆ ಪೂಜನೀಯರಾಗಿರುವಿರಿ. ದಿನಾಲು ಮೂರು ಸಲ ಪೃಥಿವಿಯ ಮೇಲೆ ಬಂದು ಮೂರು ಕಕ್ಷೆಗಳುಳ್ಳ ಕುಶಗಳ ಮೇಲೆ ಶಯನಮಾಡಿರಿ. ನಾಸತ್ಯದ್ವಯರೇ! ಯಾವ ಪ್ರಕಾರದಲ್ಲಿ ಆತ್ಮರೂಪಾದ ಗಾಳಿಯು ಶರೀರಗಳಲ್ಲಿ ಬರುವದೋ, ಅದೇ ರೀತಿಯಲ್ಲಿ ನೀವು ತುಪ್ಪ, ಪಶು ಮತ್ತು ವೇದಿಕೆಗಳೆಂಬ ಮೂರು ಯಜ್ಞಸ್ಥಾನಗಳಲ್ಲಿ ಆಗಮಿಸಿರಿ. ॥ ೭ ॥

೪೦೬. ತ್ರಿರಶ್ವಿನಾ ಸಿಂಧುಭಿಃ ಸಪ್ತಮಾತೃಭಿಸ್ ತ್ರಯ ಆಹಾವಾಸ್ತ್ರೇಧಾ ಹವಿಷ್ಕೃತಂ ।
ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ ॥ ೮ ॥

ಅಶ್ವಿದ್ವಯರೇ! ಸಿಂಧು ಮೊದಲಾದ ನದಿಗಳ ಸಪ್ತ ಮಾತೃಜಲದಿಂದ ಮೂರು ಸೋಮಾಭಿಷೇಕಗಳು ಸಿದ್ಧವಾಗಿವೆ, ಮೂರು ಕಲಶ ಮತ್ತು ಹವ್ಯಗಳು ತಯಾರಾಗಿವೆ. ನೀವು ಮೂರೂ ಸಂಸಾರಗಳಿಂದ ಮೇಲಕ್ಕೆ ಹೋಗಿ ದಿವಾ-ರಾತ್ರಿ-ಸಂಯುಕ್ತವಾದ ಆಕಾಶದಲ್ಲಿರುವ ಸೂರ್ಯನ ರಕ್ಷಣೆಯನ್ನು ಮಾಡಿರುತ್ತೀರಿ. ॥ ೮ ॥

೪೦೭. ಕ್ವ೧ ತ್ರೀ ಚಕ್ರಾ ತ್ರಿವೃತೋ ರಥಸ್ಯ ಕ್ವ೧ ತ್ರಯೋ ವಂಧುರೋ ಯೇ ಸನೀಳಾಃ ।
ಕದಾ ಯೋಗೋ ವಾಜಿನೋ ರಾಸಭಸ್ಯ ಯೇನ ಯಜ್ಞಂ ನಾಸತ್ಯೋಪಯಾಥಃ ॥ ೯ ॥

ನಾಸತ್ಯರಾದ ಅಶ್ವಿದ್ವಯರೇ! ನಿಮ್ಮ ತ್ರಿಕೋಣಾಕಾರದ ರಥದ ಮೂರು ಚಕ್ರಗಳು ಎಲ್ಲಿವೆ? ಬಂಧನಾಧಾರಭೂತವಾದ ರಥದ ಉಪವೇಶನಸ್ಥಾನದ ಮೂರು ಕೊರಡುಗಳು ಎಲ್ಲಿವೆ? ಯಾವ ಕತ್ತೆಯ ಸಹಾಯದಿಂದ ನೀವು ನಮ್ಮ ಯಜ್ಞದಲ್ಲಿ ಬರುವಿರೋ, ಆ ಬಲಶಾಲಿಯಾದ ಗರ್ದಭವನ್ನು ಎಂದು ನಿಮ್ಮ ರಥಕ್ಕೆ ಹೂಡುತ್ತೀರಿ? ॥ ೯ ॥

೪೦೮. ಆ ನಾಸತ್ಯಾ ಗಚ್ಛತಂ ಹೂಯತೇ ಹವಿ—ರ್ಮಧ್ವಃ ಪಿಬತಂ ಮಧುಪೇಭಿರಾಸಭಿಃ ।
ಯುವೋರ್ಹಿ ಪೂರ್ವಂ ಸವಿತೋಷಸೋ ರಥ—ಮೃತಾಯ ಚಿತ್ರಂ ಘೃತವಂತಮಿಷ್ಯತಿ ॥ ೧೦ ॥

ನಾಸತ್ಯರಾದ ಅಶ್ವಿದ್ವಯರೇ! ಬನ್ನಿರಿ, ಹವ್ಯವನ್ನೀಯುತ್ತೇನೆ. ನಿಮ್ಮ ಮಧುಪಾಯಿಯಾದ ಮುಖದಿಂದ ಮಧುರವಾದ ಹವ್ಯವನ್ನು ಕುಡಿಯಿರಿ. ಉಷಃ

ಕಾಲಕ್ಕಿಂತ ಮುಂಚಿತವಾಗಿಯೇ ಸೂರ್ಯನು ನಿಮ್ಮ ವಿಚಿತ್ರವಾದ ಮತ್ತು ಘನ ವತ್ ಇರುವ ರಥವನ್ನು ಯಜ್ಞದಲ್ಲಿ ಬರುವದಕ್ಕಾಗಿ ಪ್ರೇರಿಸಿರುತ್ತಾನೆ. ॥ ೧೦ ॥

೩೮೯. ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ
ಮಧುಪೇಯಮಶ್ವಿನಾ ।
ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ
ಭವತಂ ಸಚಾಭುವಾ ॥ ೧೧ ॥

ನಾಸತ್ಯರಾದ ಅಶ್ವಿದ್ವಯರೇ! ಮೂವತ್ತಮೂರು ದೇವತೆಗಳೊಂದಿಗೆ ಮಧುಪಾನಕ್ಕಾಗಿ ಇಲ್ಲಿಗೆ ಆಗಮಿಸಿರಿ, ನಮ್ಮ ಆಯುಷ್ಯವನ್ನು ವರ್ಧಿಸಿರಿ, ಪಾಪವನ್ನು ಖಂಡಿಸಿರಿ, ವಿದ್ವೇಷಿಗಳನ್ನು ತಡೆಯಿರಿ, ಮತ್ತು ನಮ್ಮ ಸಂಗಡವೇ ವಾಸಮಾಡಿರಿ. ॥ ೧೧ ॥

೩೯೦. ಆ ನೋ ಅಶ್ವಿನಾ ತ್ರಿವೃತಾ ರಥೇನಾ—ಽರ್ವಾಂಚಂ ರಯಿಂ
ವಹತಂ ಸುವೀರಂ ।
ಶೃಣ್ವಂತಾ ವಾಮವಸೇ ಜೋಹವೀಮಿ ವೃಧೇ ಚ ನೋ
ಭವತಂ ವಾಜಸಾತೌ ॥ ೧೨ ॥

ಅಶ್ವಿನೀಕುಮಾರದ್ವಯರೇ! ತ್ರಿಕೋಣ ಅಥವಾ ತ್ರಿಲೋಕದಲ್ಲಿ ಚಲಿಸುವ ರಥದಲ್ಲಿ ನಮ್ಮ ಹತ್ತಿರ ಸೇವಕರು, ಪುತ್ರರು-ಇವರಿಂದ ಸಂಯುಕ್ತವಾದ ಧನವನ್ನು ತನ್ನಿರಿ. ನಮ್ಮ ರಕ್ಷಣೆಗಾಗಿ ನಾವು ನಿಮ್ಮನ್ನು ಆಹ್ವಾನಿಸುತ್ತೇವೆ. ನೀವು ಕೇಳಿರಿ; ನಮಗೆ ವೃದ್ಧಿಯನ್ನು ದಯೆಪಾಲಿಸಿರಿ ಮತ್ತು ಸಂಗ್ರಾಮದಲ್ಲಿ ಬಲಪ್ರದಾನ ಮಾಡಿರಿ. ॥ ೧೨ ॥

## ಸೂಕ್ತ: ೩೫

ಈ ಸೂಕ್ತದ ದೇವತೆ: ಸವಿತಾ; ಋಷಿ: ಹಿರಣ್ಯಸ್ತೂಪನು;
ಛಂದಸ್ಸು: ಜಗತೀ ಮತ್ತು ತ್ರಿಷ್ಟುಪ್.

## [ವರ್ಗ: ೬]

೩೯೧. ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ ಹ್ವಯಾಮಿ
ಮಿತ್ರಾವರುಣಾವಿಹಾವಸೇ ।
ಹ್ವಯಾಮಿ ರಾತ್ರೀಂ ಜಗತೋ ನಿವೇಶನೀಂ ಹ್ವಯಾಮಿ ದೇವಂ
ಸವಿತಾರಮೂತಯೇ ॥ ೧ ॥

ನನ್ನ ರಕ್ಷಣೆಗಾಗಿ ಮೊದಲು ಅಗ್ನಿಯ ಆಹ್ವಾನವನ್ನು ಮಾಡುತ್ತೇನೆ. ರಕ್ಷಣೆಗಾಗಿ ಮಿತ್ರ ಮತ್ತು ವರುಣರನ್ನು ಈ ಸ್ಥಳಕ್ಕೆ ಕರೆಯುತ್ತೇನೆ. ಸಂಸಾರಕ್ಕೆ ವಿಶ್ರಾಮಕಾರಣವಾದ ರಾತ್ರಿಯನ್ನು ನಾನು ಕರೆಯುತ್ತೇನೆ. ರಕ್ಷಣೆಗಾಗಿ ಸವಿತೃದೇವನನ್ನು ಆಹ್ವಾನಿಸುತ್ತೇನೆ. ॥ ೧ ॥

೪೧೨. ಆ ಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।
ಹಿರಣ್ಯಯೇನ ಸವಿತಾ ರಥೇನಾ—ಽಽ ದೇವೋ ಯಾತಿ ಭುವನಾನಿ
ಪಶ್ಯನ್ ॥ ೨ ॥

ಅಂಧಕಾರಪೂರ್ಣವಾದ ಅಂತರಿಕ್ಷದಿಂದ ತಿರುಗಿ-ತಿರುಗಿ ಭ್ರಮಣಮಾಡಿ ದೇವತೆ ಮತ್ತು ಮನುಷ್ಯರನ್ನು ಸಚೇತನಗೊಳಿಸಿ ಸವಿತೃದೇವನು ತನ್ನ ಸ್ವರ್ಣ ರಥದಿಂದ ಸಮಸ್ತ ಭುವನಗಳನ್ನು ನೋಡನೋಡುವಷ್ಟರಲ್ಲಿ ಭ್ರಮಣಮಾಡುತ್ತಾನೆ. ॥ ೨ ॥

೪೧೩. ಯಾತಿ ದೇವಃ ಪ್ರವತಾ ಯಾತ್ಯುದ್ವತಾ ಯಾತಿ ಶುಭ್ರಾಭ್ಯಾಂ
ಯಜತೋ ಹರಿಭ್ಯಾಂ ।
ಆ ದೇವೋ ಯಾತಿ ಸವಿತಾ ಪರಾವತೋಽಪ ವಿಶ್ವಾ ದುರಿತಾ
ಬಾಧಮಾನಃ ॥ ೩ ॥

ಸವಿತೃದೇವನು ಉದಯದಿಂದ ಮಧ್ಯಾಹ್ನದವರೆಗೆ ಊರ್ಧ್ವಗಾಮಿಯಾದ ಪಥದಿಂದ ಮತ್ತು ಮಧ್ಯಾಹ್ನದಿಂದ ಸಾಯಂಕಾಲದ ತನಕ ಅಧೋಗಾಮಿಯಾದ ಪಥದಿಂದ ಗಮನಮಾಡುತ್ತಾನೆ. ಆ ಪೂಜನೀಯನಾದ ಸೂರ್ಯದೇವನು ಬಿಳೀ ಕುದುರೆಗಳ ಮೇಲೆ ಕುಳಿತು ಪ್ರಯಾಣಮಾಡುತ್ತಾನೆ. ಅವನು ಸಮಸ್ತ ಪಾಪಗಳ ವಿನಾಶವನ್ನು ಮಾಡುತ್ತ-ಮಾಡುತ್ತ ದೂರದೇಶದಿಂದ ಬರುತ್ತಾನೆ. ॥ ೩ ॥

೪೧೪. ಅಭೀವೃತಂ ಕೃಶನೈರ್ವಿಶ್ವರೂಪಂ ಹಿರಣ್ಯಶಮ್ಯಂ ಯಜತೋ
ಬೃಹಂತಂ ।
ಆಸ್ಥಾದ್ ರಥಂ ಸವಿತಾ ಚಿತ್ರಭಾನುಃ ಕೃಷ್ಣಾ ರಜಾಂಸಿ
ತವಿಷೀಂ ದಧಾನಃ ॥ ೪ ॥

ಪೂಜನೀಯನಾದ ಮತ್ತು ವಿಚಿತ್ರ ಕಿರಣಗಳುಳ್ಳ ಸವಿತೃದೇವನು ಭುವನಗಳ ಅಂಧಕಾರದ ವಿನಾಶಕ್ಕಾಗಿ ತೇಜವನ್ನು ಧಾರಣಮಾಡಿ ಸಮೀಪದಲ್ಲಿರುವ ಸುವರ್ಣಚಿತ್ರಿತವಾದ ಮತ್ತು ಬಂಗಾರದ ಹಗ್ಗಗಳಿಂದ ಯುಕ್ತವಾದ ವಿಶಾಲ ರಥದ ಮೇಲೆ ಸವಾರನಾಗಿರುವನು. ॥ ೪ ॥

೪೧೫. ವಿ ಜನಾಂಛ್ಯಾವಾಃ ಶಿತಿಪಾದೋ ಅಖ್ಯನ್ ರಥಂ
ಹಿರಣ್ಯಪ್ರಉಗಂ ವಹಂತಃ ।
ಶಶ್ವದ್ ವಿಶಃ ಸವಿತುರ್ದೈವ್ಯಸ್ಯೋ—ಪಸ್ಥೇ ವಿಶ್ವಾ
ಭುವನಾನಿ ತಸ್ಥುಃ　　॥ ೫ ॥

ಬಿಳೀ ಕಾಲುಗಳುಳ್ಳ 'ಶ್ಯಾವ' ನಾಮದ ಕುದುರೆಗಳು ಬಂಗಾರದ ಮೂಕಿಯುಳ್ಳ ರಥವನ್ನು ತಂದು ಮನುಷ್ಯರಿಗೆ ಬೆಳಕನ್ನು ಕೊಡುತ್ತಿವೆ. ಸೂರ್ಯದೇವನ ಸಾನ್ನಿಧ್ಯದಲ್ಲಿ ಮನುಷ್ಯರು ಮತ್ತು ಸಂಸಾರವು ಉಪಸ್ಥಿತವಾಗಿವೆ.　　॥ ೫ ॥

೪೧೬. ತಿಸ್ರೋ ದ್ಯಾವಃ ಸವಿತುರ್ದ್ವಾ ಉಪಸ್ಥಾँ ಏಕಾ ಯಮಸ್ಯ
ಭುವನೇ ವಿರಾಷಾಟ್ ।
ಆಣಿಂ ನ ರಥ್ಯಮಮೃತಾಧಿ ತಸ್ಥು—ರಿಹ ಬ್ರವೀತು ಯ ಉ
ತಚ್ಚಿಕೇತತ್　　॥ ೬ ॥

ದ್ಯುಲೋಕವೇ ಮೊದಲಾದ ಮೂರು ಲೋಕಗಳಿವೆ. ಇವುಗಳಲ್ಲಿ ದ್ಯುಲೋಕ ಮತ್ತು ಭೂಲೋಕ— ಇವೆರಡು ಸೂರ್ಯನ ಹತ್ತರ ಇವೆ. ಮಧ್ಯದಲ್ಲಿರುವ ಅಂತರಿಕ್ಷವು ಯಮರಾಜನ ಮನೆಗೆ ಹೋಗುವ ಮಾರ್ಗವಾಗಿರುವದು. ಯಾವ ರೀತಿಯಲ್ಲಿ ರಥವು ಕೀಲದ ಮೇಲಿನ ಭಾಗವನ್ನು ಅವಲಂಬಿಸಿರುವದೋ, ಅದೇ ತರಹದಲ್ಲಿ ಅಮರವಾದ ಚಂದ್ರ ನಕ್ಷತ್ರಾದಿ ತೇಜೋರಾಶಿಗಳು ಸೂರ್ಯನನ್ನು ಅವಲಂಬಿಸಿರುವವು. ಯಾವ ಪುರುಷರು ಸೂರ್ಯನ ವಿಷಯವಾಗಿ ಬಲ್ಲವರಿರುವರೋ, ಅವರೇ ಈ ವಿಷಯದಲ್ಲಿ ಮಾತಾಡಲಿ.　　॥ ೬ ॥

## [ವರ್ಗಃ ೭]

೪೧೭. ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ ಗಭೀರವೇಪಾ ಅಸುರಃ ಸುನೀಥಃ ।
ಕ್ವೇದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ
ತತಾನ　　॥ ೭ ॥

ಗಂಭೀರ ಕಂಪನದಿಂದ ಸಂಯುಕ್ತವಾದ ಮತ್ತು ಪ್ರಾಣದಾಯಕವಾದ ಸುನಯನದಿಂದ ಸಂಯುಕ್ತವಾದ ಕಿರಣಗಳು ಅಂತರಿಕ್ಷ ಮೊದಲಾದ ಮೂರು ಲೋಕಗಳಲ್ಲಿ ವ್ಯಾಪ್ತವಾಗಿರುವವು. ಈ ಸಮಯದಲ್ಲಿ ಸೂರ್ಯನು ಎಲ್ಲಿರುವನು ಎಂಬುದನ್ನು ಯಾರು ಹೇಳಬಲ್ಲರು? ಯಾವ ದಿವ್ಯ ಲೋಕದಲ್ಲಿ ಸೂರ್ಯನ ರಶ್ಮಿಗಳು ವಿಸ್ತೃತವಾಗಿವೆ?　　॥ ೭ ॥

೪೧೮. ಅಷ್ಟೌ ವ್ಯಖ್ಯತ್ ಕಕುಭಃ ಪೃಥಿವ್ಯಾಸ್ ತ್ರೀ ಧನ್ವ ಯೋಜನಾ
ಸಪ್ತ ಸಿಂಧೂನ್ ।

ಹಿರಣ್ಯಾಕ್ಷಃ ಸವಿತಾ ದೇವ ಆಗಾದ್ ದಧದ್ರತ್ನಾ ದಾಶುಷೇ
ವಾರ್ಯಾಣಿ ॥ ೮ ॥

ಸೂರ್ಯನು ಪೃಥಿವಿಯ ಎಂಟು ದಿಕ್ಕುಗಳನ್ನು ಪ್ರಕಾಶಿಸಿರುವನು. ಪ್ರಾಣಿಗಳಿರುವ ಮೂರೂ ಸಂಸಾರಗಳನ್ನೂ, ಸಪ್ತ-ಸಿಂಧುಗಳನ್ನೂ ಪ್ರಕಾಶಿಸಿರುವನು. ಬಂಗಾರದ ಕಣ್ಣುಗಳಿರುವ ಸವಿತೃದೇವನು ಹವ್ಯದಾತಾರನಾದ ಯಜಮಾನನಿಗೆ ವರಣೀಯವಾದ ದ್ರವ್ಯದಾನವನ್ನು ಕೊಟ್ಟು ಇಲ್ಲಿಗೆ ಆಗಮಿಸಲಿ. ॥ ೮ ॥

೪೧೯. ಹಿರಣ್ಯಪಾಣಿಃ ಸವಿತಾ ವಿಚರ್ಷಣಿ—ರುಭೇ ದ್ಯಾವಾಪೃಥಿವೀ
ಅಂತರೀಯತೇ ।
ಅಪಾಮೀವಾಂ ಭಾಧತೇ ವೇತಿ ಸೂರ್ಯ—ಮಭಿ ಕೃಷ್ಣೇನ
ರಜಸಾ ದ್ಯಾಮೃಣೋತಿ ॥ ೯ ॥

ಸುವರ್ಣಪಾಣಿಯಾದ ಮತ್ತು ವಿವಿಧ ದರ್ಶನಗಳಿಂದ ಯುಕ್ತನಾದ ಸವಿತೃದೇವನು ಎರಡೂ ಲೋಕಗಳಲ್ಲಿ ಗಮನಮಾಡುತ್ತಾನೆ, ರೋಗಾದಿಗಳನ್ನು ದೂರಮಾಡುತ್ತಾನೆ, ಉದಯನಾಗುತ್ತಾನೆ ಮತ್ತು ತಮೋನಾಶಕವಾದ ತೇಜಸ್ಸಿನಿಂದ ಆಕಾಶವನ್ನು ವ್ಯಾಪಿಸಿಬಿಡುತ್ತಾನೆ. ॥ ೯ ॥

೪೨೦. ಹಿರಣ್ಯಹಸ್ತೋ ಅಸುರಃ ಸುನೀಥಃ ಸುಮೃಳೀಕಃ ಸ್ವವಾँ ಯಾತ್ವರ್ವಾಙ್।
ಅಪಸೇಧನ್ ರಕ್ಷಸೋ ಯಾತುಧಾನಾ—ನಸ್ಥಾದ್ ದೇವಃ
ಪ್ರತಿದೋಷಂ ಗೃಣಾನಃ ॥ ೧೦ ॥

ಸುವರ್ಣಹಸ್ತನಾದ, ಪ್ರಾಣದಾತನಾದ, ಸುನೇತಾರನಾದ, ಹರ್ಷವನ್ನು ಕೊಡುವಂಥವನಾದ ಮತ್ತು ಧನವನ್ನು ದಯೆಪಾಲಿಸುವ ಸವಿತೃದೇವನು ಅಭಿಮುಖನಾಗಿ ಬರಲಿ. ಈ ದೇವನು ರಾಕ್ಷಸ ಮತ್ತು ಯಾತುಧಾನ ಇವರೆಲ್ಲರ ನಿರಾಕರಣಮಾಡಿ ಪ್ರತಿ ರಾತ್ರಿಯೂ ಸ್ತುತಿಯನ್ನು ಪ್ರಾಪ್ತಗೊಳಿಸಿರುವನು. ॥ ೧೦ ॥

೪೨೧. ಯೇ ತೇ ಪಂಥಾಃ ಸವಿತಃ ಪೂರ್ವ್ಯಾಸೋಽರೇಣವಃ ಸುಕೃತಾ
ಅಂತರಿಕ್ಷೇ ।
ತೇಭಿರ್ನೋ ಅದ್ಯ ಪಥಿಭಿಃ ಸುಗೇಭೀ ರಕ್ಷಾ ಚ ನೋ ಅಧಿ
ಚ ಬ್ರೂಹಿ ದೇವ ॥ ೧೧ ॥

ಸವಿತೃದೇವನೇ! ನಿನ್ನ ಮಾರ್ಗವು ಪೂರ್ವನಿಶ್ಚಿತವೂ, ಧೂಳಿರಹಿತವೂ, ಅಂತರಿಕ್ಷದಲ್ಲಿ ಸುನಿರ್ಮಿತವೂ ಆಗಿರುವದು. ಅದೇ ಪ್ರಕಾರದ ಮಾರ್ಗಗಳಿಂದ ಬಂದು ಈ ಹೊತ್ತು ನಮ್ಮನ್ನು ಕಾಪಾಡಯ್ಯಾ. ದೇವನೇ! ನಮ್ಮ ಮಾತುಗಳನ್ನು ದೇವತೆಗಳ ಹತ್ತರ ಪ್ರಕಾಶಿತಗೊಳಿಸು. ॥ ೧೧ ॥

# ಎಂಟನೇ ಅನುವಾಕ

## ಸೂಕ್ತ: ೩೬

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಘೋರನ ಪುತ್ರನಾದ ಕಣ್ವನು; ಛಂದಸ್ಸು: ಬೃಹತೀ.

### [ವರ್ಗ: ೮]

೪೨೨. ಪ್ರ ವೋ ಯ॒ಹ್ವಂ ಪು॒ರೂ॒ಣಾಂ ವಿ॒ಶಾಂ ದೇ॑ವಯ॒ತೀನಾ॑ಂ ।

ಅ॒ಗ್ನಿಂ ಸೂ॒ಕ್ತೇಭಿ॒ರ್ವಚೋ॑ಭಿರೀಮಹೇ॒ ಯಂ ಸೀ॒ಮಿದ॒ನ್ಯ ಈಳ॑ತೇ ॥ ೧ ॥

ನೀವು ಬಹುಸಂಖ್ಯಾಕ ಪ್ರಜೆಗಳಾಗಿರುವಿರಿ; ನೀವು ದೇವತೆಗಳ ಕಾಮನೆಯನ್ನು ಮಾಡುತ್ತೀರಿ; ನಿಮಗಾಗಿ, ಸೂಕ್ತವಾಕ್ಯಗಳಿಂದ, ಮಹಾ ಅಗ್ನಿಯನ್ನು ನಾವು ಪ್ರಾರ್ಥಿಸುತ್ತೇವೆ. ಅನ್ಯ ಋಷಿಗಳಾದರೂ ಅದೇ ಅಗ್ನಿಯನ್ನು ಪ್ರಾರ್ಥಿಸುತ್ತಾರೆ. ॥ ೧ ॥

೪೨೩. ಜನಾ॑ಸೋ ಅ॒ಗ್ನಿಂ ದ॑ಧಿರೇ ಸಹೋ॒ವೃಧಂ॑ ಹ॒ವಿಷ್ಮಂ॑ತೋ ವಿಧೇಮ ತೇ ।

ಸ ತ್ವಂ ನೋ॑ ಅ॒ದ್ಯ ಸು॒ಮನಾ॑ ಇ॒ಹಾವಿ॒ತಾ ಭವಾ॒ ವಾಜೇ॑ಷು ಸಂತ್ಯ ॥ ೨ ॥

ಅನುಷ್ಠಾನವನ್ನು ಆಚರಿಸುವ ಜನರು ಬಲವರ್ಧನಕಾರಿಯಾದ ಅಗ್ನಿಯನ್ನು ಧಾರಣಮಾಡಿದ್ದರು. ಅಗ್ನಿದೇವನೇ! ನಾವು ಹವ್ಯವನ್ನು ತೆಗೆದುಕೊಂಡು ನಿನ್ನ ಪರಿಚರ್ಯೆಯನ್ನು ಮಾಡುತ್ತೇವೆ. ನೀನು ಅನ್ನದಾನದಲ್ಲಿ ತತ್ಪರನಾಗಿ, ಈ ಹೊತ್ತು ಈ ಅನುಷ್ಠಾನದಲ್ಲಿ ನಮ್ಮ ಮೇಲೆ ಪ್ರಸನ್ನನಾಗಿ, ನಮ್ಮ ರಕ್ಷಕನಾಗು. ॥ ೨ ॥

೪೨೪. ಪ್ರ ತ್ವಾ॑ ದೂ॒ತಂ ವೃ॑ಣೀಮಹೇ॒ ಹೋತಾ॑ರಂ ವಿ॒ಶ್ವವೇ॑ದಸಂ ।

ಮ॒ಹಸ್ತೇ॑ ಸ॒ತೋ ವಿ ಚ॑ರಂತ್ಯ॒ರ್ಚಯೋ॑ ದಿ॒ವಿ ಸ್ಪೃ॑ಶಂತಿ ಭಾ॒ನವ॑ಃ ॥ ೩ ॥

ಅಗ್ನಿಯೇ! ನೀನು ದೇವತೆಗಳ ಹೋತಾರನೂ, ಸರ್ವಜ್ಞನೂ ಆಗಿರುವೆ. ನಾವು ನಿನ್ನನ್ನು ವರಿಸುತ್ತೇವೆ. ನೀನು ದೊಡ್ಡವನೂ, ನಿತ್ಯನೂ ಆಗಿರುವೆ. ನಿನ್ನ ದೀಪ್ತಿಯು ವಿಸ್ತೃತವಾಗುತ್ತಿದೆ, ನಿನ್ನ ಕಿರಣಗಳು ಆಕಾಶವನ್ನು ಮುಟ್ಟುತ್ತಿವೆ. ॥ ೩ ॥

೪೨೫. ದೇ॒ವಾಸ॑ಸ್ತ್ವಾ॒ ವರು॑ಣೋ ಮಿ॒ತ್ರೋ ಅ॑ರ್ಯ॒ಮಾ ಸಂ ದೂ॒ತಂ

ಪ್ರ॒ತ್ನಮಿಂ॑ಧತೇ ।

ವಿಶ್ವಂ ಸೋ ಅಗ್ನೇ ಜಯತಿ ತ್ವಯಾ ಧನಂ ಯಸ್ತೇ ದದಾಶ
ಮರ್ತ್ಯಃ ॥ ೪ ॥

ಅಗ್ನಿಯೇ! ನೀನು ಪ್ರಾಚೀನನಾದ ದೂತನಾಗಿರುವೆ. ವರುಣ, ಮಿತ್ರ ಮತ್ತು ಅರ್ಯಮರು ನಿನ್ನನ್ನು ಚೆನ್ನಾಗಿ ದೀಪ್ತಿಮಂತನನ್ನಾಗಿ ಮಾಡುತ್ತಾರೆ. ಯಾವ ಮನುಷ್ಯನು ನಿನಗೆ ಹವಿರ್ದಾನವನ್ನು ಕೊಡುವನೋ, ಅಂಥವನು ನಿನ್ನ ಸಹಾಯದಿಂದ ಸಮಸ್ತ ಧನಗಳನ್ನು ಜಯಿಸುತ್ತಾನೆ. ॥ ೪ ॥

೪೨೬. ಮಂದ್ರೋ ಹೋತಾ ಗೃಹಪತಿ—ರಗ್ನೇ ದೂತೋ ವಿಶಾಮಸಿ ।
ತ್ವೇ ವಿಶ್ವಾ ಸಂಗತಾನಿ ವ್ರತಾ ಧ್ರುವಾ ಯಾನಿ ದೇವಾ ಅಕೃಣ್ವತ ॥ ೫ ॥

ಅಗ್ನಿಯೇ! ನೀನು ಹರ್ಷದಾಯಕನಾಗಿರುವೆ. ನೀನು ದೇವತೆಗಳನ್ನು ಆಹ್ವಾನಿಸುತ್ತೀ. ನೀನು ಪ್ರಜೆಗಳ ಗೃಹಪತಿಯಾಗಿರುವೆ. ನೀನು ದೇವತೆಗಳ ದೂತನಾಗಿರುವೆ. ಸೂರ್ಯ, ಪರ್ಜನ್ಯ, ಪೃಥಿವೀ ಮೊದಲಾದ ದೇವತೆಗಳು ಯಾವ ಎಲ್ಲ ಅಮೋಘವಾದ ವ್ರತಗಳನ್ನು ಆಚರಿಸುವರೋ, ಅವೆಲ್ಲವೂ ನಿನ್ನಲ್ಲಿಯೇ ಸಮ್ಮಿಲಿತವಾಗುತ್ತವೆ. ॥ ೫ ॥

## [ವರ್ಗಃ ೯]

೪೨೭. ತ್ವೇ ಇದಗ್ನೇ ಸುಭಗೇ ಯವಿಷ್ಠ್ಯ ವಿಶ್ವಮಾ ಹೂಯತೇ ಹವಿಃ ।
ಸ ತ್ವಂ ನೋ ಅದ್ಯ ಸುಮನಾ ಉತಾಪರಂ ಯಕ್ಷಿ
ದೇವಾಂತ್ಸುವೀರ್ಯಾ ॥ ೬ ॥

ಯುವಕನಾದ ಅಗ್ನಿಯೇ! ನೀನು ಸೌಭಾಗ್ಯಶಾಲಿಯಾಗಿರುವೆ. ನಿನ್ನನ್ನುಲಕ್ಷಿಸಿ ಎಲ್ಲ ಹವ್ಯಗಳು ಅರ್ಪಿಸಲ್ಪಡುತ್ತವೆ. ನೀನು ನಮಗಾಗಿ ಪ್ರಸನ್ನಮನಸ್ಸಿನವನಾಗಿ ಈ ಹೊತ್ತು, ನಾಳೆ ಮತ್ತು ಯಾವಾಗಲೂ ಶೋಭನೀಯರಾದ ಮತ್ತು ವೀರ್ಯಶಾಲಿಗಳಾದ ದೇವತೆಗಳನ್ನು ಅರ್ಚಿಸಯ್ಯಾ. ॥ ೬ ॥

೪೨೮. ತಂ ಘೇಮಿತ್ಥಾ ನಮಸ್ವಿನ ಉಪ ಸ್ವರಾಜಮಾಸತೇ ।
ಹೋತ್ರಾಭಿರಗ್ನಿಂ ಮನುಷಃ ಸಮಿಂಧತೇ ತಿತಿರ್ವಾಂಸೋ ಅತಿ ಸ್ರಿಧಃ ॥ ೭ ॥

ಯಜಮಾನರು ನಮಸ್ಕಾರಪೂರ್ವಕವಾಗಿ ಆ ಸ್ವಯಂ ದೀಪ್ತಿಮಂತನಾಗಿರುವ ಅಗ್ನಿಯ ಉಪಾಸನೆಯನ್ನು ಈ ಪ್ರಕಾರವಾಗಿ ಮಾಡುತ್ತಾರೆ. ಶತ್ರುವನ್ನು ಚನ್ನಾಗಿ ಸೋಲಿಸುವ ಇಚ್ಛೆಯುಳ್ಳ ಮನುಷ್ಯರು ಹೋತಾರರ ಕೈಯಿಂದ ಅಗ್ನಿಯನ್ನು ಪ್ರಜ್ವಲಿಸುತ್ತಾರೆ. ॥ ೭ ॥

೪೨೯. ಘ್ನಂತೋ ವೃತ್ರಮತರನ್ ರೋದಸೀ ಅಪ ಉರುಕ್ಷಯಾಯ ಚಕ್ರಿರೇ ।
ಭುವತ್ ಕಣ್ವೇ ವೃಷಾ ದ್ಯುಮ್ನ್ಯಾಹುತಃ ಕ್ರಂದದಶ್ವೋ ಗವಿಷ್ಟಿಷು ॥ ೮ ॥

ದೇವತೆಗಳು ಪ್ರಹಾರಮಾಡಿ ವೃತ್ರಾಸುರನನ್ನು ತುಂಡರಿಸಿದ್ದರು. ಎರಡೂ ಜಗತ್ತುಗಳನ್ನು ಮತ್ತು ಅಂತರಿಕ್ಷವನ್ನು, ವಾಸಮಾಡುವದಕ್ಕಾಗಿ, ವಿಶಾಲವಾಗಿ ರಚಿಸಿದ್ದರು. ಅಗ್ನಿಯು ಬಲಶಾಲಿಯಾಗಿರುವನು. ಅವನು ಗೋಪ್ರಾಪ್ತಿಗಾಗಿ ಸಂಗ್ರಾಮದಲ್ಲಿ ಕೆನೆಯುವ ಕುದುರೆಗಳಂತೆ ಸರ್ವತೋಭಾವದಿಂದ ಆಹೂತನಾಗಿ ಕಣ್ವಋಷಿಯು ಸಲುವಾಗಿ ಯಥೇಚ್ಛವಾಗಿ ದ್ರವ್ಯವರ್ಷಣವನ್ನು ಮಾಡಲಿ. ॥ ೮ ॥

೪೩೦. ಸಂ ಸೀದಸ್ವ ಮಹಾँ ಅಸಿ ಶೋಚಸ್ವ ದೇವವೀತಮಃ ।

ವಿ ಧೂಮಮಗ್ನೇ ಅರುಷಂ ಮಿಯೇಧ್ಯ ಸೃಜ ಪ್ರಶಸ್ತ ದರ್ಶತಂ ॥ ೯ ॥

ಪ್ರಶಸ್ತನಾದ ಅಗ್ನಿದೇವನೇ! ಕುಳಿತುಕೊಳ್ಳಯ್ಯಾ. ನೀನು ದೊಡ್ಡವನಾಗಿರುವೆ; ಆದ್ದರಿಂದ ದೇವತೆಗಳ ಇಚ್ಛೆಯನ್ನು ಪೂರ್ಣಮಾಡು. ನೀನು ದೀಪ್ತಿ-ಪೂರ್ಣನಾಗು. ಮೇಧಾವಿಯೂ, ಉತ್ಕೃಷ್ಟನೂ ಆಗಿರುವ ಅಗ್ನಿಯೇ! ಗಮನಶೀಲವಾದ ಮತ್ತು ಚಂದವಾದ ಹೊಗೆಯನ್ನು ಹುಟ್ಟಿಸು. ॥ ೯ ॥

೪೩೧. ಯಂ ತ್ವಾ ದೇವಾಸೋ ಮನವೇ ದಧುರಿಹ ಯಜಿಷ್ಠಂ ಹವ್ಯವಾಹನ ।

ಯಂ ಕಣ್ವೋ ಮೇಧ್ಯಾತಿಥಿರ್ಧನಸ್ಪೃತಂ ಯಂ ವೃಷಾ

ಯಮುಪಸ್ತುತಃ ॥ ೧೦ ॥

ಹವ್ಯವಾಹಿಯಾದ ಅಗ್ನಿಯೇ! ನೀನು ಅತೀವ ಪೂಜಾಪಾತ್ರನಾಗಿರುವೆ. ಸಮಸ್ತ ದೇವತೆಗಳು, ಮನುವಿನ ಸಲುವಾಗಿ, ನಿನ್ನನ್ನು ಈ ಯಜ್ಞದಲ್ಲಿ ಧಾರಣ ಮಾಡಿದ್ದರು. ನೀನು ಧನದ ಬಲದಿಂದ ಪ್ರೀತಿಯನ್ನು ಸಂಪಾದಿಸಯ್ಯಾ. ಕಣ್ವನು ಪೂಜಾಪಾತ್ರನಾದ ಅತಿಥಿಗಳೊಡನೆ ನಿನ್ನನ್ನು ಪೂಜಿಸಿದ್ದನು. ಬೇರೆ ಸ್ತುತಿಕಾರಕರೂ ನಿನ್ನನ್ನು ಪೂಜಿಸಿದ್ದರು. ॥ ೧೦ ॥

## [ವರ್ಗಃ ೧೦]

೪೩೨. ಯಮಗ್ನಿಂ ಮೇಧ್ಯಾತಿಥಿಃ ಕಣ್ವ ಈಧ ಋತಾದಧಿ ।

ತಸ್ಯ ಪ್ರೇಷೋ ದೀದಿಯುಸ್ತಮಿಮಾ ಋಚಸ್ ತಮಗ್ನಿಂ

ವರ್ಧಯಾಮಸಿ ॥ ೧೧ ॥

ಪೂಜಾರ್ಹನೂ, ಅತಿಥಿಪ್ರಿಯನೂ ಆದ ಕಣ್ವನು ಅಗ್ನಿಯನ್ನು ಸೂರ್ಯನಿಗಿಂತಲೂ ಹೆಚ್ಚಾಗಿ ದೀಪ್ತಿಮಂತನಾಗಿ ಮಾಡಿದ್ದನು. ಅದೇ ಅಗ್ನಿಯ ವಿಶಿಷ್ಟ ಗತಿಯುಳ್ಳ ಕಿರಣಗಳೂ ದೀಪ್ತಿಮಂತವಾಗಿವೆ. ಈ ಋಚೆಗಳು ಆ ಅಗ್ನಿಯನ್ನು ವೃದ್ಧಿಗೊಳಿಸುತ್ತಿವೆ; ನಾವಾದರೂ ಅಗ್ನಿಯನ್ನು ವೃದ್ಧಿಗೊಳಿಸುತ್ತೇವೆ. ॥ ೧೧ ॥

೪೩೩. ರಾಯಸ್ಪೂರ್ಧಿ ಸ್ವಧಾವೋಽಸ್ತಿ ಹಿತೇ—ऽಗ್ನೇ ದೇವೇಷ್ವಾಪ್ಯಂ ।

ತ್ವಂ ವಾಜಸ್ಯ ಶ್ರುತ್ಯಸ್ಯ ರಾಜಸಿ ಸ ನೋ ಮೃಳ ಮಹಾँ ಅಸಿ ॥ ೧೨ ॥

ಅನ್ನಯುಕ್ತನಾದ ಅಗ್ನಿಯೇ! ನಮ್ಮ ಧನವನ್ನು ಪೂರ್ತಿಗೊಳಿಸು. ನಿನ್ನಿಂದಲೇ ದೇವತೆಗಳ ಗೆಳೆತನವು ದೊರಕುವದು. ನೀನು ಪ್ರಸಿದ್ಧವಾದ ಅನ್ನದ ಸ್ವಾಮಿಯಾಗಿರುವೆ. ನೀನು ದೊಡ್ಡವನಾಗಿರುವೆ. ನಮ್ಮನ್ನು ಸುಖಿಸಯ್ಯಾ. ॥ ೧೨ ॥

೪೩೪. ಊರ್ಧ್ವ ಊ ಷು ಣ ಊತಯೇ ತಿಷ್ಠಾ ದೇವೋ ನ ಸವಿತಾ ।
ಊರ್ಧ್ವೋ ವಾಜಸ್ಯ ಸನಿತಾ ಯದಂಜಿಭಿರ್ವಾಘದ್ಭಿರ್ವಿಹ್ವ-
ಯಾಮಹೇ ॥ ೧೩ ॥

ಅಗ್ನಿಯೇ! ನಮ್ಮ ರಕ್ಷಣೆಗಾಗಿ ಸೂರ್ಯನಂತೆ ಉನ್ನತನಾಗಯ್ಯಾ. ಉನ್ನತನಾಗಿ ಅನ್ನದಾನ ಮಾಡು; ಯಾಕೆಂದರೆ ವಿಶೇಷವಾದ ಲಕ್ಷಣಗಳುಳ್ಳ ಯಜ್ಞಸಂಪಾದಕರಿಂದ ನಾವು ನಿನ್ನನ್ನು ಆಹ್ವಾನಿಸುತ್ತೇವೆ. ॥ ೧೩ ॥

೪೩೫. ಊರ್ಧ್ವೋ ನಃ ಪಾಹ್ಯಂಹಸೋ ನಿ ಕೇತುನಾ ವಿಶ್ವಂ ಸಮತ್ರಿಣಂ ದಹ ।
ಕೃಧೀ ನ ಊರ್ಧ್ವಾಂಚರಥಾಯ ಜೀವಸೇ ವಿದಾ ದೇವೇಷು
ನೋ ದುವಃ ॥ ೧೪ ॥

ಅಗ್ನಿಯೇ! ಉನ್ನತನಾಗಿ ನಮಗೆ ಜ್ಞಾನವನ್ನು ಕೊಟ್ಟು, ನಮ್ಮನ್ನು ಪಾಪದಿಂದ ಕಾಪಾಡಯ್ಯಾ. ಎಲ್ಲ ರಾಕ್ಷಸರನ್ನುಸುಟ್ಟುಹಾಕು. ನಮ್ಮನ್ನು ಶ್ರೇಷ್ಠರನ್ನಾಗಿ ಮಾಡು, ಅದರಿಂದ ಸಮಸ್ತ ಸಂಸಾರದಲ್ಲಿ ವಿಚರಣ ಮಾಡಲು ನಾವು ಸಮರ್ಥರಾಗುತ್ತೇವೆ. ಇದೇ ಪ್ರಕಾರ ನಾವು ಬಹುಕಾಲ ಜೀವಿತರಾಗಿರುವಂತೆ ನಾವು ಅರ್ಪಿಸಿದ ಹವ್ಯರೂಪೀ ಧನವನ್ನು ದೇವತೆಗಳ ಮನೆಗಳಲ್ಲಿ ಮುಟ್ಟಿಸಯ್ಯಾ ॥ ೧೪ ॥

೪೩೬. ಪಾಹಿ ನೋ ಅಗ್ನೇ ರಕ್ಷಸಃ ಪಾಹಿ ಧೂರ್ತೇರರಾವ್ಣಃ ।
ಪಾಹಿ ರಿಷತ ಉತ ವಾ ಜಿಘಾಂಸತೋ ಬೃಹದ್ಭಾನೋ ಯವಿಷ್ಠ್ಯ ॥ ೧೫ ॥

ವಿಶಾಲವಾದ ಕಿರಣಗಳುಳ್ಳ ಮತ್ತು ತರುಣನಾಗಿರುವ ಅಗ್ನಿಯೇ! ನಮ್ಮನ್ನು ರಾಕ್ಷಸರಿಂದ ಕಾಪಾಡಯ್ಯಾ. ಧನವನ್ನು ದಾನಮಾಡದ ಧೂರ್ತರಿಂದಲೂ ನಮ್ಮನ್ನು ರಕ್ಷಿಸು. ಹಿಂಸ್ರಪಶುಗಳಿಂದಲೂ ನಮ್ಮನ್ನು ಕಾಪಾಡು. ನಮ್ಮನ್ನು ಕೊಲ್ಲಲಿಚ್ಛಿಸುವ ಶತ್ರುಗಳಿಂದಲೂ ನಮ್ಮ ರಕ್ಷಣೆ ಮಾಡು. ॥ ೧೫ ॥

## [ವರ್ಗಃ ೧೧]

೪೩೭. ಘನೇವ ವಿಷ್ವಗ್ವಿ ಜಹ್ಯರಾವ್ಣಸ್ ತಪುರ್ಜಂಭ ಯೋ ಅಸ್ಮಧ್ರುಕ್ ।
ಯೋ ಮರ್ತ್ಯಃ ಶಿಶೀತೇ ಅತ್ಯಕ್ತುಭಿ—ರ್ಮಾ ನಃ ಸ ರಿಪುರೀಶತ ॥ ೧೬ ॥

ಕಾವೇರಿದ ಕಿರಣಗಳುಳ್ಳ ಅಗ್ನಿದೇವನೇ! ಯಾವ ರೀತಿಯಲ್ಲಿ ನಾವು ಬಿರುಸಾದ ಬಡಿಗೆಯಿಂದ ಮಡಕೆ ಮುಂತಾದವುಗಳನ್ನು ಪುಡಿಪುಡಿಯಾಗಿ

ಮಾಡುತ್ತೇವೋ, ಅದೇ ರೀತಿಯಲ್ಲಿ ಧನದಾನಮಾಡದವರನ್ನು ಯಾವಾಗಲೂ ಸಂಹರಿಸು. ನಮ್ಮ ದ್ರೋಹಿಗಳನ್ನೂ, ಹರಿತವಾದ ಆಯುಧಗಳನ್ನು ಧರಿಸಿದ ಶತ್ರುಗಳನ್ನೂ ನಾಶಮಾಡು. ॥ ೧೬ ॥

೪೩೮. ಅಗ್ನಿರ್ವವ್ನೇ ಸುವೀರ್ಯ—ಮಗ್ನಿಃ ಕಣ್ವಾಯ ಸೌಭಗಂ ।
ಅಗ್ನಿಃ ಪ್ರಾವನ್ ಮಿತ್ರೋತ ಮೇಧ್ಯಾತಿಥಿ—ಮಗ್ನಿಃ ಸಾತಾ
ಉಪಸ್ತುತಂ ॥ ೧೭ ॥

ಸುಶೋಭನವಾದ ವೀರ್ಯದ ಸಲುವಾಗಿ ಅಗ್ನಿಯನ್ನು ಪೂಜಿಸುತ್ತಾರೆ. ಅಗ್ನಿಯು ಕಣ್ವನಿಗೆ ಸೌಭಾಗ್ಯದಾನವನ್ನು ಮಾಡಿದ್ದನು. ಅಗ್ನಿಯು ನಮ್ಮ ಗೆಳೆಯರನ್ನು ಕಾಪಾಡಿದ್ದನು. ಅಗ್ನಿಯು ಪೂಜೆಗೆ ಪಾತ್ರನಾದ ಮತ್ತು ಅತಿಥಿಗಳಿಂದ ಸಂಯುಕ್ತನಾದ ಋಷಿಯನ್ನು ಕಾಪಾಡಿದ್ದನು. ಇದರಂತೆಯೇ ಧನಾದಿ ದಾನಕ್ಕಾಗಿ ಯಾರ್ಯಾರು ಅಗ್ನಿಯನ್ನು ಸ್ತುತಿಸಿದ್ದರೋ, ಅವರವರನ್ನು ಅಗ್ನಿಯು ಕಾಪಾಡಿದ್ದನು. ॥ ೧೭ ॥

೪೩೯. ಅಗ್ನಿನಾ ತುರ್ವಶಂ ಯದುಂ ಪರಾವತ ಉಗ್ರಾದೇವಂ ಹವಾಮಹೇ ।
ಅಗ್ನಿರ್ನಯನ್ನವವಾಸ್ತ್ವಂ ಬೃಹದ್ರಥಂ ತುರ್ವೀತಿಂ ದಸ್ಯವೇ ಸಹಃ ॥ ೧೮ ॥

ಕಳ್ಳರನ್ನು ನಿಗ್ರಹಿಸುವ ಅಗ್ನಿಯೊಂದಿಗೆ ತುರ್ವಶ, ಯದು ಮತ್ತು ಉಗ್ರಾದೇವರನ್ನು ದೂರ ದೇಶದಿಂದ ನಾವು ಕರೆಯುತ್ತೇವೆ. ಆ ಅಗ್ನಿಯು ನವವಾಸ್ತ್ವ, ಬೃಹದ್ರಥ ಮತ್ತು ತುರ್ವೀತಿಗಳನ್ನು ಈ ಸ್ಥಳಕ್ಕೆ ಕರೆಯಲಿ. ॥ ೧೮ ॥

೪೪೦. ನಿ ತ್ವಾಮಗ್ನೇ ಮನುರ್ದಧೇ ಜ್ಯೋತಿರ್ಜನಾಯ ಶಶ್ವತೇ ।
ದೀದೇಥ ಕಣ್ವ ಋತಜಾತ ಉಕ್ಷಿತೋ ಯಂ ನಮಸ್ಯಂತಿ ಕೃಷ್ಟಯಃ ॥ ೧೯ ॥

ಅಗ್ನಿಯೇ! ನೀನು ಜ್ಯೋತಿಃಸ್ವರೂಪನಾಗಿರುವೆ. ಮನುವು ವಿವಿಧ ಜಾತಿಗಳ ಮನುಷ್ಯರ ಸಲುವಾಗಿ ನಿನ್ನನ್ನು ಸಂಸ್ಥಾಪಿಸಿದ್ದನು. ಅಗ್ನಿದೇವನೇ! ನೀನು ಯಜ್ಞದ ಸಲುವಾಗಿ ಉತ್ಪನ್ನನಾಗಿ ಮತ್ತು ಹವ್ಯಗಳಿಂದ ತೃಪ್ತನಾಗಿ ಕಣ್ವನಿಗೆ ಪ್ರಕಾಶಮಾನನಾಗಿರುವೆ. ಮನುಷ್ಯರು ನಿನ್ನನ್ನು ನಮಸ್ಕರಿಸುತ್ತಾರೆ. ॥ ೧೯ ॥

೪೪೧. ತ್ವೇಷಾಸೋ ಅಗ್ನೇರಮವಂತೋ ಅರ್ಚಯೋ ಭೀಮಾಸೋ
ನ ಪ್ರತೀತಯೇ ।
ರಕ್ಷಸ್ವಿನಃ ಸದಮಿದ್ ಯಾತುಮಾವತೋ ವಿಶ್ವಂ
ಸಮತ್ರಿಣಂ ದಹ ॥ ೨೦ ॥

ಅಗ್ನಿಯ ಶಿಖೆಯು ಪ್ರದೀಪ್ತವೂ, ಬಲಶಾಲಿಯೂ, ಭಯಂಕರವೂ ಆಗಿರುವದು. ಅದು ಯಾವಾಗಲೂ ನಷ್ಟವಾಗುವದಿಲ್ಲ. ಅಗ್ನಿದೇವನೇ! ರಾಕ್ಷಸ, ಯಾತುಧಾನ ಮತ್ತು ವಿಶ್ವಭಕ್ಷಕ ಮೊದಲಾದ ಶತ್ರುಗಳನ್ನು ದಹಿಸಿಬಿಡಯ್ಯಾ. ॥ ೨೦ ॥

# ಸೂಕ್ತ: ೩೭

ಈ ಸೂಕ್ತದ ದೇವತೆ: ಮರುದ್ಗಣವು; ಋಷಿ: ಕಣ್ವನು; ಛಂದಸ್ಸು: ಗಾಯತ್ರೀ.

## [ವರ್ಗ: ೧೨]

೪೪೨. ಕ್ರೀಳಂ ವಃ ಶರ್ಧೋ ಮಾರುತ—ಮನರ್ವಾಣಂ ರಥೇಶುಭಂ ।
ಕಣ್ವಾ ಅಭಿ ಪ್ರ ಗಾಯತ ॥ ೧ ॥

ಕಣ್ವಗೋತ್ರೋತ್ಪನ್ನರಾದ ಋಷಿಗಣವೇ! ಕ್ರೀಡಾಸಕ್ತರಾದ ಮತ್ತು ಶತ್ರುಶೂನ್ಯರಾದ ಮರುತರನ್ನುದ್ದೇಶಿಸಿ ಹಾಡಿರಿ. ಅವರು ರಥದ ಮೇಲೆ ಸುಶೋಭಿತರಾಗಿರುವರು. ॥ ೧ ॥

೪೪೩. ಯೇ ಪೃಷತೀಭಿರ್ಋಷ್ಟಿಭಿಃ ಸಾಕಂ ವಾಶೀಭಿರಂಜಿಭಿಃ ।
ಅಜಾಯಂತ ಸ್ವಭಾನವಃ ॥ ೨ ॥

ಅವರು ತಮ್ಮ ದೀಪ್ತಿಯಿಂದ ಸಂಪನ್ನರಾಗಿ ಬಿಂದುಚಿಹ್ನೆಯುಳ್ಳ ಮೃಗ ರೂಪಿನ ವಾಹನದೊಂದಿಗೆ ಮತ್ತು ಯುದ್ಧಗರ್ಜನೆ, ಆಯುಧ ಮತ್ತು ನಾನಾ ರೂಪಿನ ಅಲಂಕಾರ— ಇವುಗಳ ಸಹಿತವಾಗಿ ಜನ್ಮಗ್ರಹಣವನ್ನು ಮಾಡಿರುತ್ತಾರೆ. ॥ ೨ ॥

೪೪೪. ಇಹೇವ ಶೃಣ್ವ ಏಷಾಂ ಕಶಾ ಹಸ್ತೇಷು ಯದ್ ವದಾನ್ ।
ನಿ ಯಾಮಂಚಿತ್ರಮೃಂಜತೇ ॥ ೩ ॥

ಅವರ ಕೈಯಲ್ಲಿರುವ ಚಾವಟಿಯು ಮಾಡುವ ಸಪ್ಪಳವನ್ನು ನಾವು ಕೇಳುತ್ತಿದ್ದೇವೆ. ಆ ಚಾವಟಿಯು ಯುದ್ಧದಲ್ಲಿ ಬಲವನ್ನು ಬೆಳಿಸುತ್ತದೆ. ॥ ೩ ॥

೪೪೫. ಪ್ರ ವಃ ಶರ್ಧಾಯ ಘೃಷ್ವಯೇ ತ್ವೇಷದ್ಯುಮ್ನಾಯ ಶುಷ್ಮಿಣೇ ।
ದೇವತ್ತಂ ಬ್ರಹ್ಮ ಗಾಯತ ॥ ೪ ॥

ನಿಮ್ಮ ಬಲದ ಸಮರ್ಥನೆಯನ್ನು ಮಾಡುವಂಥವರೂ, ಶತ್ರುದಮನಕಾರಿಗಳೂ, ಕಾಂತಿಮಯವಾದ ಕೀರ್ತಿಯಿಂದ ಪೂರ್ಣರೂ, ಬಲಶಾಲಿಗಳೂ ಆಗಿರುವ ಮಾರುತರನ್ನು ಹವಿಸ್ಸಿನ ಉದ್ದೇಶ್ಯವಾಗಿ ಸ್ತುತಿಸಿರಿ. ॥ ೪ ॥

೪೪೬. ಪ್ರ ಶಂಸಾ ಗೋಷ್ವಘ್ನ್ಯಂ ಕ್ರೀಳಂ ಯಚ್ಛರ್ಧೋ ಮಾರುತಂ ।
ಜಂಭೇ ರಸಸ್ಯ ವಾವೃಧೇ ॥ ೫ ॥

ಯಾವ ಮರುದ್ಗಣವು ಪೃಶ್ನಿರೂಪದಂತಿರುವ ಅಂದರೆ ಹಾಲಿನ ಪಾತ್ರೆಯಂತಿರುವ ದನಗಳ ನಡುವೆ ಸ್ಥಿತವಾಗಿರುವದೋ, ಅಂಥ ಮರುದ್ಗಣದ

ಅವಿನಾಶಿಯಾದ, ಕ್ರೀಡಾಪರಾಯಣವಾದ ಮತ್ತು ಸಹನಶೀಲವಾದ ತೇಜಸ್ಸಿನ ಪ್ರಶಂಸೆಯನ್ನು ಮಾಡಿರಿ. ಹಾಲಿನ ಆಸ್ವಾದನದಲ್ಲಿ ಅದೇ ತೇಜಸ್ಸು ಪರಿವರ್ಧಿತವಾಗಿರುವದು. ॥ ೫ ॥

## [ವರ್ಗಃ ೧೩]

೪೪೭. ಕೋ ವೋ ವರ್ಷಿಷ್ಠ ಆ ನರೋ ದಿವಶ್ಚ ಗ್ಮಶ್ಚ ಧೂತಯಃ ।
ಯತ್ ಸೀಮಂತಂ ನ ಧೂನುಥ ॥ ೬ ॥

ದ್ಯುಲೋಕ ಮತ್ತು ಭೂಲೋಕಗಳಲ್ಲಿ ಕಂಪನಮಾಡುವ ನೇತಾರರ ಸ್ಥಳದಲ್ಲಿರುವ ಮಾರುತರೇ! ನಿಮ್ಮಲ್ಲಿ ಯಾವಾತನು ದೊಡ್ಡವನಾಗಿರುವನು? ಮರದ ತುದಿಯಂತೆ ನೀವು ನಾಲ್ಕೂ ದಿಕ್ಕುಗಳನ್ನು ಸುತ್ತಮುತ್ತಲೂ ಅಲುಗಾಡಿಸಿರಿ. ॥ ೬ ॥

೪೪೮. ನಿ ವೋ ಯಾಮಾಯ ಮಾನುಷೋ ದಧ್ರ ಉಗ್ರಾಯ ಮನ್ಯವೇ ।
ಜಿಹೀತ ಪರ್ವತೋ ಗಿರಿಃ ॥ ೭ ॥

ಮರುದ್ಗಣವೇ! ನಿಮ್ಮ ಕಠೋರವಾದ ಮತ್ತು ಭಯಂಕರವಾದ ರಭಸದ ಭೀತಿಯಿಂದ ಮಾನವರು ತಮ್ಮ ಮನೆಗಳಲ್ಲಿ ಗಟ್ಟಿಯಾದ ಕಂಬಗಳನ್ನು ನಿಲ್ಲಿಸಿರುವರು; ಯಾಕೆಂದರೆ ನಿಮ್ಮ ಜೋರಿನಿಂದ ಅನೇಕ ಶೃಂಗಯುಕ್ತವಾಗಿರುವ ಪರ್ವತಗಳೂ ಅಲುಗಾಡುತ್ತಿವೆ. ॥ ೭ ॥

೪೪೯. ಯೇಷಾಮಜ್ಮೇಷು ಪೃಥಿವೀ ಜುಜುರ್ವಾ ಇವ ವಿಶ್ಪತಿಃ ।
ಭಿಯಾ ಯಾಮೇಷು ರೇಜತೇ ॥ ೮ ॥

ಮಾರುತರ ರಭಸಕ್ಕೆ ಎಲ್ಲ ವಸ್ತುಗಳು ದೂರದೂರವಾಗಿ ಎಸೆಯಲ್ಪಡುತ್ತವೆ. ಮುದುಕನಾಗಿ ಬಲಹೀನನಾದ ಅರಸನಂತೆ, ಪೃಥಿವಿಯೂ ಅಲುಗಾಡತೊಡಗುತ್ತದೆ. ॥ ೮ ॥

೪೫೦. ಸ್ಥಿರಂ ಹಿ ಜಾನಮೇಷಾಂ ವಯೋ ಮಾತುರ್ನಿರೇತವೇ ।
ಯತ್ ಸೀಮನು ದ್ವಿತಾ ಶವಃ ॥ ೯ ॥

ಮಾರುತರು ಹುಟ್ಟುವ ಸ್ಥಳವಾದ ಆಕಾಶವು ಅವಿಕಂಪವಾಗಿರುತ್ತದೆ. ಅವರ ಮಾತೃರೂಪಿನಲ್ಲಿರುವ ಆಕಾಶದಿಂದ ಹಕ್ಕಿಗಳೂ ಹೊರಗೆ ಬರಲು ಸಮರ್ಥವಾಗಿವೆ; ಯಾಕೆಂದರೆ ಅವರ ಶಕ್ತಿಯು ಎರಡೂ ಲೋಕಗಳಲ್ಲಿ ಹಬ್ಬಿ ಸರ್ವತ್ರವೂ ವರ್ತಮಾನವಾಗಿರುವದು. ॥ ೯ ॥

೪೫೧. ಉದು ತ್ಯೇ ಸೂನವೋ ಗಿರಃ ಕಾಷ್ಠಾ ಅಜ್ಮೇಷ್ವತ್ನತ ।
ವಾಶ್ರಾ ಅಭಿಜ್ಞು ಯಾತವೇ ॥ ೧೦ ॥

ಮಾರುತರು ಶಬ್ದಗಳನ್ನು ಜನಯಿಸುತ್ತಾರೆ. ಅವರು ಚಲಿಸುವಾಗ ನೀರಿನ ವಿಸ್ತಾರವನ್ನು ಬೆಳೆಸುತ್ತಾರೆ ಮತ್ತು ದನಗಳನ್ನು "ಅಂಬಾ" ಎಂಬ ಶಬ್ದ ದೊಂದಿಗೆ ಮೊಣಕಾಲು ತುಂಬ ನೀರಿನಲ್ಲಿ ಪ್ರೇರೇಪಿಸುತ್ತಾರೆ. ॥ ೧೦ ॥

## [ವರ್ಗಃ ೧೪]

೪೫೨. ತ್ಯಂ ಚಿದ್ ಘಾ ದೀರ್ಘಂ ಪೃಥುಂ ಮಿಹೋ ನಪಾತಮಮೃಧ್ರಂ ।
ಪ್ರ ಚ್ಯಾವಯಂತಿ ಯಾಮಭಿಃ ॥ ೧೧ ॥

ಯಾವ ಮೋಡಗಳು ಪ್ರಸಿದ್ಧವೂ, ದೀರ್ಘವೂ ಆಗಿರುವವೋ, ಯಾವವು ಜಲವರ್ಷಣವನ್ನು ಮಾಡುವದಿಲ್ಲವೋ ಮತ್ತು ಯಾವವು ಎಲ್ಲರಿಂದಲೂ ಅವಧ್ಯ ವಾಗಿರುವವೋ, ಅವನ್ನೂ ಕೂಡ ಮಾರುತರು ತಮ್ಮ ವೇಗದಿಂದ ಕಂಪಿತ ಗೊಳಿಸುತ್ತಾರೆ. ॥ ೧೧ ॥

೪೫೩. ಮರುತೋ ಯದ್ಧ ವೋ ಬಲಂ ಜನಾँ ಅಚುಚ್ಯವೀತನ ।
ಗಿರೀँರಚುಚ್ಯವೀತನ ॥ ೧೨ ॥

ಮರುತರೇ! ನೀವು ಬಲಶಾಲಿಗಳಾಗಿರುವಿರಿ; ಆದ್ದರಿಂದಲೇ ಮಂದಿ ಗಳನ್ನು ಅವರವರ ಕೆಲಸಗಳಲ್ಲಿ ತೊಡಗಿಸುತ್ತೀರಿ. ಮೇಘಗಳನ್ನೂ ಸಹ ಪ್ರೇರೇಪಿಸುತ್ತೀರಿ. ॥ ೧೨ ॥

೪೫೪. ಯದ್ಧ ಯಾಂತಿ ಮರುತಃ ಸಂ ಹ ಬ್ರುವತೇಽಧ್ವನ್ನಾ ।
ಶೃಣೋತಿ ಕಶ್ಚಿದೇಷಾಂ ॥ ೧೩ ॥

ಯಾವ ಕಾಲದಲ್ಲಿ ಮರುದ್ಗಣವು ಚಲಿಸುವದೋ, ಆಗ್ಗೆ ಮಾರ್ಗದಲ್ಲಿ ನಾಲ್ಕೂ ಬದಿಗೆ ಧ್ವನಿಯು ಹುಟ್ಟುವದು. ಅವರ ಆ ಧ್ವನಿಯನ್ನು ಎಲ್ಲರೂ ಕೇಳ ಬಲ್ಲರು. ॥ ೧೩ ॥

೪೫೫. ಪ್ರ ಯಾತ ಶೀಭಮಾಶುಭಿಃ ಸಂತಿ ಕಣ್ವೇಷು ವೋ ದುವಃ ।
ತತ್ರೋ ಷು ಮಾದಯಾಧ್ವೈ ॥ ೧೪ ॥

ವೇಗವುಳ್ಳ ವಾಹನದಲ್ಲಿ ಕುಳಿತು ಶೀಘ್ರವಾಗಿ ಬನ್ನಿರಿ. ಮೇಧಾವಿಗಳಾದ ತಪಸ್ವಿಗಳು ನಿಮ್ಮ ಪರಿಚರ್ಯೆಯ ಸಮಾರೋಹವನ್ನು ಮಾಡಿರುತ್ತಾರೆ. ಅವರ ಮೇಲೆ ಪ್ರಸನ್ನರಾಗಿರಿ. ॥ ೧೪ ॥

೪೫೬. ಅಸ್ತಿ ಹಿ ಷ್ಮಾ ಮದಾಯ ವಃ ಸ್ಮಸಿ ಷ್ಮಾ ವಯಮೇಷಾಂ ।
ವಿಶ್ವಂ ಚಿದಾಯುರ್ಜೀವಸೇ ॥ ೧೫ ॥

ನಿಮ್ಮ ತೃಪ್ತಿಗಾಗಿಯೇ ಈ ಹವ್ಯವಿದೆ. ನಮ್ಮೆಲ್ಲ ಬಾಳ್ವೆಯನ್ನು ಸಂಪೂರ್ಣ ವಾಗಿ ಜೀವಿಸುವದಕ್ಕಾಗಿಯೇ ನಾವು ನಿಮ್ಮ ಸೇವಕರಾಗಿರುತ್ತೇವೆ. ॥ ೧೫ ॥

## ಸೂಕ್ತ: ೩೮

ಈ ಸೂಕ್ತದ ದೇವತೆ: ಮರುದ್ಗಣವು; ಋಷಿ: ಕಣ್ವನು; ಛಂದಸ್ಸು: ಗಾಯತ್ರೀ.

### [ವರ್ಗ: ೧೫]

೪೫೭. ಕದ್ಧ ನೂನಂ ಕಧಪ್ರಿಯಃ ಪಿತಾ ಪುತ್ರಂ ನ ಹಸ್ತಯೋಃ ।
ದಧಿಧ್ವೇ ವೃಕ್ತಬರ್ಹಿಷಃ ॥ ೧ ॥

ಮರುದ್ಗಣವೇ! ನೀವು ಪ್ರಾರ್ಥನಾಪ್ರಿಯರಾಗಿರುವಿರಿ. ನಿಮ್ಮ ಸಲುವಾಗಿಯೇ ಕುಶಗಳು ತುಂಡರಿಸಲ್ಪಟ್ಟಿವೆ. ಯಾವ ರೀತಿಯಲ್ಲಿ ತಂದೆಯು ಮಗನನ್ನು ಕೈಯಲ್ಲಿ ಹಿಡಿಯುವನೋ, ಅದೇ ರೀತಿಯಲ್ಲಿ ನಮ್ಮನ್ನಾದರೂ ನೀವು ಎತ್ತಿ ಹಿಡಿಯುವಿರಾ? ॥ ೧ ॥

೪೫೮. ಕ್ವ ನೂನಂ ಕದ್ ವೋ ಅರ್ಥಂ ಗಂತಾ ದಿವೋ ನ ಪೃಥಿವ್ಯಾಃ ।
ಕ್ವ ವೋ ಗಾವೋ ನ ರಣ್ಯಂತಿ ॥ ೨ ॥

ಈ ಸಮಯದಲ್ಲಿ ನೀವೆಲ್ಲಿರುವಿರಿ? ಎಂದು ಬರುವಿರಿ? ಆಕಾಶದಿಂದ ಆಗಮಿಸುವಿರೊ? ಪೃಥ್ವಿಯ ಮೇಲಿಂದ ತೊಲಗಬೇಡಿರಿ. ಯಜಮಾನರು, ದನಗಳಂತೆ, ನಿಮ್ಮನ್ನೆಲ್ಲಿಗೆ ಆಹ್ವಾನಿಸುತ್ತಾರೆ? ॥ ೨ ॥

೪೫೯. ಕ್ವ ವಃ ಸುಮ್ನಾ ನವ್ಯಾಂಸಿ ಮರುತಃ ಕ್ವ ಸುವಿತಾ ।
ಕ್ವೋ೩ ವಿಶ್ವಾನಿ ಸೌಭಗಾ ॥ ೩ ॥

ನಿಮ್ಮ ಹೊಸದಾದ ಧನವು ಎಲ್ಲಿದೆ? ನಿಮ್ಮ ಸುಶೋಭನವಾದ ದ್ರವ್ಯವು ಎಲ್ಲಿದೆ? ನಿಮ್ಮ ಸಮಸ್ತ ಸೌಭಾಗ್ಯವು ಎಲ್ಲಿದೆ? ॥ ೩ ॥

೪೬೦. ಯದ್ ಯೂಯಂ ಪೃಶ್ನಿಮಾತರೋ ಮರ್ತಾಸಃ ಸ್ಯಾತನ ।
ಸ್ತೋತಾ ವೋ ಅಮೃತಃ ಸ್ಯಾತ್ ॥ ೪ ॥

'ಪ್ರಶ್ನಿ'ಯೆಂಬ ಹೆಸರಿನ ಧೇನುಪುತ್ರರೇ! ನೀವು ಮಾನವರಾಗಿದ್ದರೂ ಕೂಡ ನಿಮ್ಮನ್ನು ಸ್ತುತಿಸುವಂಥವನು ಅಮರನಾಗಲಿ. ॥ ೪ ॥

೪೬೧. ಮಾ ವೋ ಮೃಗೋ ನ ಯವಸೇ ಜರಿತಾ ಭೂದಜೋಷ್ಯಃ ।
ಪಥಾ ಯಮಸ್ಯ ಗಾದುಪ ॥ ೫ ॥

ಯಾವ ಪ್ರಕಾರದಲ್ಲಿ ತೃಣಗಳ ನಡುವೆ ಮೃಗವು ಸೇವಾರಹಿತವಾಗದೆಯೇ ಹುಲ್ಲನ್ನು ತಿನ್ನುವದೋ, ಅದರಂತೆಯೇ ನಿಮ್ಮ ಸ್ತೋತಾರರಾದರೂ ಸೇವಾಶೂನ್ಯರಾಗದಿರಲಿ. ಅದರಿಂದ ಅವರು ಯಮನ ಹಾದಿಗೆ ಹೋಗಲಾರರು. ॥ ೫ ॥

## [ವರ್ಗಃ ೧೬]

೪೬೨. ಮೋ ಷು ಣಃ ಪರಾಪರಾ ನಿರ್ಋತಿರ್ದುರ್ಹಣಾ ವಧೀತ್ ।
ಪದೀಷ್ಟ ತೃಷ್ಣಯಾ ಸಹ ॥ ೬ ॥

ನಿರ್ಋತಿ ಅಂದರೆ ಪಾಪದೇವಿಯು ಅತ್ಯಂತ ಬಲಶಾಲಿನಿಯಾಗಿರುವಳು; ಆಕೆಯು ಎಂದಿಗೂ ನಾಶಹೊಂದುವದಿಲ್ಲ. ಆ ನಿರ್ಋತಿಯು ನಮ್ಮನ್ನು ವಧಿಸದಿರಲಿ ಮತ್ತು ನಮ್ಮ ತೃಷ್ಣೆಯು ಸಂಗಡವೇ ವಿಲುಪ್ತವಾಗಿ ಹೋಗಲಿ. ॥ ೬ ॥

೪೬೩. ಸತ್ಯಂ ತ್ವೇಷಾ ಅಮವಂತೋ ಧನ್ವಂಚಿದಾ ರುದ್ರಿಯಾಸಃ ।
ಮಿಹಂ ಕೃಣ್ವಂತ್ಯವಾತಾಂ ॥ ೭ ॥

ದೀಪ್ತಿಮಂತರೂ, ಬಲಶಾಲಿಗಳೂ ಆಗಿರುವ ರುದ್ರಪುತ್ರರಾದ ಮರುದ್ದೇವತೆಗಳು ನಿಜವಾಗಿ ಮರುಭೂಮಿಯಲ್ಲಿಯೂ ಕೂಡ ವಾಯುರಹಿತವಾದ ಮಳೆಯನ್ನು ಸುರಿಸುತ್ತಾರೆ. ॥ ೭ ॥

೪೬೪. ವಾಶ್ರೇವ ವಿದ್ಯುನ್ಮಿಮಾತಿ ವತ್ಸಂ ನ ಮಾತಾ ಸಿಷಕ್ತಿ ।
ಯದೇಷಾಂ ವೃಷ್ಟಿರಸರ್ಜಿ ॥ ೮ ॥

ಸದ್ಯಪ್ರಸೂತವಾದ ಆಕಳಿನ ಕೆಚ್ಚಲಿನಂತೆ ವಿದ್ಯುತ್ತು ಗುಡುಗುತ್ತಿದೆ. ಯಾವ ರೀತಿಯಲ್ಲಿ ಆಕಳು ತನ್ನ ಕರುವಿನ ಆರೈಕೆಯನ್ನು ಮಾಡುವದೋ, ಅದೇ ತರಹದಲ್ಲಿ ವಿದ್ಯುತ್ತಾದರೂ ಮರುದ್ಗಣದ ಸೇವೆಯನ್ನು ಮಾಡುತ್ತದೆ. ಪರಿಣಾಮರೂಪವಾಗಿ ಮರುದ್ಗಣವು ಮಳೆಯನ್ನು ಸುರಿಸುತ್ತದೆ. ॥ ೮ ॥

೪೬೫. ದಿವಾ ಚಿತ್ ತಮಃ ಕೃಣ್ವಂತಿ ಪರ್ಜನ್ಯೇನೋದವಾಹೇನ ।
ಯತ್ ಪೃಥಿವೀಂ ವ್ಯುಂದಂತಿ ॥ ೯ ॥

ಮರುದ್ಗಣವು ಜಲಧಾರಿಯಾದ ಮೇಘಗಳ ಸಹಾಯದಿಂದ ನೆಲವನ್ನು ಆರ್ದ್ರಗೊಳಿಸುವದಕ್ಕೆ ಪೂರ್ವದಲ್ಲಿ, ಹಗಲಿನಲ್ಲಿಯೂ ಕೂಡ ಕತ್ತಲೆಯನ್ನು ಮಾಡುತ್ತದೆ. ॥ ೯ ॥

೪೬೬. ಅಧ ಸ್ವನಾನ್ಮರುತಾಂ ವಿಶ್ವಮಾ ಸದ್ಮ ಪಾರ್ಥಿವಂ ।
ಅರೇಜಂತ ಪ್ರ ಮಾನುಷಾಃ ॥ ೧೦ ॥

ಮರುದ್ಗಣದ ಗರ್ಜನವನ್ನು ಕೇಳಿ ಎಲ್ಲ ಪೃಥಿವಿಯ ಮೇಲಿನ ಮನೆ ಮುಂತಾದವುಗಳು ನಾಲ್ಕೂ ಕಡೆಗೆ ಕಂಪಿಸತೊಡಗುತ್ತವೆ. ಮನುಷ್ಯರೂ ಕೂಡ ನಡುಗುತ್ತಾರೆ. ॥ ೧೦ ॥

## [ವರ್ಗ: ೧೭]

೪೬೭. ಮರುತೋ ವೀಳುಪಾಣಿಭಿಶ್ ಚಿತ್ರಾ ರೋಧಸ್ವತೀರನು ।
ಯಾತೇಮಖಿದ್ರಯಾಮಭಿಃ ॥ ೧೧ ॥

ಮರುತರೇ! ದೃಢವಾದ ಹಸ್ತಗಳಿಂದ ಯುಕ್ತರಾಗಿ ವಿಲಕ್ಷಣವಾದ ದಂಡೆಯುಳ್ಳ ನದಿಯಂತೆ ಅನಿರ್ಬಂಧವಾದ ಗತಿಯಿಂದ ಮುಂದೆ ಸಾಗಿರಿ. ॥ ೧೧ ॥

೪೬೮. ಸ್ಥಿರಾ ವಃ ಸಂತು ನೇಮಯೋ ರಥಾ ಅಶ್ವಾಸ ಏಷಾಂ ।
ಸುಸಂಸ್ಕೃತಾ ಅಭೀಶವಃ ॥ ೧೨ ॥

ಮರುದ್ಗಣವೇ! ನಿಮ್ಮ ರಥದ ಗಾಲಿಗಳ ಹಳಿಯು ಗಟ್ಟಿಯಾಗಿರಲಿ. ರಥವೂ, ಕುದುರೆಗಳೂ ಗಟ್ಟಿಯಾಗಿರಲಿ. ಕುದುರೆಗಳ ಕಡಿವಾಣವನ್ನು ಹಿಡಿಯುವಲ್ಲಿ ನಿಮ್ಮ ಬೆರಳುಗಳು ಎಚ್ಚರಿಕೆಯಿಂದಿರಲಿ. ॥ ೧೨ ॥

೪೬೯. ಅಚ್ಛಾ ವದಾ ತನಾ ಗಿರಾ ಜರಾಯೈ ಬ್ರಹ್ಮಣಸ್ಪತಿಂ ।
ಅಗ್ನಿಂ ಮಿತ್ರಂ ನ ದರ್ಶತಂ ॥ ೧೩ ॥

ಋತ್ವಿಜರ ಗಣವೇ! ಬ್ರಹ್ಮಣಸ್ಪತಿ ಅಂದರೆ ಮರುದ್ಗಣ, ಅಗ್ನಿ ಮತ್ತು ಸುಂದರನಾದ ಮಿತ್ರ — ಇವರ ಪ್ರಾರ್ಥನೆಯ ಸಲುವಾಗಿ ದೇವತೆಗಳ ಸ್ವರೂಪ-ಪ್ರಕಾಶಕವಾದ ವಾಕ್ಯಗಳಿಂದ ನಮ್ಮ ಮುಂದೆ ಬಂದು ಅವರ ಸ್ತುತಿಯನ್ನು ಮಾಡಿರಿ. ॥ ೧೩ ॥

೪೭೦. ಮಿಮೀಹಿ ಶ್ಲೋಕಮಾಸ್ಯೇ ಪರ್ಜನ್ಯ ಇವ ತತನಃ ।
ಗಾಯ ಗಾಯತ್ರಮುಕ್ಥ್ಯಂ ॥ ೧೪ ॥

ಋತ್ವಿಜರ ಸಮೂಹವೇ! ನಿಮ್ಮ ಮುಖದಿಂದ ಸ್ತೋತ್ರಗಳನ್ನು ರಚಿಸಿರಿ. ಮೇಘದಂತೆ ಆ ಸ್ತೋತ್ರಗಳನ್ನು ವಿಸ್ತೃತಗೊಳಿಸಿರಿ. ಶಾಸ್ತ್ರಯೋಗ್ಯವಾದ ಮತ್ತು ಗಾಯತ್ರೀ ಛಂದಸ್ಸಿನಲ್ಲಿ ರಚಿಸಿದ ಸೂಕ್ತದ ಪಾಠ ಮಾಡಿರಿ. ॥ ೧೪ ॥

೪೭೧. ವಂದಸ್ವ ಮಾರುತಂ ಗಣಂ ತ್ವೇಷಂ ಪನಸ್ಯುಮರ್ಕಿಣಂ ।
ಅಸ್ಮೇ ವೃದ್ಧಾ ಅಸನ್ನಿಹ ॥ ೧೫ ॥

ಋತ್ವಿಜರೇ! ನಮ್ಮ ಕಾರ್ಯದಲ್ಲಿ ಪ್ರವೃತ್ತರಾಗುವಂತೆ ದೀಪ್ತರಾದ, ಸ್ತುತಿಗೆ ಪಾತ್ರರಾದ ಮತ್ತು ಅರ್ಚನೆಯಿಂದ ಸಂಯುಕ್ತರಾದ ಮರುತರನ್ನು ನಮಸ್ಕರಿಸಿರಿ. ॥ ೧೫ ॥

# ಸೂಕ್ತ: ೩೯

ಈ ಸೂಕ್ತದ ದೇವತೆ: ಮರುದ್ಗಣವು; ಋಷಿ: ಕಣ್ವನು; ಛಂದಸ್ಸು: ಬೃಹತೀ.

## [ವರ್ಗ: ೧೮]

೪೭೨. ಪ್ರ ಯದಿತ್ಥಾ ಪರಾವತಃ ಶೋಚಿರ್ನ ಮಾನಮಸ್ಯಥ ।
ಕಸ್ಯ ಕ್ರತ್ವಾ ಮರುತಃ ಕಸ್ಯ ವರ್ಪಸಾ ಕಂ ಯಾಥ ಕಂ ಹ
ಧೂತಯಃ ॥ ೧ ॥

ಕಂಪಿಸುವ ಮರುದ್ಗಣವೇ! ಯಾವ ಕಾಲಕ್ಕೆ ದೂರದಿಂದ ಪ್ರಕಾಶದಂತೆ ನೀವು ನಿಮ್ಮ ತೇಜಸ್ಸನ್ನು ಈ ಸ್ಥಳದಲ್ಲಿ ವಿಕೀರ್ಣಗೊಳಿಸುವಿರೋ, ಆ ಕಾಲದಲ್ಲಿ ನೀವು ಯಾರ ಯಜ್ಞದಿಂದ, ಯಾರ ಸ್ತೋತ್ರದಿಂದ, ಆಕರ್ಷಿತರಾಗುತ್ತೀರಿ? ಯಾವಲ್ಲಿ ಮತ್ತು ಯಾವ ಯಜಮಾನನ ಬಳಿಗೆ ಸಾರುವಿರಿ? ॥ ೧ ॥

೪೭೩. ಸ್ಥಿರಾ ವಃ ಸಂತ್ವಾಯುಧಾ ಪರಾಣುದೇ ವೀಳೂ ಉತ ಪ್ರತಿಷ್ಕಭೇ ।
ಯುಷ್ಮಾಕಮಸ್ತು ತವಿಷೀ ಪನೀಯಸೀ ಮಾ ಮರ್ತ್ಯಸ್ಯ ಮಾಯಿನಃ ॥ ೨ ॥

ಮರುದ್ಗಣವೇ! ಶತ್ರುವಿನಾಶಕ್ಕಾಗಿ ನಿಮ್ಮ ಆಯುಧಗಳು ಸ್ಥಿರವಾಗಿರಲಿ. ಸಂಗಡವೇ ಶತ್ರುಗಳನ್ನು ನಿಗ್ರಹಿಸುವಂತೆ ಗಟ್ಟಿಯಾಗಿರಲಿ. ನಿಮ್ಮ ಬಲವು ಪ್ರಾರ್ಥನೆಗೆ ಯೋಗ್ಯವಾಗಲಿ. ದುರಾಚಾರಿಗಳಾದ ಮನುಷ್ಯರ ಬಲವನ್ನು ನಾವು ಸ್ತುತಿಸದಿರಲಿ. ॥ ೨ ॥

೪೭೪. ಪರಾ ಹ ಯತ್ ಸ್ಥಿರಂ ಹಥ ನರೋ ವರ್ತಯಥಾ ಗುರು ।
ವಿ ಯಾಥನ ವನಿನಃ ಪೃಥಿವ್ಯಾ ವ್ಯಾಶಾಃ ಪರ್ವತಾನಾಂ ॥ ೩ ॥

ಮುಖಂಡರ ಸ್ಥಳದಲ್ಲಿರುವ ಮರುತರೇ! ಸ್ಥಿರವಸ್ತುಗಳನ್ನು ಮುರಿಯುವಾಗ್ಗೆ ಮತ್ತು ಭಾರವುಳ್ಳ ವಸ್ತುಗಳನ್ನು ನಡೆಯಿಸುವಾಗ್ಗೆ, ನೀವು ಪೃಥಿವಿಯ ಮೇಲಿನ ವನವೃಕ್ಷಗಳ ನಡುವೆ ಮತ್ತು ಪರ್ವತದ ಬದಿಯುಗುಂಟ ಹೋಗುತ್ತೀರಿ. ॥ ೩ ॥

೪೭೫. ನಹಿ ವಃ ಶತ್ರುರ್ವಿವಿದೇ ಅಧಿ ದ್ಯವಿ ನ ಭೂಮ್ಯಾಂ ರಿಶಾದಸಃ ।
ಯುಷ್ಮಾಕಮಸ್ತು ತವಿಷೀ ತನಾ ಯುಜಾ ರುದ್ರಾಸೋ ನೂ
ಚಿದಾಧೃಷೇ ॥ ೪ ॥

ಶತ್ರುವಿನಾಶಿಯಾದ ಮರುದ್ಗಣವೇ! ದ್ಯುಲೋಕದಲ್ಲಾಗಲಿ, ಪೃಥಿವೀ ಲೋಕದಲ್ಲಾಗಲಿ ನಿಮಗೆ ಶತ್ರುಗಳೇ ಇಲ್ಲ. ರುದ್ರಪುತ್ರರಾದ ಮರುದ್ಗಣವೇ!

ನೀವು ಒತ್ತಟ್ಟಿಗೆ ಕೂಡಿರುವಿರಿ. ಶತ್ರುಗಳನ್ನು ನಿಗ್ರಹಿಸುವದಕ್ಕಾಗಿ ನಿಮ್ಮ ಬಲವು ಶೀಘ್ರವಾಗಿ ಇನ್ನೂ ವಿಸ್ತೃತವಾಗಲಿ. ॥ ೪ ॥

೪೭೬. ಪ್ರ ವೇಪಯಂತಿ ಪರ್ವತಾನ್ ವಿ ವಿಂಚಂತಿ ವನಸ್ಪತೀನ್ ।
ಪ್ರೋ ಆರತ ಮರುತೋ ದುರ್ಮದಾ ಇವ ದೇವಾಸಃ
ಸರ್ವಯಾ ವಿಶಾ ॥ ೫ ॥

ಮಾರುತರು ಗುಡ್ಡಗಳನ್ನು ವಿಶೇಷರೂಪದಿಂದ ನಡುಗಿಸುತ್ತಾರೆ. ವನಸ್ಪತಿಗಳನ್ನು ಬೇರೆ ಬೇರೆ ಮಾಡಿ ಬಿಡುತ್ತಾರೆ. ದೇವತೆಗಳಾಗಿರುವ ಮರುದ್ಗಣವೇ! ಪ್ರಜಾಗಣದೊಂದಿಗೆ ಕೂಡಿ ನೀವು ಯಥೇಚ್ಛವಾಗಿ ಉನ್ಮತ್ತರಂತೆ ಎಲ್ಲ ಸ್ಥಳಗಳಿಗೆ ಹೋಗುತ್ತೀರಿ. ॥ ೫ ॥

## [ವರ್ಗಃ ೧೯]

೪೭೭. ಉಪೋ ರಥೇಷು ಪೃಷತೀರಯುಗ್ಧ್ವಂ ಪ್ರಷ್ಟಿರ್ವಹತಿ ರೋಹಿತಃ ।
ಆ ವೋ ಯಾಮಾಯ ಪೃಥಿವೀ ಚಿದಶ್ರೋ—ದಬೀಭಯಂತ
ಮಾನುಷಾಃ ॥ ೬ ॥

ನೀವು ಬಿಂದುಚಿಹ್ನಿತವಾದ ಅಥವಾ ವಿಧ-ವಿಧದ ಬಣ್ಣಗಳಿಂದ ಕೂಡಿದ ಹೆಣ್ಣು ಜಿಂಕೆಗಳನ್ನು ರಥಕ್ಕೆ ಹೂಡುತ್ತೀರಿ. ಲೋಹಿತ-ಮೃಗವು ವಾಹನತ್ರಯದ ಮಧ್ಯವರ್ತಿಯಾಗಿ ರಥವನ್ನು ಒಯ್ಯುತ್ತಿದೆ. ಪೃಥಿವಿಯು ನಿಮ್ಮ ಬರುವಿಕೆಯನ್ನು ಆಲಿಸುತ್ತಿದೆ. ಮನುಷ್ಯರು ಭಯಭೀತರಾಗಿರುವರು. ॥ ೬ ॥

೪೭೮. ಆ ವೋ ಮಕ್ಷೂ ತನಾಯ ಕಂ ರುದ್ರಾ ಅವೋ ವೃಣೀಮಹೇ ।
ಗಂತಾ ನೂನಂ ನೋಽವಸಾ ಯಥಾ ಪುರೇ—ತ್ಥಾ ಕಣ್ವಾಯ
ಬಿಭ್ಯುಷೇ ॥ ೭ ॥

ರುದ್ರಪುತ್ರರಾದ ಮರುತರೇ! ನಮ್ಮ ಮಕ್ಕಳಿಗಾಗಿ ನಿಮ್ಮ ರಕ್ಷಣಶಕ್ತಿಯ ಪ್ರಾರ್ಥನೆಯನ್ನು ನಾವು ಶೀಘ್ರವಾಗಿ ಮಾಡುತ್ತೇವೆ. ಒಮ್ಮೆ ನಮ್ಮ ರಕ್ಷಣೆಯ ಸಲುವಾಗಿ ನಿಮ್ಮ ಯಾವ ರೂಪವು ಬಂದಿತ್ತೋ, ಅದೇ ರೂಪವು ಭೀರುಗಳಾದ ಆದರೆ ಮೇಧಾವಿಗಳಾಗಿರುವ ಯಜಮಾನನ ಬಳಿಗೆ ಶೀಘ್ರ ಬರಲಿ. ॥ ೭ ॥

೪೭೯. ಯುಷ್ಮೇಷಿತೋ ಮರುತೋ ಮರ್ತ್ಯೇಷಿತ ಆಯೋ ನೋ
ಅಭ್ವ ಈಷತೇ ।
ವಿ ತಂ ಯುಯೋತ ಶವಸಾ ವ್ಯೋಜಸಾ ವಿ ಯುಷ್ಮಾಕಾಭಿರೂತಿಭಿಃ ॥ ೮ ॥

ನಿಮ್ಮಿಂದ ಅಥವಾ ಬೇರೆ ಯಾವುದೇ ತರಹದ ಮನುಷ್ಯನಿಂದ ಉತ್ತೇಜಿತನಾಗಿ ಯಾವುದೇ ತರಹದ ಶತ್ರುವು ನಮ್ಮ ಮುಂದೆ ಬಂದ ಪಕ್ಷದಲ್ಲಿ, ಅವನ

ಖಾದ್ಯ ಮತ್ತು ಬಲಗಳನ್ನು ಅಪಹರಿಸಿರಿ. ನೀವಿತ್ತ ಸಹಾಯವನ್ನೂ ಅವನಿಂದ ತಿರುಗಿ ತಕ್ಕೊಳ್ಳಿರಿ. ॥ ೮ ॥

೪೮೦. ಅಸಾಮಿ ಹಿ ಪ್ರಯಜ್ಯವಃ ಕಣ್ವಂ ದದ ಪ್ರಚೇತಸಃ ।
ಅಸಾಮಿಭಿರ್ಮರುತ ಆ ನ ಊತಿಭಿ-ರ್ಗಂತಾ ವೃಷ್ಟಿಂ ನ ವಿದ್ಯುತಃ ॥ ೯ ॥

ಮರುದ್ಗಣವೇ! ನೀವು ಎಲ್ಲ ಪ್ರಕಾರದಿಂದ ಯಜ್ಞದ ಭೋಜನ ಮತ್ತು ಉತ್ಕೃಷ್ಟವಾದ ಜ್ಞಾನದಿಂದ ಸಂಯುಕ್ತರಾಗಿರುವಿರಿ. ನೀವು ಕಣ್ವನನ್ನು ಅಥವಾ ಯಜಮಾನನನ್ನು ಎತ್ತಿ ಹಿಡಿಯಬೇಕು. ವಿದ್ಯುತ್ತು ಮಳೆಯನ್ನು ತರುವಂತೆ, ನೀವು ನಿಮ್ಮ ಸಮಸ್ತ ರಕ್ಷಣಶಕ್ತಿಯೊಂದಿಗೆ ನಮ್ಮ ಬಳಿಗೆ ಬನ್ನಿರಿ. ॥ ೯ ॥

೪೮೧. ಅಸಾಮ್ಯೋಜೋ ಬಿಭೃಥಾ ಸುದಾನವೋ ಽಸಾಮಿ ಧೂತಯಃ ಶವಃ ।
ಋಷಿದ್ವಿಷೇ ಮರುತಃ ಪರಿಮನ್ಯವ ಇಷುಂ ನ ಸೃಜತ ದ್ವಿಷಂ ॥ ೧೦ ॥

ಸುಶೋಭನವಾದ ದಾನದಿಂದ ಸಂಯುಕ್ತರಾದ ಮರುತರೇ! ನೀವು ಸಮಸ್ತ ತೇಜಸ್ಸನ್ನು ಧಾರಣಮಾಡಿರುವಿರಿ. ಕಂಪನಗೊಳಿಸುವ ಮರುತರೇ! ನೀವು ಸಂಪೂರ್ಣವಾದ ಬಲವನ್ನು ಧಾರಣಮಾಡಿರುವಿರಿ. ಋಷಿದ್ವೇಷಿಗಳೂ, ಕ್ರೋಧಪರಾಯಣರೂ ಆಗಿರುವ ಶತ್ರುಗಳ ಮೇಲೆ, ಬಾಣದಂತೆ, ನಿಮ್ಮ ಕ್ರೋಧವನ್ನು ಪ್ರಯೋಗಿಸಿರಿ. ॥ ೧೦ ॥

## ಸೂಕ್ತ: ೪೦

ಈ ಸೂಕ್ತದ ದೇವತೆ: ಬ್ರಹ್ಮಣಸ್ಪತಿಯು; ಋಷಿ: ಕಣ್ವನು; ಛಂದಸ್ಸು: ಬೃಹತೀ.

### [ವರ್ಗ: ೨೦]

೪೮೨. ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।
ಉಪ ಪ್ರ ಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ
ಸಚಾ ॥ ೧ ॥

ಬ್ರಹ್ಮಣಸ್ಪತಿಯೇ! ಏಳಯ್ಯಾ. ದೇವತೆಗಳ ಇಚ್ಛೆಯನ್ನು ಪೂರೈಸುವಂಥವರಾಗಿರುವ ನಾವು ನಿನ್ನ ಹತ್ತಿರ ಬೇಡಿಕೊಳ್ಳುತ್ತೇವೆ. ಶೋಭನರಾದ ಮತ್ತು ದಾತಾರರಾದ ಮಾರುತರು ನಮ್ಮ ಬಳಿಗೆ ಬರಲಿ. ಇಂದ್ರನೇ! ನೀನೂ ಜೊತೆಯಲ್ಲಿದ್ದು ಸೋಮರಸವನ್ನು ಸೇವಿಸಯ್ಯಾ. ॥ ೧ ॥

೪೮೩. ತ್ವಾಮಿದ್ಧಿ ಸಹಸಸ್ಪುತ್ರ ಮರ್ತ್ಯ ಉಪಬ್ರೂತೇ ಧನೇ ಹಿತೇ ।
ಸುವೀರ್ಯಂ ಮರುತ ಆ ಸ್ವಶ್ವ್ಯಂ ದಧೀತ ಯೋ ವ ಆಚಕೇ ॥ ೨ ॥

ಬಹುಬಲ-ಪಾಲಕನಾದ ಬ್ರಹ್ಮಣಸ್ಪತಿದೇವನೇ! ಶತ್ರುಗಳ ನಡುವೆ ಎಸೆಯಲ್ಪಟ್ಟ ಧನದ ಸಲುವಾಗಿ ಮನುಷ್ಯರು ನಿನ್ನ ಸ್ತುತಿಯನ್ನು ಮಾಡುತ್ತಾರೆ. ಮರುದ್ಗಣವೇ! ಯಾವ ಮನುಷ್ಯನು ನಿನ್ನ ಸ್ತುತಿಯನ್ನು ಮಾಡುವನೋ, ಅವನು ಸುಂದರವಾದ ಕುದುರೆಗಳನ್ನು ಮತ್ತು ಪರಾಕ್ರಮದಿಂದ ಸಂಯುಕ್ತವಾದ ಧನವನ್ನು ದೊರಕಿಸುವನು. ॥ ೨ ॥

೪೮೪. ಪ್ರೈತು ಬ್ರಹ್ಮಣಸ್ಪತಿಃ ಪ್ರ ದೇವ್ಯೇತು ಸೂನೃತಾ ।
ಅಚ್ಛಾ ವೀರಂ ನರ್ಯಂ ಪಂಕ್ತಿರಾಧಸಂ ದೇವಾ ಯಜ್ಞಂ
ನಯಂತು ನಃ ॥ ೩ ॥

ಬ್ರಹ್ಮಣಸ್ಪತಿ ಅಥವಾ ಬೃಹಸ್ಪತಿಯು ನಮ್ಮ ಬಳಿಗೆ ಬರಲಿ. ದೇವತೆಗಳು ವೀರರಾದ ಶತ್ರುಗಳನ್ನು ದೂರ ಮಾಡಲಿ. ಅವರು ನಮಗೆ ಹಿತಕಾರಿಯಾದ ಮತ್ತು ಹವ್ಯಯುಕ್ತವಾದ ಯಜ್ಞದಲ್ಲಿ ತಕ್ಕೊಂಡು ಹೋಗಲಿ. ॥ ೩ ॥

೪೮೫. ಯೋ ವಾಘತೇ ದದಾತಿ ಸೂನರಂ ವಸು ಸ ಧತ್ತೇ ಅಕ್ಷಿತಿ ಶ್ರವಃ ।
ತಸ್ಮಾ ಇಳಾಂ ಸುವೀರಾಮಾ ಯಜಾಮಹೇ
ಸುಪ್ರತೂರ್ತಿಮನೇಹಸಂ ॥ ೪ ॥

ಯಾವ ಮನುಷ್ಯನು ಋತ್ವಿಜರಿಂದ ಗ್ರಹಿಸಲು ಯೋಗ್ಯವಾದ ಧನವನ್ನು ದಾನಮಾಡುತ್ತಾನೋ, ಅವನು ಅಕ್ಷಯವಾದ ಅನ್ನವನ್ನು ದೊರಕಿಸುತ್ತಾನೆ. ಅವನ ಸಲುವಾಗಿ ನಾವು ಇಳಾದೇವಿಯ ಹತ್ತಿರ ಬೇಡಿಕೊಳ್ಳುತ್ತೇವೆ. ಇಳೆಯು ಸುವೀರಳಾಗಿರುವಳು. ಅವಳು ಅವಧ್ಯಳಾಗಿ ಶತ್ರುವನ್ನು ತುಂಡರಿಸುತ್ತಾಳೆ. ॥ ೪ ॥

೪೮೬. ಪ್ರ ನೂನಂ ಬ್ರಹ್ಮಣಸ್ಪತಿ—ರ್ಮಂತ್ರಂ ವದತ್ಯುಕ್ಥ್ಯಂ ।
ಯಸ್ಮಿನ್ನಿಂದ್ರೋ ವರುಣೋ ಮಿತ್ರೋ ಅರ್ಯಮಾ ದೇವಾ
ಓಕಾಂಸಿ ಚಕ್ರಿರೇ ॥ ೫ ॥

ಬ್ರಹ್ಮಣಸ್ಪತಿಯು ಅವಶ್ಯವಾಗಿ ಪವಿತ್ರವಾದ ಮಂತ್ರದ ಉಚ್ಚಾರಣೆಯನ್ನು ಸ್ಪಷ್ಟವಾಗಿ ಮಾಡುತ್ತಾನೆ. ಆ ಮಂತ್ರದಲ್ಲಿ ಇಂದ್ರ, ವರುಣ, ಮಿತ್ರ ಮತ್ತು ಅರ್ಯಮಾ– ಈ ದೇವತೆಗಳು ವಾಸಸ್ಥಾನವನ್ನು ಮಾಡುತ್ತಾರೆ. ॥ ೫ ॥

## [ವರ್ಗಃ ೨೧]

೪೮೭. ತಮಿದ್ ವೋಚೇಮಾ ವಿದಥೇಷು ಶಂಭುವಂ ಮಂತ್ರಂ
ದೇವಾ ಅನೇಹಸಂ ।

ಇಮಾಂ ಚ ವಾಚಂ ಪ್ರತಿಹರ್ಯಥಾ ನರೋ ವಿಶ್ವೇದ್
ವಾಮಾ ವೋ ಅಶ್ನವತ್ ॥ ೬ ॥

ದೇವಗಣವೇ! ಸುಖದ ಸಲುವಾಗಿ ಆ ಹಿಂಸಾ-ದ್ವೇಷ-ಶೂನ್ಯವಾದ ಮಂತ್ರದ ಉಚ್ಚಾರಣೆಯನ್ನು ನಾವು ಈ ಯಜ್ಞದಲ್ಲಿ ಮಾಡುತ್ತೇವೆ. ನೇತೃ ಗಣವೇ! ನೀವು ಈ ವಾಕ್ಯವನ್ನು ಮೆಚ್ಚಿರುವಿರಾದರೆ, ಎಲ್ಲ ಸುಂದರವಾದ ವಚನ ಗಳು ನಿಮ್ಮ ಬಳಿಗೆ ಹೋಗುವವು. ॥ ೬ ॥

೪೪೮. ಕೋ ದೇವಯಂತಮಶ್ನವಜ್ ಜನಂ ಕೋ ವೃಕ್ತಬರ್ಹಿಷಂ ।
ಪ್ರಪ್ರ ದಾಶ್ವಾನ್ ಪಸ್ತ್ಯಾಭಿರಸ್ಥಿತಾಽಂತರ್ವಾವತ್ ಕ್ಷಯಂ ದಧೇ ॥ ೭ ॥

ಯಾವ ಪುರುಷರು ದೇವತೆಗಳ ಅಭಿಲಾಷೆಯನ್ನು ಮಾಡುತ್ತಾರೋ, ಅವರ ಬಳಿಗೆ ಬ್ರಹ್ಮಣಸ್ಪತಿಯನ್ನು ಬಿಟ್ಟು ಬೇರೆ ಯಾರು ಬರುವರು? ಯಾವ ಯಾವ ಪುರುಷರು ಯಜ್ಞದ ಸಲುವಾಗಿ ಕುಶಗಳನ್ನು ಕೊಯ್ಯುತ್ತಾರೋ, ಅವರ ಬಳಿಗೆ ಬ್ರಹ್ಮಣಸ್ಪತಿಯನ್ನು ಬಿಟ್ಟು ಇನ್ನು ಯಾರು ಬರುವರು? ಋತ್ವಿಜರ ಜೊತೆಯಲ್ಲಿ ದ್ರವ್ಯದಾತಾ ಯಜಮಾನನು ಯಜ್ಞಶಾಲೆಯ ಸಲುವಾಗಿ ಒಳಗಿದ್ದ ಹಣತುಂಬಿದ ಮನೆಯಿಂದ ಗಮನವನ್ನು ಮಾಡಿರುವನು. ॥ ೭ ॥

೪೪೯. ಉಪ ಕ್ಷತ್ರಂ ಪೃಂಚೀತ ಹಂತಿ ರಾಜಭಿ-ರ್ಭಯೇ ಚಿತ್ ಸುಕ್ಷಿತಿಂ ದಧೇ ।
ನಾಸ್ಯ ವರ್ತಾ ನ ತರುತಾ ಮಹಾಧನೇ ನಾರ್ಭೇ ಅಸ್ತಿ ವಜ್ರಿಣಃ ॥ ೮ ॥

ತನ್ನ ಶರೀರದಲ್ಲಿ ಬ್ರಹ್ಮಣಸ್ಪತಿಯು ಬಲದ ಸಂಚಯುವನ್ನು ಮಾಡಲಿ. ಅರಸರೊಂದಿಗೆ ಕೂಡಿ ಅವನು ಶತ್ರುಗಳನ್ನು ನಾಶಿಸುತ್ತಾನೆ ಮತ್ತು ಭೀತಿಯ ಸಮಯದಲ್ಲಿ ಧೈರ್ಯಗುಂದದೆ ಸ್ವಸ್ಥಾನದಲ್ಲಿ ಸ್ಥಿರವಾಗಿರುತ್ತಾನೆ. ಅವನು ವಜ್ರ ವನ್ನು ಧರಿಸಿರುವನು. ಮಹಾಧನದ ಸಲುವಾಗಿ ಯಾವಾತನೂ—ಅವನು ಬೇಕಾದರೆ ದೊಡ್ಡವನಾಗಿರಲಿ ಅಥವಾ ಸಣ್ಣವನಾಗಿರಲಿ—ಯುದ್ಧದಲ್ಲಿ ಬ್ರಹ್ಮಣ ಸ್ಪತಿಯನ್ನು ಅವನ ಇಚ್ಛೆಯ ವಿರುದ್ಧವಾಗಿ ಉತ್ಸಾಹಿತ ಅಥವಾ ನಿರುತ್ಸಾಹಿತ ನನ್ನಾಗಿ ಮಾಡಲಾರನು. ॥ ೮ ॥

## ಸೂಕ್ತ: ೪೧

ಈ ಸೂಕ್ತದ ದೇವತೆ: ವರುಣ, ಮಿತ್ರ, ಅರ್ಯಮ ಮತ್ತು ಆದಿತ್ಯರು; ಋಷಿ: ಕಣ್ವನು; ಛಂದಸ್ಸು: ಗಾಯತ್ರೀ.

## [ವರ್ಗ: ೨೨]

೪೫೦. ಯಂ ರಕ್ಷಂತಿ ಪ್ರಚೇತಸೋ ವರುಣೋ ಮಿತ್ರೋ ಅರ್ಯಮಾ ।
ನೂ ಚಿತ್ ಸ ದಭ್ಯತೇ ಜನಃ ॥ ೧ ॥

ಉತ್ಕೃಷ್ಟವಾದ ಜ್ಞಾನವುಳ್ಳ ವರುಣ, ಮಿತ್ರ ಮತ್ತು ಅರ್ಯಮಾ ಇವರು ಯಾವಾತನನ್ನು ಕಾಪಾಡುತ್ತಾರೋ, ಅವನು ಕೂಡಲೇ ಶತ್ರುಗಳನ್ನು ನಾಶ ಮಾಡುತ್ತಾನೆ. || ೧ ||

೪೯೧. ಯಂ ಬಾಹುತೇವ ಪಿಪ್ರತಿ ಪಾಂತಿ ಮರ್ತ್ಯಂ ರಿಷಃ ।
ಅರಿಷ್ಟಃ ಸರ್ವ ಏಧತೇ || ೨ ||

ಅವರು ಯಾವಾತನ ಕೈಹಿಡಿದು ಅವನನ್ನು ಧನವಂತನನ್ನಾಗಿ ಮಾಡು ವರೋ, ಅಂಥವನು ಯಾರಿಂದಲೂ ಹಿಂಸಿಸಲ್ಪಡದೆ, ದಿನೇ ದಿನೇ ವೃದ್ಧಿಯನ್ನು ಹೊಂದುತ್ತಾನೆ. || ೨ ||

೪೯೨. ವಿ ದುರ್ಗಾ ವಿ ದ್ವಿಷಃ ಪುರೋ ಘ್ನಂತಿ ರಾಜಾನ ಏಷಾಂ ।
ನಯಂತಿ ದುರಿತಾ ತಿರಃ || ೩ ||

ವರುಣನೇ ಮೊದಲಾದ ರಾಜನ್ಯರು ಅಂಥಾ ಮನುಷ್ಯರ ಸಲುವಾಗಿ ಶತ್ರುಗಳ ದುರ್ಗವನ್ನು ನಾಶಗೊಳಿಸುವರು; ಅದರೊಡನೆಯೇ ಆ ಶತ್ರುಗಳನ್ನೂ ನಾಶಗೊಳಿಸುವರು. ತರುವಾಯ ತಮ್ಮ ಭಕ್ತರಾದ ಮಾನವರ ಪಾಪಮೋಚನ ವನ್ನೂ ಮಾಡುತ್ತಾರೆ. || ೩ ||

೪೯೩. ಸುಗಃ ಪಂಥಾ ಅನೃಕ್ಷರ ಆದಿತ್ಯಾಸ ಋತಂ ಯತೇ ।
ನಾತ್ರಾವಖಾದೋ ಅಸ್ತಿ ವಃ || ೪ ||

ಆದಿತ್ಯಗಣವೇ! ನಿಮ್ಮ ಯಜ್ಞಶಾಲೆಗೆ ಹೋಗುವ ಮಾರ್ಗವು ಸುಖ ಗಮ್ಯವೂ, ಕಂಟಕರಹಿತವೂ ಆಗಿರುವದು. ಈ ಯಜ್ಞದಲ್ಲಿ ನಿಮ್ಮ ಸಲುವಾಗಿ ಯಾವುದೇ ಕೆಟ್ಟ ಖಾದ್ಯವು ತಯಾರಿಸಲ್ಪಡುವದಿಲ್ಲ. || ೪ ||

೪೯೪. ಯಂ ಯಜ್ಞಂ ನಯಥಾ ನರ ಆದಿತ್ಯಾ ಋಜುನಾ ಪಥಾ ।
ಪ್ರ ವಃ ಸ ಧೀತಯೇ ನಶತ್ || ೫ ||

ನೇತೃಸ್ಥಾನೀಯರಾದ ಆದಿತ್ಯರೇ! ಯಾವ ಯಜ್ಞದಲ್ಲಿ ನೀವು ನೆಟ್ಟಗಿದ್ದ ಮಾರ್ಗದಿಂದ ಬರುವಿರೋ, ಆ ಯಜ್ಞದಲ್ಲಿ ನಿಮಗೆ ಉಪಭೋಗಗಳು ಪ್ರಾಪ್ತ ವಾಗಲಿ. || ೫ ||

## [ವರ್ಗ: ೨೩]

೪೯೫. ಸ ರತ್ನಂ ಮರ್ತ್ಯೋ ವಸು ವಿಶ್ವಂ ತೋಕಮುತ ತ್ಮನಾ ।
ಅಚ್ಛಾ ಗಚ್ಛತ್ಯಸ್ತೃತಃ || ೬ ||

ಆದಿತ್ಯಗಣವೇ! ನಿಮ್ಮಿಂದ ಅನುಗ್ರಹಿಸಲ್ಪಟ್ಟ ಮನುಷ್ಯನು ಯಾರಿಂದಲೂ ಹಿಂಸಿತನಾಗದೇ, ಎಲ್ಲ ರಮಣೀಯವಾದ ಸಂಪತ್ತುಗಳನ್ನು ದೊರಕಿಸುತ್ತಾನೆ. ಆತ್ಮಸದೃಶವಾದ ಅಪತ್ಯವೂ ಅವನಿಗೆ ಲಭಿಸುವದು. || ೬ ||

೪೯೬. ಕಥಾ ರಾಧಾಮ ಸಖಾಯಃ ಸ್ತೋಮಂ ಮಿತ್ರಸ್ಯಾರ್ಯಮ್ಣಃ ।
ಮಹಿ ಪ್ಸರೋ ವರುಣಸ್ಯ ॥ ೭ ॥

ಗೆಳೆಯರೇ! ಮಿತ್ರ, ಅರ್ಯಮಾ ಮತ್ತು ವರುಣ ಇವರ ಮಹತ್ವಕ್ಕೆ ಅನುಸಾರವಾದ ಸ್ತೋತ್ರಗಳನ್ನು ಯಾವ ರೀತಿಯಲ್ಲಿ ಸಾಧಿಸೋಣ? ॥ ೭ ॥

೪೯೭. ಮಾ ವೋ ಘ್ನಂತಂ ಮಾ ಶಪಂತಂ ಪ್ರತಿ ವೋಚೇ ದೇವಯಂತಂ ।
ಸುಮ್ನೈರಿದ್ ವ ಆ ವಿವಾಸೇ ॥ ೮ ॥

ದೇವಗಣವೇ! ದೇವಾಭಿಲಾಷಿಯಾದ ಯಜಮಾನನಿಗೆ ಕಟುವಚನಗಳನ್ನು ಹೇಳಿ, ಅವನ ಕೊಲೆಮಾಡಿದವನ ವಿರುದ್ಧ ನಿಮ್ಮ ಹತ್ತಿರ ಅಭಿಯೋಗ ಮಾಡಲಿಕ್ಕೆ ನಾನು ಬಂದಿರದೆ, ನಿಮಗೆ ಧನದಿಂದ ತೃಪ್ತಗೊಳಿಸಲು ಬಂದಿರುವೆನು. ॥ ೮ ॥

೪೯೮. ಚತುರಶ್ಚಿದ್ ದದಮಾನಾದ್ ಬಿಭೀಯಾದಾ ನಿಧಾತೋಃ ।
ನ ದುರುಕ್ತಾಯ ಸ್ಪೃಹಯೇತ್ ॥ ೯ ॥

ಅಕ್ಷ, ದ್ಯೂತ ಅಥವಾ ಜೂಜಿನ ಆಟದಲ್ಲಿ ನಾಲ್ಕು ಕವಡೆಗಳನ್ನು ಕೈಯಲ್ಲಿ ಹಿಡಿದು, ಅವುಗಳನ್ನು ಕೆಳಗೆ ಬೀಸಾಡುವವರೆಗೆ ಜೂಜುಗಾರನಿಗೆ ಎಲ್ಲರೂ ಹೆದರುವಂತೆ, ಯಜಮಾನನಾದರೂ ಬೇರೆಯವರ ನಿಂದೆಮಾಡಲು ಹೆದರಬೇಕು, ಇಚ್ಛಿಸಬಾರದು. ॥ ೯ ॥

## ಸೂಕ್ತ: ೪೨

ಈ ಸೂಕ್ತದ ದೇವತೆ: ಪೂಷನು; ಋಷಿ: ಕಣ್ವನು; ಛಂದಸ್ಸು: ಗಾಯತ್ರೀ.

### [ವರ್ಗ: ೨೪]

೪೯೯. ಸಂ ಪೂಷನ್ನಧ್ವನಸ್ತಿರ ವ್ಯಂಹೋ ವಿಮುಚೋ ನಪಾತ್ ।
ಸಕ್ಷ್ವಾ ದೇವ ಪ್ರ ಣಸ್ಪುರಃ ॥ ೧ ॥

ಪೂಷನೇ! ಮಾರ್ಗವನ್ನು ಪಾರ ಮಾಡಿಸಯ್ಯಾ. ವಿಘ್ನಕ್ಕೆ ಕಾರಣವಾದ ಪಾಪದ ವಿನಾಶ ಮಾಡು. ಮೇಘಪುತ್ರನಾದ ದೇವನೇ! ನಮ್ಮ ಮುಂದೆ ಹೋಗಿ ಪಥಪ್ರದರ್ಶನ ಮಾಡಯ್ಯಾ. ॥ ೧ ॥

೫೦೦. ಯೋ ನಃ ಪೂಷನ್ನಘೋ ವೃಕೋ ದುಃಶೇವ ಆದಿದೇಶತಿ ।
ಅಪ ಸ್ಮ ತಂ ಪಥೋ ಜಹಿ ॥ ೨ ॥

ಪೂಷನೇ! ಯಾವನಾದರೂ ಆಕ್ರಾಮಕನು, ಅಪಹರ್ತಾರನು ಅಥವಾ ದುಷ್ಟನು ನಮಗೆ ವಿಪರೀತವಾದ ದಾರಿಯನ್ನು ತೋರಿಸತೊಡಗಿದರೆ, ಅವನನ್ನು ನಮ್ಮ ಮಾರ್ಗದಿಂದ ದೂರಮಾಡಯ್ಯಾ. ॥ ೨ ॥

೫೦೧. ಅಪ ತ್ಯಂ ಪರಿಪಂಥಿನಂ ಮುಷೀವಾಣಂ ಹುರಶ್ಚಿತಂ ।
ದೂರಮಧಿ ಸ್ರುತೇರಜ ॥ ೩ ॥

ಆ ಮಾರ್ಗಪ್ರತಿಬಂಧಕ, ಕಳ್ಳ ಮತ್ತು ಕಪಟಿಯನ್ನು ಮಾರ್ಗದಿಂದ ದೂರ ಓಡಿಸಿಬಿಡಯ್ಯಾ. ॥ ೩ ॥

೫೦೨. ತ್ವಂ ತಸ್ಯ ದ್ವಯಾವಿನೋ—ಽಘಶಂಸಸ್ಯ ಕಸ್ಯ ಚಿತ್ ।
ಪದಾಭಿ ತಿಷ್ಠ ತಪುಷಿಂ ॥ ೪ ॥

ಯಾವನಾದರೂ ಪ್ರತ್ಯಕ್ಷ ಅಥವಾ ಪರೋಕ್ಷ— ಈ ಎರಡೂ ರೀತಿಯಲ್ಲಿ ಕಳ್ಳತನವನ್ನು ಮಾಡುವನೋ ಮತ್ತು ಪರಿಣಾಮತಃ ಅನಿಷ್ಟವನ್ನು ಸಾಧಿಸುವನೋ ಅಂಥ ಮನುಷ್ಯನ ಪರಪೀಡಕವಾದ ದೇಹವನ್ನು ನಿನ್ನ ಕಾಲುಗಳ ಕೆಳಗೆ ತುಳಿದುಬಿಡಯ್ಯಾ. ॥ ೪ ॥

೫೦೩. ಆ ತತ್ ತೇ ದಸ್ರ ಮಂತುಮಃ ಪೂಷನ್ನವೋ ವೃಣೀಮಹೇ ।
ಯೇನ ಪಿತ್ೠನಚೋದಯಃ ॥ ೫ ॥

ಶತ್ರುಮರ್ದನನಾದ ಮತ್ತು ಜ್ಞಾನಿಯಾದ ಪೂಷನೇ! ನೀನು ಯಾವ ರಕ್ಷಣಶಕ್ತಿಯಿಂದ ನಮ್ಮ ಪಿತೃಗಳನ್ನು ಉತ್ಸಾಹಿತರನ್ನಾಗಿ ಮಾಡಿದ್ದೆಯೋ, ನಿನ್ನ ಅದೇ ರಕ್ಷಣಶಕ್ತಿಯ ಸಲುವಾಗಿ ನಾವು ಪ್ರಾರ್ಥನೆಯನ್ನು ಮಾಡುತ್ತೇವೆ. ॥ ೫ ॥

## [ವರ್ಗಃ ೨೫]

೫೦೪. ಅಧಾ ನೋ ವಿಶ್ವಸೌಭಗ ಹಿರಣ್ಯವಾಶೀಮತ್ತಮ ।
ಧನಾನಿ ಸುಷಣಾ ಕೃಧಿ ॥ ೬ ॥

ಸರ್ವಸಂಪತ್ಶಾಲಿಯಾದ ಮತ್ತು ವಿವಿಧ ಸ್ವರ್ಣಾಸ್ತ್ರಗಳಿಂದ ಸಂಯುಕ್ತನಾದ ಪೂಷನೇ! ನಮ್ಮ ಪ್ರಾರ್ಥನೆಯು ಮುಗಿದ ನಂತರ, ನಮಗಾಗಿ ಆ ಧನ ಸಮೂಹವನ್ನು ದಾನದಲ್ಲಿ ಬದಲಾಯಿಸಿಬಿಡಯ್ಯಾ. ॥ ೬ ॥

೫೦೫. ಅತಿ ನಃ ಸಶ್ಚತೋ ನಯ ಸುಗಾ ನಃ ಸುಪಥಾ ಕೃಣು ।
ಪೂಷನ್ನಿಹ ಕ್ರತುಂ ವಿದಃ ॥ ೭ ॥

ಬಾಧಕರಾದ ಶತ್ರುಗಳನ್ನು ಉಲ್ಲಂಘಿಸಿ ನಮ್ಮನ್ನು ಪ್ರಗತಿಯ ಪಥದಲ್ಲಿ ಮುಂದಕ್ಕೆ ಸಾಗಿಸು. ಸುಖಗಮ್ಯವಾದ ಮತ್ತು ಸುಂದರವಾದ ಮಾರ್ಗದಿಂದ ನಮ್ಮನ್ನು ಮುಂದಕ್ಕೆ ಸಾಗಿಸು. ಪೂಷನೇ! ನೀನು ಈ ಮಾರ್ಗದಲ್ಲಿ ನಮ್ಮನ್ನು ಕಾಪಾಡುವ ಉಪಾಯವನ್ನು ಕಾಣಯ್ಯಾ. ॥ ೭ ॥

೫೦೬. ಅಭಿ ಸೂಯವಸಂ ನಯ ನ ನವಜ್ವಾರೋ ಅಧ್ವನೇ ।
ಪೂಷನ್ನಿಹ ಕ್ರತುಂ ವಿದಃ ॥ ೮ ॥

ಸುಂದರವಾದ ಮತ್ತು ವಿಪುಲವಾಗಿ ಹುಲ್ಲು ಬೆಳೆಯುವ ದೇಶದಲ್ಲಿ ನಮ್ಮನ್ನು ತಕ್ಕೊಂಡು ಹೋಗಯ್ಯಾ. ಮಾರ್ಗದಲ್ಲಿ ಹೊಸ ವಿಘ್ನಗಳು ಬಾರದಿರಲಿ. ಪೂಷನೇ! ನೀನು ಈ ಮಾರ್ಗದಲ್ಲಿ ನಮ್ಮನ್ನು ಕಾಪಾಡುವ ಉಪಾಯವನ್ನು ಕಾಣಯ್ಯಾ. ॥ ೮ ॥

೫೦೭. ಶಗ್ಧಿ ಪೂರ್ಧಿ ಪ್ರಯಂಸಿ ಚ ಶಿಶೀಹಿ ಪ್ರಾಸ್ಯುದರಂ ।
ಪೂಷನ್ನಿಹ ಕ್ರತುಂ ವಿದಃ ॥ ೯ ॥

ನಮ್ಮ ಮೇಲೆ ಅನುಗ್ರಹ ಮಾಡು. ನಮ್ಮ ಮನೆಯನ್ನು ಧನ-ಧಾನ್ಯದಿಂದ ತುಂಬಿಸು. ಉಳಿದ ಅಭೀಷ್ಟವಾದ ವಸ್ತುಗಳನ್ನೂ ನಮಗೆ ದಯಪಾಲಿಸು. ನಮ್ಮ ತೇಜಸ್ಸನ್ನು ಪರಿವರ್ಧಿಸು. ನಮ್ಮ ಉದರಪೂರ್ತಿಯನ್ನು ಮಾಡಯ್ಯಾ. ಪೂಷನೇ! ನೀನು ಈ ಮಾರ್ಗದಲ್ಲಿ ನಮ್ಮನ್ನು ಕಾಪಾಡುವ ಉಪಾಯವನ್ನು ಕಾಣಯ್ಯಾ. ॥ ೯ ॥

೫೦೮. ನ ಪೂಷಣಂ ಮೇಥಾಮಸಿ ಸೂಕ್ತೈರಭಿ ಗೃಣೀಮಸಿ ।
ವಸೂನಿ ದಸ್ಮಮೀಮಹೇ ॥ ೧೦ ॥

ಪೂಷನ ನಿಂದೆಯು ನಮಗೆ ಸಹನವಾಗಲಾರದು; ನಾವು ಅವನನ್ನು ಸ್ತುತಿಸುತ್ತೇವೆ. ನಾವು ಸುಂದರನಾಗಿರುವ ಪೂಷನ ಹತ್ತಿರ ಧನದ ಯಾಚನೆಯನ್ನು ಮಾಡುತ್ತೇವೆ. ॥ ೧೦ ॥

## ಸೂಕ್ತ: ೪೩

ಈ ಸೂಕ್ತದ ದೇವತೆ: ರುದ್ರ ಮುಂತಾದವರು; ಋಷಿ: ಕಣ್ವನು; ಛಂದಸ್ಸು: ಗಾಯತ್ರೀ.

### [ವರ್ಗ: ೨೬]

೫೦೯. ಕದ್ ರುದ್ರಾಯ ಪ್ರಚೇತಸೇ ಮೀಳ್ಹುಷ್ಟಮಾಯ ತವ್ಯಸೇ ।
ವೋಚೇಮ ಶಂತಮಂ ಹೃದೇ ॥ ೧ ॥

ಉತ್ಕೃಷ್ಟವಾದ ಜ್ಞಾನದಿಂದ ಸಂಯುಕ್ತನಾದ, ಅಭೀಷ್ಟವರ್ಷಕನಾದ ಮತ್ತು ಅತ್ಯಂತ ದೊಡ್ಡವನಾದ ರುದ್ರನು ನಮ್ಮ ಹೃದಯದಲ್ಲಿ ನಿವಾಸ ಮಾಡು

ತ್ತಾನೆ. ಆ ರುದ್ರನಿಗೆ ಸುಖಕರವಾದ ಸ್ತೋತ್ರವನ್ನು ನಾವು ಯಾವಾಗ ಪಠಿಸೋಣ? ॥ ೧ ॥

೫೧೦. ಯಥಾ ನೋ ಅದಿತಿಃ ಕರತ್ ಪಶ್ವೇ ನೃಭ್ಯೋ ಯಥಾ ಗವೇ ।
ಯಥಾ ತೋಕಾಯ ರುದ್ರಿಯಂ ॥ ೨ ॥

ಭೂಮಿದೇವತೆಯು ನಮ್ಮ ಸಲುವಾಗಿ, ಪಶುಗಳ ಸಲುವಾಗಿ, ಮನುಷ್ಯರಿಗಾಗಿ, ದನಕರುಗಳ ಸಲುವಾಗಿ ಮತ್ತು ನಮ್ಮ ಮಕ್ಕಳ ಸಲುವಾಗಿ ರುದ್ರನ ಸಂಬಂಧದ ಔಷಧವನ್ನು ದಯೆಪಾಲಿಸಲಿ. ॥ ೨ ॥

೫೧೧. ಯಥಾ ನೋ ಮಿತ್ರೋ ವರುಣೋ ಯಥಾ ರುದ್ರಶ್ಚಿಕೇತತಿ ।
ಯಥಾ ವಿಶ್ವೇ ಸಜೋಷಸಃ ॥ ೩ ॥

ಮಿತ್ರ, ವರುಣ, ರುದ್ರ ಮತ್ತು ಸಮಾನ-ಪ್ರೀತಿಯುಕ್ತವಾದ ಎಲ್ಲ ದೇವತೆಗಳು ನಮ್ಮ ಮೇಲೆ ಅನುಗ್ರಹ ಮಾಡಲಿ. ॥ ೩ ॥

೫೧೨. ಗಾಥಪತಿಂ ಮೇಧಪತಿಂ ರುದ್ರಂ ಜಲಾಷಭೇಷಜಂ ।
ತಚ್ಛಂಯೋಃ ಸುಮ್ನಮೀಮಹೇ ॥ ೪ ॥

ರುದ್ರನು ಸ್ತುತಿರಕ್ಷಕನೂ, ಯಜ್ಞಪಾಲಕನೂ, ಉದಕಸ್ವರೂಪವಾದ ಔಷಧಿಗಳಿಂದ ಕೂಡಿದವನೂ ಆಗಿರುತ್ತಾನೆ. ಅವನ ಹತ್ತರ ನಾವು ಬೃಹಸ್ಪತಿಪುತ್ರನಾದ ಶಂಯುವಿನ ಸುಖದಂತಿರುವ ಸುಖವನ್ನು ಬೇಡಿಕೊಳ್ಳುತ್ತೇವೆ. ॥ ೪ ॥

೫೧೩. ಯಃ ಶುಕ್ರ ಇವ ಸೂರ್ಯೋ ಹಿರಣ್ಯಮಿವ ರೋಚತೇ ।
ಶ್ರೇಷ್ಠೋ ದೇವಾನಾಂ ವಸುಃ ॥ ೫ ॥

ಯಾವ ರುದ್ರನು ಸೂರ್ಯನಂತೆ ದೀಪ್ತಿಮಂತನೂ, ಬಂಗಾರದಂತೆ ಉಜ್ವಲನೂ ಆಗಿರುವನೋ, ಆ ರುದ್ರನು ದೇವತೆಗಳಲ್ಲಿ ಶ್ರೇಷ್ಠನೂ, ಅಧಿವಾಸಕ್ಕೆ ಕಾರಣನೂ ಆಗಿರುವನು. ॥ ೫ ॥

## [ವರ್ಗಃ ೨೭]

೫೧೪. ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ ।
ನೃಭ್ಯೋ ನಾರಿಭ್ಯೋ ಗವೇ ॥ ೬ ॥

ನಮ್ಮ ಕುದುರೆ, ಕುರಿ, ಆಡು, ಪುರುಷ, ಸ್ತ್ರೀ, ಮತ್ತು ಗೋಜಾತಿ–ಇವುಗಳ ಸಲುವಾಗಿ ರುದ್ರದೇವನು ಸುಗಮ್ಯವಾದ ಸುಖವನ್ನು ದಯೆಪಾಲಿಸಲಿ. ॥ ೬ ॥

೫೧೫. ಅಸ್ಮೇ ಸೋಮ ಶ್ರಿಯಮಧಿ ನಿಧೇಹಿ ಶತಸ್ಯ ನೃಣಾಂ ।
ಮಹಿ ಶ್ರವಸ್ತುವಿನೃಮ್ಣಂ ॥ ೭ ॥

ಸೋಮದೇವನೇ! ನಮಗೆ, ಪ್ರಚುರವಾದ ಪರಿಮಾಣದಲ್ಲಿ, ಶತಮನುಷ್ಯರಿಗೆ ಸಾಕಾಗುವಷ್ಟು ಧನವನ್ನು ಮತ್ತು ಅತಿಶಯವಾದ ಮತ್ತು ಯಥೇಷ್ಟಬಲದಿಂದ ಸಂಯುಕ್ತವಾದ ಅನ್ನವನ್ನು ಅನುಗ್ರಹಿಸಯ್ಯಾ. ॥ ೭ ॥

೫೧೬. ಮಾ ನಃ ಸೋಮಪರಿಬಾಧೋ ಮಾರಾತಯೋ ಜುಹುರಂತ ।
ಆ ನ ಇಂದೋ ವಾಜೇ ಭಜ ॥ ೮ ॥

ಸೋಮದೇವನಿಗೆ ಪ್ರತಿಬಾಧಕವಾಗಿ, ಶತ್ರುಗಳಾಗಿರುವವರು ನಮಗೆ ಹಿಂಸೆಯನ್ನು ಕೊಡದಿರುವಂತೆ, ಸೋಮದೇವನು ನಮಗೆ ಅನ್ನದಾನ ಮಾಡಲಿ. ॥ ೮ ॥

೫೧೭. ಯಾಸ್ತೇ ಪ್ರಜಾ ಅಮೃತಸ್ಯ ಪರಸ್ಮಿನ್ ಧಾಮನ್ನೃತಸ್ಯ ।
ಮೂರ್ಧಾ ನಾಭಾ ಸೋಮ ವೇನ ಆಭೂಷಂತೀಃ ಸೋಮ ವೇದಃ ॥ ೯ ॥

ಸೋಮನೇ! ನೀನು ಅಮರನಾಗಿರುವೆ, ಉತ್ತಮವಾದ ಸ್ಥಾನವನ್ನು ಸಂಪಾದಿಸಿರುವೆ. ನೀನು ಅಗ್ರದಲ್ಲಿದ್ದುಕೊಂಡು, ಯಜ್ಞಶಾಲೆಯಲ್ಲಿರುವ ನಿನ್ನ ಪ್ರಜೆಗಳನ್ನು ಪ್ರೀತಿಸು. ಆ ಪ್ರಜಾಜನರು ನಿನ್ನನ್ನು ಶೋಭಿಸುತ್ತಾರೆ; ನೀನಾದರೂ ಅವರನ್ನು ಆದರಿಸಯ್ಯಾ. ॥ ೯ ॥

---

# ಒಂಬತ್ತನೇ ಅನುವಾಕ

## ಸೂಕ್ತ: ೪೪

ಈ ಸೂಕ್ತದ ದೇವತೆ: ಅಗ್ನಿ ಮುಂತಾದವರು; ಋಷಿ: ಕಣ್ವನ ಪುತ್ರನಾದ ಪ್ರಸ್ಕಣ್ವನು; ಛಂದಸ್ಸು: ಬೃಹತೀ.

### [ವರ್ಗ: ೨೮]

೫೧೮. ಅಗ್ನೇ ವಿವಸ್ವದುಷಸಶ್ಚಿತ್ರಂ ರಾಧೋ ಅಮರ್ತ್ಯ ।
ಆ ದಾಶುಷೇ ಜಾತವೇದೋ ವಹಾ ತ್ವ—ಮದ್ಯಾ ದೇವಾ
ಉಷರ್ಬುಧಃ ॥ ೧ ॥

ಅಗ್ನಿದೇವನೇ! ನೀನು ಅಮರನಾಗಿರುವೆ, ಸರ್ವ-ಭೂತಜ್ಞನಾಗಿರುವೆ ನೀನು ಉಷಾದೇವಿಯ ಕಡೆಯಿಂದ ಹವಿರ್ದಾನಶೀಲನಾದ ಯಜಮಾನನ ಸಲು

ವಾಗಿ ನಾನಾವಿಧವಾದ ಮತ್ತು ನಿವಾಸಯುಕ್ತವಾದ ಧನವನ್ನು ತಾರಯ್ಯಾ. ಇಂದು ಉಷಃಕಾಲದಲ್ಲಿ ಜಾಗ್ರತರಾಗಿರುವ ದೇವತೆಗಳನ್ನು ಸಂಗಡ ಕರೆದು ಕೊಂಡು ಬಾರಯ್ಯಾ. ॥ ೧ ॥

೫೧೯. ಜುಷ್ಟೋ ಹಿ ದೂತೋ ಅಸಿ ಹವ್ಯವಾಹನೋ ऽಗ್ನೇ ರಥೀರಧ್ವರಾಣಾಂ ।
ಸಜೂರಶ್ವಿಭ್ಯಾಮುಷಸಾ ಸುವೀರ್ಯ—ಮಸ್ಮೇ ಧೇಹಿ
ಶ್ರವೋ ಬೃಹತ್ ॥ ೨ ॥

ಅಗ್ನಿಯೇ! ನೀನು ದೇವತೆಗಳಿಂದ ಸೇವಿತನಾದ ದೂತನಾಗಿರುವೆ. ಹವ್ಯವನ್ನು ವಹನ ಮಾಡುತ್ತೀಯೆ. ನೀನು ಯಜ್ಞವನ್ನು ರಥದಂತೆ ವಹನ ಮಾಡುತ್ತೀ. ನೀನು ಅಶ್ವಿನೀಕುಮಾರರು ಮತ್ತು ಉಷಾದೇವಿ — ಇವರ ಜೊತೆ ಯೊಂದಿಗೆ ಬಂದು ಶೋಭನೀಯವಾದ, ವೀರ್ಯಯುಕ್ತವಾದ ಮತ್ತು ಅಧಿಕ ವಾದ ಅನ್ನವನ್ನು ನಮಗೆ ದಯೆಪಾಲಿಸಯ್ಯಾ. ॥ ೨ ॥

೫೨೦. ಅದ್ಯಾ ದೂತಂ ವೃಣೀಮಹೇ ವಸುಮಗ್ನಿಂ ಪುರುಪ್ರಿಯಂ ।
ಧೂಮಕೇತುಂ ಭಾಋಜೀಕಂ ವ್ಯುಷ್ಟಿಷು ಯಜ್ಞಾನಾಮಧ್ವರಶ್ರಿಯಂ ॥ ೩ ॥

ಅಗ್ನಿಯು ದೂತನೂ, ನಿವಾಸಹೇತುವೂ, ವಿವಿಧಪ್ರಿಯನೂ, ಧೂಮ ರೂಪಿನ ಧ್ವಜೆಯಿಂದ ಸಂಯುಕ್ತನೂ, ಪ್ರಖ್ಯಾತವಾದ ಜ್ಯೋತಿಯಿಂದ ಅಲಂಕೃತನೂ, ಉಷಃಕಾಲದಲ್ಲಿ ಯಜಮಾನರ ಯಜ್ಞಸೇವನ ಮಾಡುವಂಥ ವನೂ ಆಗಿರುವನು. ಅದೇ ಅಗ್ನಿಯನ್ನು ಈ ಹೊತ್ತು ನಾವು ವರಣಮಾಡು ತ್ತೇವೆ. ॥ ೩ ॥

೫೨೧. ಶ್ರೇಷ್ಠಂ ಯವಿಷ್ಠಮತಿಥಿಂ ಸ್ವಾಹುತಂ ಜುಷ್ಟಂ ಜನಾಯ ದಾಶುಷೇ ।
ದೇವಾ ಅಚ್ಛಾ ಯಾತವೇ ಜಾತವೇದಸ—ಮಗ್ನಿಮೀಳೇ ವ್ಯುಷ್ಟಿಷು ॥ ೪ ॥

ಅಗ್ನಿಯು ಶ್ರೇಷ್ಠನೂ, ಅತಿಯುವಕನೂ, ಯಾವಾಗಲೂ ಶ್ರೇಷ್ಠವಾದ ಗತಿಯುಳ್ಳವನೂ, ಎಲ್ಲರಿಂದಲೂ ಆಹೂತನಾಗಿರುವವನೂ, ಹವ್ಯದಾತಾರರ ಮೇಲೆ ಪ್ರಸನ್ನನಾಗುವಂಥವನೂ, ಸರ್ವಭೂತಜ್ಞನೂ ಆಗಿರುವನು. ಉಷಃ ಕಾಲದಲ್ಲಿ ದೇವಗಣಾಭಿಮುಖವಾಗಿ ಹೋಗುವದಕ್ಕಾಗಿ ನಾನು ಅವನನ್ನು ಸ್ತುತಿಸುತ್ತೇನೆ. ॥ ೪ ॥

೫೨೨. ಸ್ತವಿಷ್ಯಾಮಿ ತ್ವಾಮಹಂ ವಿಶ್ವಸ್ಯಾಮೃತ ಭೋಜನ ।
ಅಗ್ನೇ ತ್ರಾತಾರಮಮೃತಂ ಮಿಯೇಧ್ಯ ಯಜಿಷ್ಠಂ ಹವ್ಯವಾಹನ ॥ ೫ ॥

ಅಮರನಾಗಿರುವ, ವಿಶ್ವರಕ್ಷಕನಾಗಿರುವ, ಹವ್ಯವಾಹಿಯಾದ ಮತ್ತು ಯಜ್ಞಾರ್ಹನಾದ ಅಗ್ನಿದೇವನೇ! ನೀನು ವಿಶ್ವದ ರಕ್ಷಕನೂ, ಮರಣರಹಿತನೂ, ಯಜ್ಞನಿರ್ವಾಹಕನೂ ಆಗಿರುವೆ. ನಾನು ನಿನ್ನನ್ನು ಸ್ತುತಿಸುತ್ತೇನೆ. ॥ ೫ ॥

## [ವರ್ಗಃ ೨೯]

೫೨೩. ಸುಶಂಸೋ ಬೋಧಿ ಗೃಣತೇ ಯವಿಷ್ಠ್ಯ ಮಧುಜಿಹ್ವಃ ಸ್ವಾಹುತಃ ।
ಪ್ರಸ್ಕಣ್ವಸ್ಯ ಪ್ರತಿರನ್ನಾಯುರ್ಜೀವಸೇ ನಮಸ್ಯಾ ದೈವ್ಯಂ ಜನಂ ॥ ೬ ॥

ಯುವಕನಾದ ಅಗ್ನಿಯೇ! ನೀನು ಸ್ತೋತಾರನ ಸ್ತುತಿಗೆ ಪಾತ್ರನಾಗಿರುವೆ; ನಿನ್ನ ಶಿಖೆಯು ಆನಂದದಾಯಕವಾಗಿರುವದು. ನೀನು ಕರೆಯಲ್ಪಟ್ಟವನಾಗಿ ನಮ್ಮ ಅಭಿಪ್ರಾಯವನ್ನು ತಿಳಿದವನಾಗು. ಪ್ರಸ್ಕಣ್ವನು ಜೀವಿತನಾಗಿರುವಂತೆ ಅವನ ಆಯುಷ್ಯವನ್ನು ಬೆಳಿಸು. ಆ ದೇವಭಕ್ತನಾದ ಮಾನವನನ್ನು ಗೌರವಿಸು. ॥ ೬ ॥

೫೨೪. ಹೋತಾರಂ ವಿಶ್ವವೇದಸಂ ಸಂ ಹಿ ತ್ವಾ ವಿಶ ಇಂಧತೇ ।
ಸ ಆ ವಹ ಪುರುಹೂತ ಪ್ರಚೇತಸೋಽಗ್ನೇ ದೇವಾँ ಇಹ ದ್ರವತ್ ॥ ೭ ॥

ನೀನು ಹೋಮನಿಷ್ಪಾದಕನೂ, ಸರ್ವಜ್ಞನೂ ಆಗಿರುವೆ. ನಿನ್ನನ್ನು ಸಂಸಾರವು ದೀಪ್ತಿಮಂತನನ್ನಾಗಿ ಮಾಡುತ್ತದೆ. ಅಗ್ನಿದೇವನೇ! ನೀನು ಬಹಳ ಮಂದಿಗಳಿಂದ ಆಹೂತನಾಗಿರುವೆ, ಉತ್ಕೃಷ್ಟವಾದ ಜ್ಞಾನವುಳ್ಳ ದೇವತೆಗಳನ್ನು ಶೀಘ್ರವಾಗಿ ಈ ಯಜ್ಞದಲ್ಲಿ ತಕ್ಕೊಂಡು ಬಾರಯ್ಯಾ. ॥ ೭ ॥

೫೨೫. ಸವಿತಾರಮುಷಸಮಶ್ವಿನಾ ಭಗ—ಮಗ್ನಿಂ ವ್ಯುಷ್ಟಿಷು ಕ್ಷಪಃ ।
ಕಣ್ವಾಸಸ್ತ್ವಾ ಸುತಸೋಮಾಸ ಇಂಧತೇ ಹವ್ಯವಾಹಂ ಸ್ವಧ್ವರ ॥ ೮ ॥

ಶೋಭನವಾದ ಯಜ್ಞದಿಂದ ಸಂಯುಕ್ತನಾದ ಅಗ್ನಿಯೇ! ರಾತ್ರಿಯು ಪ್ರಭಾತದಲ್ಲಿ ಪರಿವರ್ತಿತವಾಗುವಾಗ್ಗೆ, ಸವಿತಾ, ಉಷಾ, ಅಶ್ವಿದ್ವಯರು, ಮತ್ತು ಭಗ–ಇವರನ್ನು ಜೊತೆಯಲ್ಲಿ ತಕ್ಕೊಂಡು ಬಾರಯ್ಯಾ. ಹವ್ಯವಾಹಿಯಾದ ಕಣ್ವನ ಜನರು ಸೋಮವನ್ನು ತಯಾರಿಸಿ ನಿನ್ನ ದೀಪ್ತಿಯನ್ನು ಬೆಳಿಸುತ್ತಾರೆ. ॥ ೮ ॥

೫೨೬. ಪತಿರ್ಹ್ಯಧ್ವರಾಣಾ—ಮಗ್ನೇ ದೂತೋ ವಿಶಾಮಸಿ ।
ಉಷರ್ಬುಧ ಆ ವಹ ಸೋಮಪೀತಯೇ ದೇವಾँ ಅದ್ಯ ಸ್ವರ್ದೃಶಃ ॥ ೯ ॥

ಅಗ್ನಿಯೇ! ನೀನು ಜನರ ಯಜ್ಞದ ರಕ್ಷಕನೂ, ದೇವತೆಗಳ ದೂತನೂ ಆಗಿರುವೆ. ಉಷಃಕಾಲದಲ್ಲಿ ಪ್ರಬುದ್ಧರಾದ ಮತ್ತು ಸೂರ್ಯದರ್ಶಿಗಳಾದ ದೇವತೆಗಳನ್ನು ಈ ಹೊತ್ತು ಸೋಮಪಾನದ ಸಲುವಾಗಿ ತಕ್ಕೊಂಡು ಬಾರಯ್ಯಾ. ॥ ೯ ॥

೫೨೭. ಅಗ್ನೇ ಪೂರ್ವಾ ಅನೂಷಸೋ ವಿಭಾವಸೋ ದೀದೇಥ ವಿಶ್ವದರ್ಶತಃ ।
ಅಸಿ ಗ್ರಾಮೇಷ್ವವಿತಾ ಪುರೋಹಿತೋಽಸಿ ಯಜ್ಞೇಷು ಮಾನುಷಃ ॥ ೧೦ ॥

ಪ್ರಭೆಯುಳ್ಳ ಮತ್ತು ಧನಶಾಲಿಯಾದ ಅಗ್ನಿಯೇ! ನೀನು ಎಲ್ಲರಿಗೂ ದರ್ಶನೀಯನಾಗಿರುವೆ. ನೀನು ಪೂರ್ವಗಾಮಿನಿಯಾದ ಉಷೆಯ ನಂತರ ದೀಪ್ತನಾಗು. ನೀನು ಗ್ರಾಮಗಳ ಪಾಲಕನೂ, ಯಜ್ಞಗಳ ಪುರೋಹಿತನೂ, ವೇದಿಕೆಯ ಪೂರ್ವದಿಕ್ಕಿನಲ್ಲಿರುವ ಪುರುಷನೂ ಆಗಿರುವೆ. ॥ ೧೦ ॥

## [ವರ್ಗಃ ೩೦]

೫೨೮. ನಿ ತ್ವಾ ಯಜ್ಞಸ್ಯ ಸಾಧನ—ಮಗ್ನೇ ಹೋತಾರಮೃತ್ವಿಜಂ ।

ಮನುಷ್ವದ್ ದೇವ ಧೀಮಹಿ ಪ್ರಚೇತಸಂ ಜೀರಂ ದೂತಮಮರ್ತ್ಯಂ ॥ ೧೧ ॥

ಅಗ್ನಿದೇವನೇ! ನೀನು ಯಜ್ಞದ ಸಾಧನನಾಗಿರುವೆ, ದೇವತೆಗಳ ಆಹ್ವಾನ ಕಾರಿಯಾದ ಋತ್ವಿಜನಾಗಿರುವೆ, ಶ್ರೇಷ್ಠವಾದ ಜ್ಞಾನದಿಂದ ಸಂಯುಕ್ತನಾಗಿ ರುವೆ, ಶತ್ರುಗಳ ಆಯುರ್ನಾಶಕನಾಗಿರುವೆ, ದೇವತೆಗಳ ದೂತನಾಗಿರುವೆ ಮತ್ತು ಅಮರನಾಗಿರುವೆ. ಮನುವಿನಂತೆ ನಾವು ನಿನ್ನನ್ನು ಯಜ್ಞಸ್ಥಾನದಲ್ಲಿ ಸ್ಥಾಪನ ಮಾಡುತ್ತೇವೆ. ॥ ೧೧ ॥

೫೨೯. ಯದ್ ದೇವಾನಾಂ ಮಿತ್ರಮಹಃ ಪುರೋಹಿತೋ ಽಂತರೋ

ಯಾಸಿ ದೂತ್ಯಂ ।

ಸಿಂಧೋರಿವ ಪ್ರಸ್ವನಿತಾಸ ಊರ್ಮಯೋ ಽಗ್ನೇರ್ಭ್ರಾಜಂತೇ

ಅರ್ಚಯಃ ॥ ೧೨ ॥

ಗೆಳೆಯರನ್ನು ಪೂಜಿಸುವ ಅಗ್ನಿಯೇ! ಯಾವ ಸಮಯದಲ್ಲಿ ಯಜ್ಞದ ಪುರೋಹಿತನ ರೂಪದಲ್ಲಿ ನೀನು ದೇವತೆಗಳ ಯಜ್ಞಕರ್ಮಗಳ ಸಂಪಾದನವನ್ನು ಮಾಡುತ್ತೀಯೋ, ಆ ಕಾಲದಲ್ಲಿ ಸಮುದ್ರದ ಪ್ರಕೃಷ್ಟವಾದ ಧ್ವನಿಯಿಂದ ಸಂಯುಕ್ತವಾದ ತೆರೆಗಳಂತೆ ನಿನ್ನ ಶಿಖೆಗಳು ದೀಪ್ತಿಮಂತವಾಗಿರುತ್ತವೆ. ॥ ೧೨ ॥

೫೩೦. ಶ್ರುಧಿ ಶ್ರುತ್ಕರ್ಣ ವಹ್ನಿಭಿ—ರ್ದೇವೈರಗ್ನೇ ಸಯಾವಭಿಃ ।

ಆ ಸೀದಂತು ಬರ್ಹಿಷಿ ಮಿತ್ರೋ ಅರ್ಯಮಾ

ಪ್ರಾತರ್ಯಾವಾಣೋ ಅಧ್ವರಂ ॥ ೧೩ ॥

ಅಗ್ನಿಯೇ! ನಿನ್ನ ಶ್ರವಣಸಮರ್ಥವಾದ ಕಿವಿಗಳು ನಮ್ಮ ವಚನಗಳನ್ನು ಕೇಳಲಿ. ಮಿತ್ರ, ಅರ್ಯಮಾ ಮತ್ತು ಪ್ರಾತಃಕಾಲದಲ್ಲಿ ಅಥವಾ ದೇವಯಜ್ಞ ದಲ್ಲಿ ಬರುವ ವಹ್ನಿದೇವತೆಗಳು — ಇವರೆಲ್ಲರೊಂದಿಗೆ ಈ ಯಜ್ಞವನ್ನನುಲಕ್ಷಿಸಿ ಕುಶಗಳ ಮೇಲೆ ಕುಳಿತುಕೊಳ್ಳಯ್ಯಾ. ॥ ೧೩ ॥

೫೩೧. ಶೃಣ್ವಂತು ಸ್ತೋಮಂ ಮರುತಃ ಸುದಾನವೋ ಽಗ್ನಿಜಿಹ್ವಾ

ಋತಾವೃಧಃ ।

ಪಿಬತು ಸೋಮಂ ವರುಣೋ ಧೃತವ್ರತೋ ಽಶ್ವಿಭ್ಯಾಮುಷಸಾ
ಸಜೂಃ　　॥ ೧೪ ॥

ಮರುದ್ಗಣವು ದಾನಶೀಲವೂ, ಅಗ್ನಿಜಿಹ್ವವೂ, ಯಜ್ಞವರ್ಧನಕಾರಿಯೂ ಆಗಿರುವದು. ಮಾರುತರು ನಾವು ಮಾಡುವ ಸ್ತೋತ್ರವನ್ನು ಆಲಿಸಲಿ. ಗೃಹೀತ ಕರ್ಮನಾದ ವರುಣನು ಅಶ್ವಿನೀಕುಮಾರರೊಂದಿಗೆ ಮತ್ತು ಉಷಾದೇವಿಯನ್ನು ಕೂಡಿಕೊಂಡು ಸೋಮಪಾನ ಮಾಡಲಿ.　　॥ ೧೪ ॥

## ಸೂಕ್ತ: ೪೫

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಪ್ರಸ್ಕಣ್ವನು; ಛಂದಸ್ಸು: ಅನುಷ್ಟುಪ್.

### [ವರ್ಗ: ೩೧]

೫೩೨. ತ್ವಮಗ್ನೇ ವಸೂಁರಿಹ ರುದ್ರಾಁ ಆದಿತ್ಯಾಁ ಉತ ।
ಯಜಾ ಸ್ವಧ್ವರಂ ಜನಂ ಮನುಜಾತಂ ಘೃತಪ್ರುಷಂ　　॥ ೧ ॥

ಅಗ್ನಿದೇವನೇ! ನೀನು ಈ ಯಜ್ಞದಲ್ಲಿ ವಸುಗಳನ್ನು, ರುದ್ರರನ್ನು ಮತ್ತು ಆದಿತ್ಯರನ್ನು ಪೂಜಿಸು. ಶೋಭನೀಯವಾದ ಯಜ್ಞಗಳಿಂದ ಸಂಯುಕ್ತರಾಗಿರುವ ಮತ್ತು ಅನ್ನದಾತಾರರಾದ ಅನ್ಯ ಮನುಪುತ್ರರಾದ ದೇವತೆಗಳನ್ನೂ ಸಹ ಪೂಜಿಸು.　　॥ ೧ ॥

೫೩೩. ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।
ತಾನ್ ರೋಹಿದಶ್ವ ಗಿರ್ವಣಸ್ ತ್ರಯಸ್ತ್ರಿಂಶತಮಾ ವಹ　　॥ ೨ ॥

ಅಗ್ನಿಯೇ! ಶ್ರೇಷ್ಠವಾದ ಪ್ರಜ್ಞೆಯಿಂದ ಕೂಡಿದವರಾದ ದೇವತೆಗಳು ಹವ್ಯದಾತಾರನಿಗೆ ಫಲಪ್ರದಾನ ಮಾಡುತ್ತಾರೆ. ಅಗ್ನಿಯೇ! ನಿನ್ನ ಹತ್ತಿರ ‹ರೋಹಿತ' ನಾಮಧೇಯವುಳ್ಳ ಕುದುರೆಯಿರುವದು. ನೀನು ಸ್ತುತಿಪಾತ್ರನಾಗಿರುವೆ. ನೀನು ಆ ಮೂವತ್ತುಮೂರು ದೇವತೆಗಳನ್ನು ಇಲ್ಲಿಗೆ ಕರೆದುಕೊಂಡು ಬಾರಯ್ಯಾ.　　॥ ೨ ॥

೫೩೪. ಪ್ರಿಯಮೇಧವದತ್ರಿವಜ್ ಜಾತವೇದೋ ವಿರೂಪವತ್ ।
ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ　　॥ ೩ ॥

ಅಗ್ನಿಯೇ! ನೀನು ಶ್ರೇಷ್ಠವಾದ ಕೆಲಸಗಳನ್ನು ಮಾಡುವಂಥವನೂ, ಸರ್ವಭೂತಜ್ಞನೂ ಆಗಿರುವೆ. ಈ ಮುಂಚೆ ನೀನು ಪ್ರಿಯಮೇಧಾ, ಅತ್ರಿ, ವಿರೂಪ ಮತ್ತು ಅಂಗಿರಾ ಎಂಬ ಋಷಿಗಳ ಆಹ್ವಾನವನ್ನು ಕೇಳಿರುತ್ತೀ; ಅದೇ ಪ್ರಕಾರವಾಗಿ ಪ್ರಸ್ಕಣ್ವನ ಆಹ್ವಾನವನ್ನೂ ಕೂಡ ಕೇಳಯ್ಯಾ.　　॥ ೩ ॥

೫೩೫. ಮಹಿಕೇರವ ಊತಯೇ ಪ್ರಿಯಮೇಧಾ ಅಹೂಷತ ।
ರಾಜಂತಮಧ್ವರಾಣಾ—ಮಗ್ನಿಂ ಶುಕ್ರೇಣ ಶೋಚಿಷಾ ॥ ೪ ॥

ಯಜ್ಞಗಳ ನಡುವೆ, ತನ್ನ ವಿಶುದ್ಧವಾದ ಪ್ರಕಾಶದಿಂದ, ಅಗ್ನಿಯು ಪ್ರಕಾಶಮಾನನಾಗಿರುವನು. ಪ್ರೌಢಕರ್ಮಿಗಳಾದ ಪ್ರಿಯಮೇಧಾ ಜನರು, ತಮ್ಮ ರಕ್ಷಣೆಗಾಗಿ, ಅಗ್ನಿಯನ್ನು ಆಹ್ವಾನಿಸಿದ್ದರು. ॥ ೪ ॥

೫೩೬. ಘೃತಾಹವನ ಸಂತ್ಯೇ—ಮಾ ಉ ಷು ಶ್ರುಧೀ ಗಿರಃ ।
ಯಾಭಿಃ ಕಣ್ವಸ್ಯ ಸೂನವೋ ಹವಂತೇಽವಸೇ ತ್ವಾ ॥ ೫ ॥

ಕಣ್ವನ ಪುತ್ರರು, ತಮ್ಮ ರಕ್ಷಣೆಗಾಗಿ, ಯಾವ ಸ್ತುತಿಯಿಂದ ನಿನ್ನನ್ನು ಆಹ್ವಾನಿಸುವರೋ, ಘೃತಾಹುತಿಫಲದನಾದ ಅಗ್ನಿಯೇ! ಆ ಎಲ್ಲ ಸ್ತುತಿಯನ್ನು ನೀನು ಕೇಳಯ್ಯಾ. ॥ ೫ ॥

## [ವರ್ಗಃ ೩೨]

೫೩೭. ತ್ವಾಂ ಚಿತ್ರಶ್ರವಸ್ತಮ ಹವಂತೇ ವಿಕ್ಷು ಜಂತವಃ ।
ಶೋಚಿಷ್ಕೇಶಂ ಪುರುಪ್ರಿಯಾ—ಽಗ್ನೇ ಹವ್ಯಾಯ ವೋಳ್ಹವೇ ॥ ೬ ॥

ಅಗ್ನಿದೇವನೇ! ನೀನು ಯಥೇಷ್ಟವಾದ ಮತ್ತು ವಿವಿಧ ಪ್ರಕಾರದ ಅನ್ನಗಳಿಂದ ಯುಕ್ತನಾಗಿರುವೆ; ಅದೂ ಅಲ್ಲದೆ ನೀನು ಬಹುಜನಕ್ಕೆ ಪ್ರಿಯನಾಗಿರುವೆ. ನಿನಗೆ ದೀಪ್ತಿರೂಪಿನ ಕೂದಲುಗಳಿರುವವು. ಮನುಷ್ಯರು ನಿನ್ನನ್ನು ಹವ್ಯದ ವಹನಕ್ಕಾಗಿ ಕರೆಯುತ್ತಾರೆ. ॥ ೬ ॥

೫೩೮. ನಿ ತ್ವಾ ಹೋತಾರಮೃತ್ವಿಜಂ ದಧಿರೇ ವಸುವಿತ್ತಮಂ ।
ಶ್ರುತ್ಕರ್ಣಂ ಸಪ್ರಥಸ್ತಮಂ ವಿಪ್ರಾ ಅಗ್ನೇ ದಿವಿಷ್ಟಿಷು ॥ ೭ ॥

ಅಗ್ನಿಯೇ! ನೀನು ಆಹ್ವಾನಕಾರಿಯೂ, ಋತ್ವಿಜನೂ, ಬಹುಧನದಾತಾರನೂ ಆಗಿರುವೆ. ನಿನ್ನ ಕಿವಿಗಳು ಕೇಳಲು ಸಮರ್ಥವಾಗಿರುತ್ತವೆ. ನಿನ್ನ ಪ್ರಸಿದ್ಧಿಯು ಬಹುದೂರದ ವರೆಗೆ ವ್ಯಾಪಿಸಿರುವದು. ಮೇಧಾವಿಗಳು ಯಜ್ಞದಲ್ಲಿ ನಿನ್ನನ್ನು ಸ್ಥಾಪಿಸಿರುತ್ತಾರೆ. ॥ ೭ ॥

೫೩೯. ಆ ತ್ವಾ ವಿಪ್ರಾ ಅಚುಚ್ಯವುಃ ಸುತಸೋಮಾ ಅಭಿ ಪ್ರಯಃ ।
ಬೃಹದ್ ಭಾ ಬಿಭ್ರತೋ ಹವಿ—ರಗ್ನೇ ಮರ್ತಾಯ ದಾಶುಷೇ ॥ ೮ ॥

ಅಗ್ನಿಯೇ! ಹವ್ಯದಾತಾರನ ಸಲುವಾಗಿ ಹವ್ಯಧಾರಣಮಾಡಿ ಮತ್ತು ಸೋಮರಸವನ್ನು ತಯಾರಿಸಿ ಮೇಧಾವಿಗಳಾದ ಋತ್ವಿಜರು ಅನ್ನದ ಹತ್ತರ ನಿನ್ನನ್ನು ಆಹ್ವಾನಿಸುತ್ತಾರೆ. ನೀನೂ ದೊಡ್ಡವನೂ, ಪ್ರಭಾಶಾಲಿಯೂ ಆಗಿರುವೆ. ॥ ೮ ॥

೫೪೦. ಪ್ರಾತರ್ಯಾವ್ಣಃ ಸಹಸ್ಕೃತ ಸೋಮಪೇಯಾಯ ಸಂತ್ಯ ।
ಇಹಾದ್ಯ ದೈವ್ಯಂ ಜನಂ ಬರ್ಹಿರಾ ಸಾದಯಾ ವಸೋ ॥ ೯ ॥

ಅಗ್ನಿಯೇ! ನೀನು ಕಟ್ಟಿಗೆಯ ಬಲದಿಂದ ಘರ್ಷಿತನಾಗಿ ಉತ್ಪನ್ನನಾಗಿರುವೆ. ನೀನು ಇಷ್ಟಫಲಗಳ ದಾತಾರನೂ, ನಿವಾಸಕ್ಕೆ ಕಾರಣನೂ ಆಗಿರುವೆ. ಈ ಹೊತ್ತು ಈ ಸ್ಥಳದ ಮೇಲೆ ಪ್ರಾತರಾಗಮನ ಮಾಡುವ ದೇವತೆಗಳನ್ನೂ, ಅನ್ಯ ದೇವತೆಗಳನ್ನೂ, ಸೋಮಪಾನದ ಸಲುವಾಗಿ, ಕುಶಗಳ ಮೇಲೆ ಆಮಂತ್ರಿಸಯ್ಯಾ. ॥ ೯ ॥

೫೪೧. ಅರ್ವಾಂಚಂ ದೈವ್ಯಂ ಜನ—ಮಗ್ನೇ ಯಕ್ಷ್ವ ಸಹೂತಿಭಿಃ ।
ಅಯಂ ಸೋಮಃ ಸುದಾನವಸ್ ತಂ ಪಾತ ತಿರೋ ಅಹ್ನ್ಯಂ ॥ ೧೦ ॥

ಅಗ್ನಿಯೇ! ಸಮ್ಮುಖದಲ್ಲಿದ್ದ ದೇವರೂಪ ಪ್ರಾಣಿಗಳನ್ನು, ಬೇರೆ ದೇವತೆಗಳೊಂದಿಗೆ, ಸಮಾನವಾದ ಆಹ್ವಾನದಿಂದ ಯಜಿಸಯ್ಯಾ. ದಾನಶೀಲರಾದ ದೇವತೆಗಳೇ! ನಿಮ್ಮ ಸಲುವಾಗಿ ಈ ಸೋಮವು ನಿನ್ನೆಯೇ ಸಿದ್ಧಮಾಡಲ್ಪಟ್ಟಿರುವದು; ಇದನ್ನು ಕುಡಿಯಿರಿ. ॥ ೧೦ ॥

## ಸೂಕ್ತ: ೪೬

ಈ ಸೂಕ್ತದ ದೇವತೆ: ಅಶ್ವಿನೀಕುಮಾರದ್ವಯರು; ಋಷಿ: ಪ್ರಸ್ಕಣ್ವನು;
ಛಂದಸ್ಸು: ಗಾಯತ್ರೀ.

### [ವರ್ಗ: ೩೩]

೫೪೨. ಏಷೋ ಉಷಾ ಅಪೂರ್ವ್ಯಾ ವ್ಯುಚ್ಛತಿ ಪ್ರಿಯಾ ದಿವಃ ।
ಸ್ತುಷೇ ವಾಮಶ್ವಿನಾ ಬೃಹತ್ ॥ ೧ ॥

ಪ್ರಿಯೆಯಾದ ಉಷೆಯು ಇದಕ್ಕೂ ಮುಂಚೆ ಕಾಣಿಸಿಕೊಳ್ಳಲಿಲ್ಲ. ಈ ಉಷೆಯು ಆಕಾಶದಿಂದ ಅಂಧಕಾರವನ್ನು ದೂರ ಮಾಡುತ್ತಾಳೆ. ಅಶ್ವಿನೀ ಕುಮಾರರೇ! ನಾನು ಅತಿಶಯವಾಗಿ ನಿಮ್ಮನ್ನು ಸ್ತುತಿಸುತ್ತೇನೆ. ॥ ೧ ॥

೫೪೩. ಯಾ ದಸ್ರಾ ಸಿಂಧುಮಾತರಾ ಮನೋತರಾ ರಯೀಣಾಂ ।
ಧಿಯಾ ದೇವಾ ವಸುವಿದಾ ॥ ೨ ॥

ಯಾವ ದರ್ಶನೀಯ ಸಮುದ್ರಪುತ್ರರಾದ ದೇವದ್ವಯರು ಅಥವಾ ಅಶ್ವಿದ್ವಯರು ಮನೋಹರರಾಗಿರುವರೋ, ಯಾರು ಅನ್ನವನ್ನು ವಿಪುಲವಾಗಿ ದಾನ ಮಾಡುತ್ತಾರೋ ಮತ್ತು ಯಾರು, ನಾವು ಯಜ್ಞಮಾಡಿದ ಮೇಲೆ, ನಿವಾಸ ಸ್ಥಾನವನ್ನು ಕಲ್ಪಿಸಿಕೊಡುವರೋ, ಅಂಥ ಅಶ್ವಿನೀಕುಮಾರರನ್ನು ನಾನು ಸ್ತುತಿಸುತ್ತೇನೆ. ॥ ೨ ॥

೫೪೪. ವಚ್ಯಂತೇ ವಾಂ ಕಕುಹಾಸೋ ಜೂರ್ಣಾಯಾಮಧಿ ವಿಷ್ಟಪಿ ।
ಯದ್ ವಾಂ ರಥೋ ವಿಭಿಷ್ಪತಾತ್ ॥ ೩ ॥

ಅಶ್ವಿನೀಕುಮಾರದ್ವಯರೇ! ಯಾವ ಸಮಯದಲ್ಲಿ ನಿಮ್ಮ ಪ್ರಶಂಸಿತವಾದ ರಥವು ಕುದುರೆಗಳಿಂದ ಎಳೆಯಲ್ಪಟ್ಟು ಸ್ವರ್ಗದಲ್ಲಿ ಸಂಚಲಿಸುವದೋ, ಆ ಹೊತ್ತಿನಲ್ಲಿ ನಾವು ನಿಮ್ಮ ಸ್ತುತಿಯನ್ನು ಮಾಡುತ್ತೇವೆ. ॥ ೩ ॥

೫೪೫. ಹವಿಷಾ ಜಾರೋ ಅಪಾಂ ಪಿಪರ್ತಿ ಪಪುರಿರ್ನರಾ ।
ಪಿತಾ ಕುಟಸ್ಯ ಚರ್ಷಣಿಃ ॥ ೪ ॥

ನೇತೃಸ್ಥಾನೀಯರಾದ ಅಶ್ವಿದ್ವಯರೇ! ಪೂರಕನಾದ, ಪಾಲಕನಾದ, ಯಜ್ಞದರ್ಶಕನಾದ ಮತ್ತು ಜಲಶೋಷಕನಾದ ಸವಿತಾರನು ನಾವು ಅರ್ಪಿಸಿದ ಹವ್ಯಗಳಿಂದ ದೇವತೆಗಳನ್ನು ಪ್ರಸನ್ನಗೊಳಿಸಲಿ. ॥ ೪ ॥

೫೪೬. ಆದಾರೋ ವಾಂ ಮತೀನಾಂ ನಾಸತ್ಯಾ ಮತವಚಸಾ ।
ಪಾತಂ ಸೋಮಸ್ಯ ಧೃಷ್ಣುಯಾ ॥ ೫ ॥

ನಾಸತ್ಯದ್ವಯರೇ! ನಮ್ಮ ಪ್ರಿಯವಾದ ಸ್ತುತಿಯನ್ನು ಗ್ರಹಿಸಿಕೊಂಡು ಬುದ್ಧಿಪರಿಚಾಲಕವಾದ ತೀವ್ರ ಸೋಮರಸದ ಪಾನಮಾಡಿರಿ. ॥ ೫ ॥

## [ವರ್ಗಃ ೩೪]

೫೪೭. ಯಾ ನಃ ಪೀಪರದಶ್ವಿನಾ ಜ್ಯೋತಿಷ್ಮತೀ ತಮಸ್ತಿರಃ ।
ತಾಮಸ್ಮೇ ರಾಸಾಥಾಮಿಷಂ ॥ ೬ ॥

ಅಶ್ವಿದ್ವಯರೇ! ಯಾವ ಜ್ಯೋತಿಷ್ಕವಾದ ಅನ್ನವು ಅಂಧಕಾರವನ್ನು ನಾಶಗೊಳಿಸಿ, ನಮಗೆ ತೃಪ್ತಿಯನ್ನು ಕೊಡುವದೋ, ಅಂಥ ಅನ್ನವನ್ನು ನಮಗೆ ಅನುಗ್ರಹಿಸಿರಿ. ॥ ೬ ॥

೫೪೮. ಆ ನೋ ನಾವಾ ಮತೀನಾಂ ಯಾತಂ ಪಾರಾಯ ಗಂತವೇ ।
ಯುಂಜಾಥಾಮಶ್ವಿನಾ ರಥಂ ॥ ೭ ॥

ಅಶ್ವಿದ್ವಯರೇ! ಸ್ತುತಿಸಮುದ್ರದ ಆಚೆಯ ಬದಿಗೆ ಹೋಗುವದಕ್ಕಾಗಿ ನೌಕಾರೂಪಿನವರಾಗಿ ಬನ್ನಿರಿ. ನಮ್ಮ ಸಮ್ಮುಖದಲ್ಲಿಯೇ ನಿಮ್ಮ ರಥಕ್ಕೆ ಅಶ್ವಗಳನ್ನು ಸಂಯೋಜಿಸಿರಿ. ॥ ೭ ॥

೫೪೯. ಅರಿತ್ರಂ ವಾಂ ದಿವಸ್ಪೃಥು ತೀರ್ಥೇ ಸಿಂಧೂನಾಂ ರಥಃ ।
ಧಿಯಾ ಯುಯುಜ್ರ ಇಂದವಃ ॥ ೮ ॥

ಸಮುದ್ರದ ತೀರದ ಮೇಲೆ ಆಕಾಶಕ್ಕಿಂತಲೂ ದೊಡ್ಡದಾದ ನಿಮ್ಮ ನೌಕಾರೂಪಿನ ಯಾನವಿರುವದು. ಪೃಥಿವಿಯ ಮೇಲೆ ನಿಮ್ಮ ರಥವಿರುವದು. ನಿಮ್ಮ ಯಜ್ಞಕರ್ಮದಲ್ಲಿ ಸೋಮರಸವಾದರೂ ಸಮ್ಮಿಲಿತವಾಗಿರುವದು. ॥ ೮ ॥

೫೫೦. ದಿವಸ್ಕಣ್ವಾಸ ಇಂದವೋ ವಸು ಸಿಂಧೂನಾಂ ಪದೇ ।
ಸ್ವಂ ವವ್ರಿಂ ಕುಹ ಧಿತ್ಸಥಃ ॥ ೯ ॥

ಕಣ್ವವಂಶಿಗಳೇ! ಅಶ್ವಿದ್ವಯರ ಜಿಜ್ಞಾಸೆಯನ್ನು ಮಾಡಿರಿ. ದ್ಯುಲೋಕದಿಂದ ಸೂರ್ಯಕಿರಣಗಳು ಬರುತ್ತಿವೆ. ವೃಷ್ಟಿಯ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ ನಮ್ಮ ನಿವಾಸಹೇತುವಾದ ಜ್ಯೋತಿಯ ಪ್ರಾದುರ್ಭವವಾಗುವದು. ಅಶ್ವಿನೀಕುಮಾರದ್ವಯರೇ! ಈ ಸ್ಥಾನಗಳೊಳಗಿಂದ ಯಾವ ಸ್ಥಾನದಲ್ಲಿ ನೀವು ನಿಮ್ಮ ಸ್ವರೂಪವನ್ನು ಸ್ಥಾಪಿಸಲು ಇಚ್ಛಿಸುವಿರಿ? ॥ ೯ ॥

೫೫೧. ಅಭೂದು ಭಾ ಉ ಅಂಶವೇ ಹಿರಣ್ಯಂ ಪ್ರತಿ ಸೂರ್ಯಃ ।
ವ್ಯಖ್ಯಜ್ಜಿಹ್ವಯಾಸಿತಃ ॥ ೧೦ ॥

ಸೂರ್ಯರಶ್ಮಿಗಳಿಂದ ಉಷಃಕಾಲದ ಆಲೋಕವು ಉತ್ಪನ್ನವಾಗಿರುವದು. ಸೂರ್ಯನು ಉದಿತನಾಗಿ ಹಿರಣ್ಯಕ್ಕೆ ಸಮಾನನಾಗಿರುವನು. ಸೂರ್ಯನ ಮಧ್ಯದಲ್ಲಿ ಹೋದದ್ದರಿಂದ ಅಗ್ನಿಯು ಕೃಷ್ಣವರ್ಣದವನಾಗಿ ತನ್ನ ಶಿಖೆಯಿಂದ ಪ್ರಕಾಶವನ್ನು ದೊರಕಿಸಿರುತ್ತಾನೆ. ॥ ೧೦ ॥

## [ವರ್ಗಃ ೩೫]

೫೫೨. ಅಭೂದು ಪಾರಮೇತವೇ ಪಂಥಾ ಋತಸ್ಯ ಸಾಧುಯಾ ।
ಅದರ್ಶಿ ವಿ ಸ್ರುತಿರ್ದಿವಃ ॥ ೧೧ ॥

ರಾತ್ರಿಯ ಆಚೆಯ ಬದಿಗೆ ಹೋಗುವದಕ್ಕಾಗಿ, ಸೂರ್ಯನಿಗಾಗಿ ಸುಂದರವಾದ ಮಾರ್ಗವು ನಿರ್ಮಿತವಾಗಿದೆ. ಸೂರ್ಯನ ವಿಸ್ತ್ರತವಾದ ದೀಪ್ತಿಯು ಕಾಣುತ್ತಿದೆ. ॥ ೧೧ ॥

೫೫೩. ತತ್ತದಿದಶ್ವಿನೋರವೋ ಜರಿತಾ ಪ್ರತಿ ಭೂಷತಿ ।
ಮದೇ ಸೋಮಸ್ಯ ಪಿಪ್ರತೋಃ ॥ ೧೨ ॥

ಅಶ್ವಿದ್ವಯರು ಪ್ರಸನ್ನತೆಗಾಗಿ ಸೋಮಪಾನಮಾಡುವರು. ಸ್ತೋತಾರರು ತಿರುಗಿ-ತಿರುಗಿ ಅವರ ರಕ್ಷಣ-ಕಾರ್ಯದ ಪ್ರಶಂಸೆಯನ್ನು ಮಾಡುತ್ತಾರೆ. ॥ ೧೨ ॥

೫೫೪. ವಾವಸಾನಾ ವಿವಸ್ವತಿ ಸೋಮಸ್ಯ ಪೀತ್ಯಾ ಗಿರಾ ।
ಮನುಷ್ವಚ್ಛಂಭೂ ಆ ಗತಂ ॥ ೧೩ ॥

ಸುಖವನ್ನು ಕೊಡುವ ಅಶ್ವಿದ್ವಯರೇ! ಮನುವಿನಂತೆ ನಿಮ್ಮನ್ನು ಸೇವಿಸುವ ಯಜಮಾನನ ಮನೆಯಲ್ಲಿ ನಿವಾಸಶೀಲರಾಗಿ ನೀವು ಸೋಮಪಾನ ಮತ್ತು ಸ್ತುತಿಶ್ರವಣಗಳಿಗಾಗಿ ಬನ್ನಿರಿ. ॥ ೧೩ ॥

೫೫೫. ಯುವೋರುಷಾ ಅನು ಶ್ರಿಯಂ ಪರಿಜ್ಮನೋರುಪಾಚರತ್ ।
ಋತಾ ವನಥೋ ಅಕ್ತುಭಿಃ ॥ ೧೪ ॥

ಅಶ್ವಿದ್ವಯರೇ! ನೀವು ನಾಲ್ಕೂ ದಿಕ್ಕುಗಳಲ್ಲಿ ಸಂಚರಿಸುತ್ತೀರಿ. ನಿಮ್ಮ ಶೋಭೆಯನ್ನು ಹಿಂಬಾಲಿಸಿ ಉಷೆಯು ಆಗಮನ ಮಾಡಲಿ. ರಾತ್ರಿಯಲ್ಲಿ ಸಂಪಾದಿತವಾದ ಯಜ್ಞದ ಹವ್ಯವನ್ನು ನೀವು ಸ್ವೀಕರಿಸುತ್ತೀರಿ. ॥ ೧೪ ॥

೫೫೬. ಉಭಾ ಪಿಬತಮಶ್ವಿನೋಭಾ ನಃ ಶರ್ಮ ಯಚ್ಛತಂ ।
ಅವಿದ್ರಿಯಾಭಿರೂತಿಭಿಃ ॥ ೧೫ ॥

ಅಶ್ವಿದ್ವಯರೇ! ನೀವಿಬ್ಬರೂ ಸೋಮರಸಪಾನವನ್ನು ಮಾಡಿರಿ. ನೀವಿಬ್ಬರೂ ಪ್ರಶಸ್ತವಾದ ರಕ್ಷಣೆಯಿಂದ ನಮಗೆ ಸುಖದಾನ ಮಾಡಿರಿ. ॥ ೧೫ ॥

ಮೂರನೆಯ ಅಧ್ಯಾಯವು ಮುಗಿದುದು

---

# ನಾಲ್ಕನೆಯ ಅಧ್ಯಾಯವು

## ಸೂಕ್ತ: ೪೭

ಈ ಸೂಕ್ತದ ದೇವತೆ: ಅಶ್ವಿದ್ವಯರು; ಋಷಿ: ಪ್ರಸ್ಕಣ್ವನು; ಛಂದಸ್ಸು: ಬೃಹತೀ.

### [ವರ್ಗ: ೧]

೫೫೭. ಅಯಂ ವಾಂ ಮಧುಮತ್ತಮಃ ಸುತಃ ಸೋಮ ಋತಾವೃಧಾ ।
ತಮಶ್ವಿನಾ ಪಿಬತಂ ತಿರೋಅಹ್ನ್ಯಂ ಧತ್ತಂ ರತ್ನಾನಿ ದಾಶುಷೇ ॥ ೧ ॥

ಯಜ್ಞವರ್ಧನಕಾರಿಗಳಾದ ಅಶ್ವಿದ್ವಯರೇ! ಈ ಅತೀವ ಮಧುರವಾದ ಸೋಮರಸವು ನಿಮ್ಮ ಸಲುವಾಗಿಯೇ ಅಭಿಷುತವಾಗಿರುವದು. ನಿನ್ನೆಯೇ ತಯಾರಿಸಲ್ಪಟ್ಟ ಈ ಸೋಮರಸವನ್ನು ಪಾನ ಮಾಡಿರಿ; ಮತ್ತು ಹವ್ಯದಾತಾರನಾದ ಯಜಮಾನನಿಗೆ ರಮಣೀಯವಾದ ರತ್ನಗಳನ್ನು ಅನುಗ್ರಹಿಸಿರಿ. ॥ ೧ ॥

೫೫೮. ತ್ರಿವಂಧುರೇಣ ತ್ರಿವೃತಾ ಸುಪೇಶಸಾ ರಥೇನಾ ಯಾತಮಶ್ವಿನಾ ।
ಕಣ್ವಾಸೋ ವಾಂ ಬ್ರಹ್ಮ ಕೃಣ್ವಂತ್ಯಧ್ವರೇ ತೇಷಾಂ
ಸು ಶೃಣುತಂ ಹವಂ ॥ ೨ ॥

ಅಶ್ವಿದ್ವಯರೇ! ನಿಮ್ಮ ತ್ರಿವಿಧ ಬಂಧನಕಾಷ್ಟಗಳಿಂದ ಸಂಯುಕ್ತವಾದ, ತ್ರಿಕೋಣ ಅಥವಾ ಲೋಕತ್ರಯದಲ್ಲಿ ವರ್ತಮಾನವಾದ ಮತ್ತು ಸುರೂಪವಾದ ರಥದಲ್ಲಿ ಬನ್ನಿರಿ. ಕಣ್ವಪುತ್ರರು ಅಥವಾ ಮೇಧಾವಿಗಳಾದ ಋತ್ವಿಜರು ನಿಮ್ಮ ಸಲುವಾಗಿಯೇ ಸ್ತೋತ್ರಪಾಠವನ್ನು ಮಾಡುತ್ತಿರುವರು. ಅವರ ಆದರಪೂರ್ವಕವಾದ ಆಹ್ವಾನವನ್ನು ಕೇಳಿರಿ. ॥ ೨ ॥

೫೫೯. ಅಶ್ವಿನಾ ಮಧುಮತ್ತಮಂ ಪಾತಂ ಸೋಮಮೃತಾವೃಧಾ ।
ಅಥಾದ್ಯ ದಸ್ರಾ ವಸು ಬಿಭ್ರತಾ ರಥೇ ದಾಶ್ವಾಂಸಮುಪ ಗಚ್ಛತಂ ॥ ೩ ॥

ಯಜ್ಞವನ್ನು ವರ್ಧಿಸುವ ಅಶ್ವಿದ್ವಯರೇ! ಅತ್ಯಂತ ಮಧುರವಾದ ಸೋಮರಸವನ್ನು ಪಾನಮಾಡಿರಿ. ಅದರ ತರುವಾಯ ಅಶ್ವಿದ್ವಯರೇ! ಈ ಹೊತ್ತು ರಥದಲ್ಲಿ ಧನವನ್ನು ತಂದು ಹವ್ಯದಾತಾರನಾದ ಯಜಮಾನನ ಬಳಿಗೆ ಗಮನಮಾಡಿರಿ. ॥ ೩ ॥

೫೬೦. ತ್ರಿಷಧಸ್ಥೇ ಬರ್ಹಿಷಿ ವಿಶ್ವವೇದಸಾ ಮಧ್ವಾ ಯಜ್ಞಂ ಮಿಮಿಕ್ಷತಂ ।
ಕಣ್ವಾಸೋ ವಾಂ ಸುತಸೋಮಾ ಅಭಿದ್ಯವೋ ಯುವಾಂ ಹವಂತೇ
ಅಶ್ವಿನಾ ॥ ೪ ॥

ಎಲ್ಲವನ್ನೂ ಬಲ್ಲವರಾದ ಅಶ್ವಿದ್ವಯರೇ! ಮೂರು ಸ್ಥಾನಗಳಲ್ಲಿ ಅವಸ್ಥಿತವಾದ ಕುಶಗಳ ಮೇಲೆ ಸ್ಥಿತರಾಗಿ ಮಧುರವಾದ ರಸದಿಂದ ಯಜ್ಞವನ್ನು ಸಿಕ್ತಗೊಳಿಸಿರಿ. ಅಶ್ವಿದ್ವಯರೇ! ದೀಪ್ತಿಮಂತನಾದ ಕಣ್ವಪುತ್ರರು ಸೋಮರಸವನ್ನು ಸಿದ್ಧಗೊಳಿಸಿ ನಿಮ್ಮನ್ನು ಆಹ್ವಾನಿಸುತ್ತಾರೆ. ॥ ೪ ॥

೫೬೧. ಯಾಭಿಃ ಕಣ್ವಮಭಿಷ್ಟಿಭಿಃ ಪ್ರಾವತಂ ಯುವಮಶ್ವಿನಾ ।
ತಾಭಿಃ ಷ್ವ೧ಸ್ಮಾ ಅವತಂ ಶುಭಸ್ಪತೀ ಪಾತಂ ಸೋಮಮೃತಾವೃಧಾ ॥ ೫ ॥

ಅಶ್ವಿದ್ವಯರೇ! ಯಾವ ಅಭೀಷ್ಟವಾದ ರಕ್ಷಣಾಕಾರ್ಯದಿಂದ ನೀವಿಬ್ಬರೂ ಕಣ್ವನನ್ನು ಕಾಪಾಡಿದಿರೋ, ಅದೇ ಕಾರ್ಯದಿಂದ ನಮ್ಮನ್ನಾದರೂ ಕಾಪಾಡಿರಿ. ಯಜ್ಞವರ್ಧಕರೇ! ಸೋಮಪಾನ ಮಾಡಿರಿ. ॥ ೫ ॥

## [ವರ್ಗಃ ೨]

೫೬೨. ಸುದಾಸೇ ದಸ್ರಾ ವಸು ಬಿಭ್ರತಾ ರಥೇ ಪೃಕ್ಷೋ ವಹತಮಶ್ವಿನಾ ।
ರಯಿಂ ಸಮುದ್ರಾದುತ ವಾ ದಿವಸ್ಪರ್ಯ—ಸ್ಮೇ ಧತ್ತಂ ಪುರುಸ್ಪೃಹಂ ॥ ೬ ॥

ಅಶ್ವಿನೀಕುಮಾರದ್ವಯರೇ! ದಾನಶೀಲ ಅರಸನಾದ ಪಿಜವನ ಪುತ್ರ ಸುದಾಸನಿಗಾಗಿ ಯುದ್ಧದಲ್ಲಿ ಧನದ ಧಾರಣ ಮತ್ತು ಅನ್ನದ ವಹನ—ಇವುಗಳನ್ನು ಸಾಂಗವಾಗಿ ಮಾಡಿದ್ದೀರಿ. ಅದೇ ರೀತಿಯಲ್ಲಿ ಆಕಾಶದಿಂದ ಅನೇಕ ಜನರಿಂದ ವಾಂಛನೀಯವಾದ ಧನವನ್ನು ನಮಗೆ ದಯೆಪಾಲಿಸಿರಿ. ॥ ೬ ॥

೫೬೩. ಯನ್ನಾಸತ್ಯಾ ಪರಾವತಿ ಯದ್ ವಾ ಸ್ಥೋ ಅಧಿ ತುರ್ವಶೇ ।
ಅತೋ ರಥೇನ ಸುವೃತಾ ನ ಆ ಗತಂ ಸಾಕಂ ಸೂರ್ಯಸ್ಯ ರಶ್ಮಿಭಿಃ ॥ ೭ ॥

ನಾಸತ್ಯದ್ವಯರೇ! ನಿಮ್ಮ ಇಚ್ಛೆಯಿದ್ದಂತೆ, ಬೇಕಾದರೆ ನಮ್ಮ ಹತ್ತಿರವೇ ಅಥವಾ ಬೇಕಾದರೆ ದೂರದಲ್ಲಿ ವಾಸಮಾಡಿರಿ; ಆದರೆ ಸೂರ್ಯೋದಯಕಾಲದಲ್ಲಿ ಮಾತ್ರ ಸೂರ್ಯನ ಕಿರಣಗಳೊಂದಿಗೆ ನಿಮ್ಮ ಸುನಿರ್ಮಿತವಾದ ರಥದ ಮೇಲೆ ಆಸೀನರಾಗಿ ನಮ್ಮ ಬಳಿಗೆ ಬನ್ನಿರಿ. ॥ ೭ ॥

೫೬೪. ಅರ್ವಾಂಚಾ ವಾಂ ಸಪ್ತಯೋಽಧ್ವರಶ್ರಿಯೋ ವಹಂತು ಸವನೇದುಪ ।
ಇಷಂ ಪೃಂಚಂತಾ ಸುಕೃತೇ ಸುದಾನವ ಆ ಬರ್ಹಿಃ ಸೀದತಂ ನರಾ ॥ ೮ ॥

ನೀವು ಸದಾ ಯಜ್ಞಸೇವಿಯಾಗಿರುವಿರಿ. ನಿಮ್ಮ ಸಪ್ತಾಶ್ವಗಳು ನಿಮ್ಮನ್ನು ಸಮೀಪದಲ್ಲಿ ತಂದು ಸವನಯಜ್ಞವು ಜರಗುವಲ್ಲಿ ಸಾಗಿಸಲಿ. ನೇತೃಸ್ಥಾನೀಯರಾದ ಅಶ್ವಿದ್ವಯರೇ! ಶುಭವಾದ ಕೆಲಸಗಳನ್ನು ಮಾಡುವ ಮತ್ತು ದಾನಶೀಲನಾಗಿರುವ ಯಜಮಾನನಿಗೆ ಅನ್ನವನ್ನು ದಾನಮಾಡಿ, ನೀವು ಕುಶಗಳ ಮೇಲೆ ಆಸೀನರಾಗಿರಿ. ॥ ೮ ॥

೫೬೫. ತೇನ ನಾಸತ್ಯಾ ಗತಂ ರಥೇನ ಸೂರ್ಯತ್ವಚಾ ।
ಯೇನ ಶಶ್ವದೂಹಥುರ್ದಾಶುಷೇ ವಸು ಮಧ್ವಃ ಸೋಮಸ್ಯ
ಪೀತಯೇ ॥ ೯ ॥

ಅಶ್ವಿದ್ವಯರೇ! ನೀವು ಯಾವ ರಥದಲ್ಲಿ ಧನವನ್ನು ತಂದು ಹವ್ಯದಾತಾರನಿಗೆ ಸದಾ ದಾನಮಾಡಿರುವಿರೋ, ಅದೇ ಸೂರ್ಯಕಿರಣಗಳಿಂದ ಬಲಿತವಾದ ರಥದ ಮೇಲೆ ಆಸೀನರಾಗಿ ಮಧುರವಾದ ಸೋಮಪಾನದ ಸಲುವಾಗಿ ಬನ್ನಿರಿ. ॥ ೯ ॥

೫೬೬. ಉಕ್ಥೇಭಿರರ್ವಾಗವಸೇ ಪುರೂವಸೂ ಅರ್ಕೈಶ್ಚ ನಿ ಹ್ವಯಾಮಹೇ ।
ಶಶ್ವತ್ ಕಣ್ವಾನಾಂ ಸದಸಿ ಪ್ರಿಯೇ ಹಿ ಕಂ ಸೋಮಂ
ಪಪಥುರಶ್ವಿನಾ ॥ ೧೦ ॥

ನಾವು ನಮ್ಮ ರಕ್ಷಣೆಗಾಗಿ ಉಕ್ಥ ಮತ್ತು ಸ್ತೋತ್ರಗಳಿಂದ ಅಶ್ವಿದ್ವಯರನ್ನು ನಮ್ಮ ಹತ್ತರ ಕರೆಯುತ್ತೇವೆ. ಅಶ್ವಿದ್ವಯರೇ! ಕಣ್ವಪುತ್ರರಿಗೆ ಅಥವಾ ಮೇಧಾವಿಗಳಾದ ಋತ್ವಿಜರಿಗೆ ಪ್ರಿಯವಾದ ಸದಸ್ಸಿನಲ್ಲಿ ನೀವು ಸದಾ ಸೋಮಪಾನವನ್ನು ಮಾಡಿರುವಿರಲ್ಲವೇ? ॥ ೧೦ ॥

## ಸೂಕ್ತ: ೪೮

ಈ ಸೂಕ್ತದ ದೇವತೆ: ಉಷಾ; ಋಷಿ: ಪ್ರಸ್ಕಣ್ವನು; ಛಂದಸ್ಸು: ಬೃಹತೀ.

### [ವರ್ಗ: ೩]

೫೬೭. ಸಹ ವಾಮೇನ ನ ಉಷೋ ವ್ಯುಚ್ಛಾ ದುಹಿತರ್ದಿವಃ ।
ಸಹ ದ್ಯುಮ್ನೇನ ಬೃಹತಾ ವಿಭಾವರಿ ರಾಯಾ ದೇವಿ ದಾಸ್ವತೀ ॥ ೧ ॥

ದೇವಪುತ್ರಿಯಾದ ಉಷಾದೇವಿಯೇ! ನಮಗೆ ಧನವನ್ನು ಕೊಟ್ಟು ಪ್ರಭಾತವನ್ನುಂಟುಮಾಡವ್ವಾ. ದೇವಿಯೇ! ದಾನಶೀಲಳಾಗಿ ಪಶುರೂಪ-ಧನಗಳನ್ನು ಕೊಟ್ಟು ಪ್ರಭಾತಮಾಡು. ॥ ೧ ॥

೫೬೮. ಅಶ್ವಾವತೀರ್ಗೋಮತೀರ್ವಿಶ್ವಸುವಿದೋ ಭೂರಿ ಚ್ಯವಂತ ವಸ್ತವೇ ।
ಉದೀರಯ ಪ್ರತಿ ಮಾ ಸೂನೃತಾ ಉಷಶ್ ಚೋದ ರಾಧೋ
ಮಘೋನಾಂ ॥ ೨ ॥

ಉಷೆಯು ಅಶ್ವಗಳಿಂದ ಬಲಿತಳೂ, ಗೋಸಂಪನ್ನೆಯೂ, ಸಕಲಧನಧಾತ್ರಿಯೂ ಆಗಿರುವಳು. ಪ್ರಜೆಗಳ ಸುಖದ ಸಲುವಾಗಿ ಅವಳಲ್ಲಿಗೆ ವಿಧವಿಧದ ಸಂಪತ್ತುಗಳಿರುವುವು. ಉಷಾದೇವಿ! ನನಗೆ ಸತ್ಯವಚನ, ಬಲ ಮತ್ತು ಧನಿಕರ ಧನ—ಇವುಗಳನ್ನು ದಯೆಪಾಲಿಸವ್ವಾ. ॥ ೨ ॥

೫೬೯. ಉವಾಸೋಷಾ ಉಚ್ಛಾಚ್ಚ ನು ದೇವೀ ಜೀರಾ ರಥಾನಾಂ ।
ಯೇ ಅಸ್ಯಾ ಆಚರಣೇಷು ದಧ್ರಿರೇ ಸಮುದ್ರೇ ನ ಶ್ರವಸ್ಯವಃ ॥ ೩ ॥

ಉಷೆಯು ಮೊದಲು ಪ್ರಭಾತವನ್ನುಂಟುಮಾಡುತ್ತಿದ್ದಳು ಮತ್ತು ಈಗ ಲಾದರೂ ಮಾಡುತ್ತಿರುತ್ತಾಳೆ. ಯಾವ ರೀತಿಯಲ್ಲಿ ಧನಾಭಿಲಾಷಿಗಳು ಸಮುದ್ರ ದಲ್ಲಿ ನಾವೆಯನ್ನು ಬಿಡುತ್ತಾರೋ, ಯಾವ ರೀತಿಯಲ್ಲಿ ಉಷಃಕಾಲದಲ್ಲಿಯೇ ರಥಗಳು ತಯಾರಿಸಲ್ಪಡುವವೋ, ಅದೇ ರೀತಿಯಲ್ಲಿ ಉಷೆಯು ರಥವನ್ನು ಪ್ರೇರೇಪಿಸುತ್ತಾಳೆ. ॥ ೩ ॥

೫೭೦. ಉಷೋ ಯೇ ತೇ ಪ್ರ ಯಾಮೇಷು ಯುಂಜತೇ ಮನೋ
ದಾನಾಯ ಸೂರಯಃ ।
ಅತ್ರಾಹ ತತ್ ಕಣ್ವ ಏಷಾಂ ಕಣ್ವತಮೋ ನಾಮ ಗೃಣಾತಿ ನೃಣಾಂ ॥ ೪ ॥

ಉಷಾದೇವಿ! ನಿನ್ನ ಆಗಮನವಾದ ಮೇಲೆಯೇ ವಿದ್ವಾಂಸರು ದಾನದೆಡೆಗೆ ಧ್ಯಾನವನ್ನು ಕೊಡುತ್ತಾರೆ; ಅತಿಶಯವಾಗಿ ಮೇಧಾವಿಯಾದ ಕಣ್ವಋಷಿಯು ದಾನಶೀಲರಾದ ಮನುಷ್ಯರ ಪ್ರಖ್ಯಾತಿಯುಳ್ಳ ಹೆಸರನ್ನು ಉಷಃಕಾಲದಲ್ಲಿಯೇ ಉಚ್ಚರಿಸುತ್ತಾನೆ. ॥ ೪ ॥

೫೭೧. ಆ ಘಾ ಯೋಷೇವ ಸೂನರ್ಯುಷಾ ಯಾತಿ ಪ್ರಭುಂಜತೀ ।
ಜರಯಂತೀ ವೃಜನಂ ಪದ್ವದೀಯತ ಉತ್ಪಾತಯತಿ ಪಕ್ಷಿಣಃ ॥ ೫ ॥

ಉಷೆಯು ಮನೆಯ ಕೆಲಸಗಳನ್ನು ಚೆನ್ನಾಗಿ ನಿರ್ವಹಿಸುವ ಗೃಹಿಣಿಯಂತೆ ಎಲ್ಲರ ಪಾಲನೆಯನ್ನು ಮಾಡುತ್ತಾಳೆ. ಅವಳು ಜಂಗಮ ಪ್ರಾಣಿಗಳ ಆಯುಷ್ಯ ವನ್ನು ಕ್ರಮವಾಗಿ ಒಂದೊಂದು ದಿನದಂತೆ ಕಡಿಮೆ ಮಾಡುತ್ತಾಳೆ. ಕಾಲು ಗಳುಳ್ಳ ಪ್ರಾಣಿಗಳನ್ನು ನಡೆಯಿಸುತ್ತಾಳೆ; ಪಕ್ಷಿಗಳನ್ನು ಹಾರಿಸುತ್ತಾಳೆ. ॥ ೫ ॥

## [ವರ್ಗಃ ೪]

೫೭೨. ವಿ ಯಾ ಸೃಜತಿ ಸಮನಂ ವ್ಯರ್ಥಿನಃ ಪದಂ ನ ವೇತ್ಯೋದತೀ ।
ವಯೋ ನಕಿಷ್ಟೇ ಪಪ್ತಿವಾಂಸ ಆಸತೇ ವ್ಯುಷ್ಟೌ ವಾಜಿನೀವತಿ ॥ ೬ ॥

ಉಷಾದೇವಿಯೇ! ನೀನು ಪ್ರಯತ್ನಶೀಲನಾದ ಮನುಷ್ಯನನ್ನು ಸುಕಾರ್ಯದಲ್ಲಿ ತೊಡಗಿಸುತ್ತೀ. ನೀನು ಭಿಕ್ಷುಕನಾದವರಿಗೂ ಕೂಡ ಪ್ರೇರಣೆ ಯನ್ನು ಕೊಡುತ್ತೀ. ನೀನು ನೀಹಾರವರ್ಷಿಣಿಯಾಗಿದ್ದು ಒಂದು ಕ್ಷಣವಾದರೂ ಹೆಚ್ಚು ಹೊತ್ತು ತಡೆಯುವದಿಲ್ಲ. ಅನ್ನಯುಕ್ತಳೂ, ಯಜ್ಞಸಂಪನ್ನೆಯೂ ಆಗಿರುವ ಉಷಾದೇವಿ! ನಿನ್ನ ಆಗಮನವಾದ ಮೇಲೆ ಹಾರಾಡುವ ಹಕ್ಕಿಗಳು ತಮ್ಮ ಗೂಡಿನಲ್ಲಿ ನಿಲ್ಲುವದಿಲ್ಲ. ॥ ೬ ॥

೫೭೩. ಏಷಾಯುಕ್ತ ಪರಾವತಃ ಸೂರ್ಯಸ್ಯೋದಯನಾದಧಿ ।
ಶತಂ ರಥೇಭಿಃ ಸುಭಗೋಷಾ ಇಯಂ ವಿ ಯಾತ್ಯಭಿ ಮಾನುಷಾನ್ ॥ ೭ ॥

ಉಷೆಯು ರಥವನ್ನು ಯೋಜಿಸಿರುವಳು. ಈ ಸೌಭಾಗ್ಯಶಾಲಿನಿಯಾದ ಉಷಾದೇವಿಯು, ಸೂರ್ಯನ ಉದಯಸ್ಥಾನಕ್ಕಿಂತಲೂ ಮೇಲಿನಿಂದ, ನೂರು ರಥಗಳ ಮುಖಾಂತರವಾಗಿ ಮನುಷ್ಯರ ಬಳಿಗೆ ಬರುತ್ತಾಳೆ. ॥ ೭ ॥

೫೭೪. ವಿಶ್ವಮಸ್ಯಾ ನಾನಾಮ ಚಕ್ಷಸೇ ಜಗಜ್ಜ್ಯೋತಿಷ್ಕೃಣೋತಿ ಸೂನರೀ ।
ಅಪ ದ್ವೇಷೋ ಮಘೋನೀ ದುಹಿತಾ ದಿವ ಉಷಾ ಉಚ್ಛದಪ ಸ್ರಿಧಃ ॥ ೮ ॥

ಉಷೆಯ ಬೆಳಕಿಗಾಗಿ ಎಲ್ಲ ಪ್ರಾಣಿಗಳೂ ಉಷಾದೇವಿಯನ್ನು ನಮಸ್ಕರಿಸುತ್ತಾರೆ; ಯಾಕೆಂದರೆ ಈ ಸುನೇತ್ರಿಯು ಜ್ಯೋತಿಯನ್ನು ಬೆಳಗಿಸುತ್ತಾಳೆ ಮತ್ತು ಈ ಧನವತಿಯೂ, ದ್ಯುಲೋಕದಲ್ಲಿ ಹುಟ್ಟಿದವಳೂ ಆದ ಉಷಾದೇವಿಯು ದ್ವೇಷಿಗಳನ್ನೂ, ಶೋಷಣಕರ್ತಾರರನ್ನೂ ದೂರಮಾಡುತ್ತಾಳೆ. ॥ ೮ ॥

೫೭೫. ಉಷ ಆ ಭಾಹಿ ಭಾನುನಾ ಚಂದ್ರೇಣ ದುಹಿತರ್ದಿವಃ ॥
ಆವಹಂತೀ ಭೂರ್ಯಸ್ಮಭ್ಯಂ ಸೌಭಗಂ ವ್ಯುಚ್ಛಂತೀ ದಿವಿಷ್ಟಿಷು ॥ ೯ ॥

ಸ್ವರ್ಗಪುತ್ರಿಯಾದ ಉಷಾದೇವಿ! ಆಹ್ಲಾದಕರವಾದ ಜ್ಯೋತಿಯೊಂದಿಗೆ ಪ್ರಕಾಶಿತಳಾಗು, ಅನುದಿನವೂ ನಮಗೆ ಸೌಭಾಗ್ಯವನ್ನು ಕೊಡು ಮತ್ತು ಅಂಧಕಾರವನ್ನು ದೂರಮಾಡು, ತಾಯೆ! ॥ ೯ ॥

೫೭೬. ವಿಶ್ವಸ್ಯ ಹಿ ಪ್ರಾಣನಂ ಜೀವನಂ ತ್ವೇ ವಿ ಯದುಚ್ಛಸಿ ಸೂನರಿ ।
ಸಾ ನೋ ರಥೇನ ಬೃಹತಾ ವಿಭಾವರಿ ಶ್ರುಧಿ ಚಿತ್ರಾಮಘೇ ಹವಂ ॥ ೧೦ ॥

ನೇತ್ರಿಯಾದ ಉಷೆಯೇ! ನೀನೇ ಕತ್ತಲೆಯನ್ನು ದೂರಮಾಡುವೆಯಾದ್ದರಿಂದ ಎಲ್ಲ ಪ್ರಾಣಿಗಳ ಉಸಿರು ಮತ್ತು ಜೀವನವು ನಿನ್ನಲ್ಲಿಯೇ ಅಡಕವಾಗಿರುವುವು. ವಿಭಾವರಿಯಾದ ಉಷಾದೇವಿ! ವಿಶಾಲವಾದ ರಥದ ಮೇಲೆ ಕುಳಿತು ಬಾರವ್ವಾ. ವಿಲಕ್ಷಣವಾದ ರಥದಿಂದ ಸಂಪನ್ನೆಯಾದ ಉಷೆಯೇ! ನಾವು ಮಾಡುವ ಆಹ್ವಾನವನ್ನು ಕೇಳು. ॥ ೧೦ ॥

## [ವರ್ಗಃ ೫]

೫೭೭. ಉಷೋ ವಾಜಂ ಹಿ ವಂಸ್ವ ಯಶ್ಚಿತ್ರೋ ಮಾನುಷೇ ಜನೇ ।
ತೇನಾ ವಹ ಸುಕೃತೋ ಅಧ್ವರಾँ ಉಪ ಯೇ ತ್ವಾ ಗೃಣಂತಿ
ವಹ್ನಯಃ ॥ ೧೧ ॥

ಉಷಾದೇವಿ! ಮನುಷ್ಯನ ಹತ್ತರ ಯಾವ ವಿಚಿತ್ರವಾದ ಅನ್ನವಿರುವದೋ, ಅದನ್ನು ನೀನು ಸ್ವೀಕರಿಸು ಮತ್ತು ಯಾವ ಯಜ್ಞ-ನಿರ್ವಾಹಕರಾದ ಜನರು

ನಿನ್ನ ಸ್ತುತಿಯನ್ನು ಮಾಡುತ್ತಾರೋ, ಅಂಥ ಜನರ ಸುಕೃತಿಗಳನ್ನು ಹಿಂಸಾರಹಿತವಾದ ಯಜ್ಞದಲ್ಲಿ ತಕ್ಕೊಂಡು ಬಾರವ್ವಾ. ॥ ೧೧ ॥

೫೭೮. ವಿಶ್ವಾನ್ ದೇವಾँ ಆ ವಹ ಸೋಮಪೀತಯೇ ಽಂತರಿಕ್ಷಾದುಷಸ್ತ್ವಂ ।
ಸಾಸ್ಮಾಸು ಧಾ ಗೋಮದಶ್ವಾವದುಕ್ಥ್ಯ೧ಮುಷೋ ವಾಜಂ
ಸುವೀರ್ಯಂ ॥ ೧೨ ॥

ಉಷಾದೇವಿ! ಅಂತರಿಕ್ಷದಿಂದ ಸೋಮಪಾನದ ಸಲುವಾಗಿ ಎಲ್ಲ ದೇವತೆಗಳನ್ನು ತಾರವ್ವಾ. ಉಷಾದೇವಿಯೇ! ನೀನು ನಮಗೆ ಅಶ್ವ-ಗೋ-ಯುಕ್ತವಾದ, ಪ್ರಶಂಸನೀಯವಾದ ಮತ್ತು ವೀರ್ಯಸಂಪನ್ನವಾದ ಅನ್ನವನ್ನು ಕೊಡು, ತಾಯೆ! ॥ ೧೨ ॥

೫೭೯. ಯಸ್ಯಾ ರುಶಂತೋ ಅರ್ಚಯಃ ಪ್ರತಿ ಭದ್ರಾ ಅದೃಕ್ಷತ ।
ಸಾ ನೋ ರಯಿಂ ವಿಶ್ವವಾರಂ ಸುಪೇಶಸ—ಮುಷಾ ದದಾತು
ಸುಗ್ಮ್ಯಂ ॥ ೧೩ ॥

ಯಾವ ಉಷೆಯ ಜ್ಯೋತಿಷ್ಕಿರಣಗಳು ಶತ್ರುಗಳ ವಿನಾಶವನ್ನು ಮಾಡಿ, ಕಲ್ಯಾಣರೂಪಿನಲ್ಲಿ ಕಾಣುವವೋ, ಅಂಥವಳು ನಮ್ಮೆಲ್ಲರಿಗೆ ವರಣೀಯವಾದ, ಸುರೂಪವುಳ್ಳ ಮತ್ತು ಸುಖದವಾಗಿರುವ ಧನವನ್ನು ದಯೆಪಾಲಿಸಲಿ. ॥ ೧೩ ॥

೫೮೦. ಯೇ ಚಿದ್ಧಿ ತ್ವಾಮೃಷಯಃ ಪೂರ್ವ ಊತಯೇ ಜುಹೂರೇಽವಸೇ ಮಹಿ ।
ಸಾ ನಃ ಸ್ತೋಮಾँ ಅಭಿ ಗೃಣೀಹಿ ರಾಧಸೋ—ಷಃ ಶುಕ್ರೇಣ
ಶೋಚಿಷಾ ॥ ೧೪ ॥

ಪೂಜ್ಯಳಾದ ಉಷಾದೇವಿ! ಪೂರ್ವದಲ್ಲಿ ಋಷಿಗಳು ರಕ್ಷಣೆಗಾಗಿ ಮತ್ತು ಅನ್ನದ ಸಲುವಾಗಿ ನಿನ್ನನ್ನು ಆಹ್ವಾನಿಸಿದ್ದರು. ನೀನು ಧನದಿಂದ ಮತ್ತು ದೀಪ್ತಿಶಾಲಿಯಾದ ತೇಜಸ್ಸಿನಿಂದ ಶ್ರೇಷ್ಠಳಾಗಿ ನಮ್ಮ ಸ್ತುತಿಗಳ ಮೇಲೆ ಸಂತುಷ್ಟಳಾಗವ್ವಾ. ॥ ೧೪ ॥

೫೮೧. ಉಷೋ ಯದದ್ಯ ಭಾನುನಾ ವಿ ದ್ವಾರಾವೃಣವೋ ದಿವಃ ।
ಪ್ರ ನೋ ಯಚ್ಛತಾದವೃಕಂ ಪೃಥು ಚ್ಛರ್ದಿಃ ಪ್ರ ದೇವಿ
ಗೋಮತೀರಿಷಃ ॥ ೧೫ ॥

ಉಷಾದೇವಿಯೇ! ನೀನು ಈ ಹೊತ್ತು ನಿನ್ನ ಜ್ಯೋತಿಯಿಂದ ಆಕಾಶದ ಎರಡೂ ದ್ವಾರಗಳನ್ನು ತೆರೆದಿಟ್ಟಿರುವೆ; ಆದ್ದರಿಂದ ನಮಗೆ ಹಿಂಸಕರಿಂದ ರಹಿತವಾದ ಮತ್ತು ವಿಸ್ತೀರ್ಣವಾದ ಮನೆಯನ್ನು ಮತ್ತು ಗೋವುಗಳಿಂದ ಕೂಡಿದ ಅನ್ನಗಳನ್ನು ಕರುಣಿಸವ್ವಾ. ॥ ೧೫ ॥

೫೮೨. ಸಂ ನೋ ರಾಯಾ ಬೃಹತಾ ವಿಶ್ವಪೇಶಸಾ ಮಿಮಿಕ್ಷ್ವಾ ಸಮಿಳಾಭಿರಾ ।
ಸಂ ದ್ಯುಮ್ನೇನ ವಿಶ್ವತುರೋಷೋ ಮಹಿ ಸಂ ವಾಜೈರ್ವಾಜಿನೀವತಿ ॥ ೧೬ ॥

ಉಷಾದೇವಿ! ನಮಗೆ ವಿಪುಲವಾದ ಮತ್ತು ಬಹುವಿಧರೂಪದಿಂದ ಸಂಯುಕ್ತವಾದ ಧನವನ್ನೂ, ಗೋವುಗಳನ್ನೂ ಕೊಡು ತಾಯೆ! ಪೂಜನೀಯಳಾದ ಉಷೆಯೇ! ನಮಗೆ ಸರ್ವಶತ್ರುನಾಶಕವಾದ ಯಶಸ್ಸನ್ನು ಅನುಗ್ರಹಿಸು. ಅನ್ನಯುಕ್ತಳೂ, ಕ್ರಿಯಾಸಂಪನ್ನೆಯೂ ಆದ ಉಷಾದೇವಿ! ನಮಗೆ ಅನ್ನವನ್ನು ದಯೆಪಾಲಿಸು. ॥ ೧೬ ॥

## ಸೂಕ್ತ: ೪೯

ಈ ಸೂಕ್ತದ ದೇವತೆ: ಉಷಾ; ಋಷಿ: ಪ್ರಸ್ಕಣ್ವನು; ಛಂದಸ್ಸು: ಅನುಷ್ಟುಪ್.

### [ವರ್ಗ: ೬]

೫೮೩. ಉಷೋ ಭದ್ರೇಭಿರಾ ಗಹಿ ದಿವಶ್ಚಿದ್ ರೋಚನಾದಧಿ ।
ವಹಂತ್ವರುಣಪ್ಸವ ಉಪ ತ್ವಾ ಸೋಮಿನೋ ಗೃಹಂ ॥ ೧ ॥

ಉಷಾದೇವಿ! ದೀಪ್ಯಮಾನವಾದ ಆಕಾಶದ ಮೇಲಿನಿಂದ ಶೋಭಿಸುವ ಪಥದ ಮೂಲಕ ಆಗಮನ ಮಾಡವ್ವಾ. ಅರುಣವರ್ಣದ ಗೋವುಗಳು ಸೋಮಯುಕ್ತವಾದ ಯಜಮಾನನ ಮನೆಯಲ್ಲಿ ನಿನ್ನನ್ನು ತರಲಿ. ॥ ೧ ॥

೫೮೪. ಸುಪೇಶಸಂ ಸುಖಂ ರಥಂ ಯಮಧ್ಯಸ್ಥಾ ಉಷಸ್ತ್ವಂ ।
ತೇನಾ ಸುಶ್ರವಸಂ ಜನಂ ಪ್ರಾವಾದ್ಯ ದುಹಿತರ್ದಿವಃ ॥ ೨ ॥

ಉಷಾದೇವಿ! ನೀನು ಯಾವ ಸುರೂಪವಾದ ಮತ್ತು ಸುಖಕರವಾದ ರಥದಲ್ಲಿ ಅಧಿಷ್ಠಾನವನ್ನು ಮಾಡುವೆಯೋ, ಅದರಲ್ಲಿಯೇ ಇಂದು ಹವ್ಯದಾತನಾದ ಯಜಮಾನನಲ್ಲಿಗೆ ಬಾರವ್ವಾ. ॥ ೨ ॥

೫೮೫. ವಯಶ್ಚಿತ್ ತೇ ಪತತ್ರಿಣೋ ದ್ವಿಪಚ್ಚತುಷ್ಪದರ್ಜುನಿ ।
ಉಷಃ ಪ್ರಾರನ್ನೃತೂರನು ದಿವೋ ಅಂತೇಭ್ಯಸ್ಪರಿ ॥ ೩ ॥

ಶುಭ್ರವರ್ಣೆಯಾದ ಉಷಾದೇವಿ! ನಿನ್ನ ಆಗಮನ ಕಾಲದಲ್ಲಿ ದ್ವಿಪದ, ಚತುಷ್ಪದ ಮತ್ತು ಪಕ್ಷಯುಕ್ತವಾದ ಪಕ್ಷಿಗಣ—ಇವೆಲ್ಲವೂ ಆಕಾಶಮಂಡಲದಲ್ಲಿ ತಮ್ಮ ತಮ್ಮ ಕಾರ್ಯದಲ್ಲಿ ತೊಡಗಿರುತ್ತವೆ. ॥ ೩ ॥

೫೮೬. ವ್ಯುಚ್ಛಂತೀ ಹಿ ರಶ್ಮಿಭಿ—ರ್ವಿಶ್ವಮಾಭಾಸಿ ರೋಚನಂ ।
ತಾಂ ತ್ವಾಮುಷರ್ವಸೂಯವೋ ಗೀರ್ಭಿಃ ಕಣ್ವಾ ಅಹೂಷತ ॥ ೪ ॥

ಉಷಾದೇವಿ! ನೀನು ಅಂಧಕಾರದ ವಿನಾಶವನ್ನು ಮಾಡಿ ನಿನ್ನ ಕಿರಣಗಳಿಂದ ಜಗತ್ತನ್ನು ಬೆಳಗಿಸವ್ವಾ. ಕಣ್ವಪುತ್ರರು ಅಥವಾ ಮೇಧಾವಿಗಳಾದ ಋತ್ವಿಜರು ಧನಯಾಚಕರಾಗಿ ಸ್ತೋತ್ರಗಳಿಂದ ನಿನ್ನ ಸ್ತವನವನ್ನು ಹಾಡಿದ್ದರು. ॥ ೪ ॥

## ಸೂಕ್ತ: ೫೦

**ಈ ಸೂಕ್ತದ ದೇವತೆ: ಸೂರ್ಯನು; ಋಷಿ: ಪ್ರಸ್ಕಣ್ವನು; ಛಂದಸ್ಸು: ಗಾಯತ್ರೀ ಮತ್ತು ಅನುಷ್ಟುಪ್.**

### [ವರ್ಗಃ ೭]

**೫೮೭. ಉದು ತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ ।**
**ದೃಶೇ ವಿಶ್ವಾಯ ಸೂರ್ಯಂ ॥ ೧ ॥**

ಸೂರ್ಯನು ಪ್ರಕಾಶಮಾನನಾಗಿರುವನು ಮತ್ತು ಎಲ್ಲ ಪ್ರಾಣಿಗಳನ್ನು ಅರಿತಿರುವನು. ಸೂರ್ಯನ ಕುದುರೆಗಳು ಎಲ್ಲ ಸಂಸಾರದ ದರ್ಶನಕ್ಕಾಗಿ ಸೂರ್ಯನನ್ನು ಮೇಲಕ್ಕೆ ಒಯ್ಯುತ್ತವೆ. ॥ ೧ ॥

**೫೮೮. ಅಪ ತ್ಯೇ ತಾಯವೋ ಯಥಾ ನಕ್ಷತ್ರಾ ಯಂತ್ಯಕ್ತುಭಿಃ ।**
**ಸೂರಾಯ ವಿಶ್ವಚಕ್ಷಸೇ ॥ ೨ ॥**

ಸಮಸ್ತ ಸಂಸಾರದ ಪ್ರಕಾಶಕನಾದ ಸೂರ್ಯನ ಆಗಮನವಾದ ಮೇಲೆ, ನಕ್ಷತ್ರಗಳು ಕಳ್ಳರಂತೆ ರಾತ್ರಿಯ ಜೊತೆಯಲ್ಲಿ ಹೋಗಿಬಿಡುತ್ತವೆ. ॥ ೨ ॥

**೫೮೯. ಅದೃಶ್ರಮಸ್ಯ ಕೇತವೋ ವಿ ರಶ್ಮಯೋ ಜನಾँ ಅನು ।**
**ಭ್ರಾಜಂತೋ ಅಗ್ನಯೋ ಯಥಾ ॥ ೩ ॥**

ದೀಪ್ಯಮಾನವಾದ ಅಗ್ನಿಯಂತೆ ಸೂರ್ಯನ ಸೂಚಕವಾದ ಕಿರಣಗಳು ಎಲ್ಲ ಜಗತ್ತನ್ನು ಒಂದೊಂದಾಗಿ ನೋಡುತ್ತವೆ. ॥ ೩ ॥

**೫೯೦. ತರಣಿರ್ವಿಶ್ವದರ್ಶತೋ ಜ್ಯೋತಿಷ್ಕೃದಸಿ ಸೂರ್ಯ ।**
**ವಿಶ್ವಮಾ ಭಾಸಿ ರೋಚನಂ ॥ ೪ ॥**

ಸೂರ್ಯನೇ! ನೀನು ಮಹಾಮಾರ್ಗದ ಭ್ರಮಣವನ್ನು ಮಾಡು, ನೀನು ಎಲ್ಲ ಪ್ರಾಣಿಗಳಿಗೆ ದರ್ಶನೀಯನಾಗು. ನೀನೇ ಜ್ಯೋತಿಯ ಕಾರಣನಾಗಿರುವೆ. ನೀನು ಸಮೀಚೀನವಾಗಿ ದೀಪ್ಯಮಾನವಾಗಿರುವ ಅಂತರಿಕ್ಷದಲ್ಲಿ ಪ್ರಭೆಯನ್ನು ವಿಕಾಸಗೊಳಿಸುತ್ತೀ. ॥ ೪ ॥

೫೯೧. ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ ।
ಪ್ರತ್ಯಙ್ ವಿಶ್ವಂ ಸ್ವರ್ದೃಶೇ ॥ ೫ ॥

ನೀನು ಮರುದ್ದೇವರ ಸಮ್ಮುಖದಲ್ಲಿ ಉದಯಿಸಯ್ಯಾ; ಸೂರ್ಯನೇ! ನೀನು ಮಾನವರ ಸಮ್ಮುಖದಲ್ಲಿ ಉದಯಿಸಯ್ಯಾ; ಸಮಸ್ತ ಸ್ವರ್ಗಲೋಕದ ದರ್ಶನಕ್ಕಾಗಿ ಉದಯಿಸಯ್ಯಾ. ॥ ೫ ॥

## [ವರ್ಗಃ ೮]

೫೯೨. ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾ ಅನು ।
ತ್ವಂ ವರುಣ ಪಶ್ಯಸಿ ॥ ೬ ॥

ಸಂಸ್ಕಾರಕನಾದ ಮತ್ತು ಅನಿಷ್ಟಹಂತಾರನಾದ ಸೂರ್ಯನೇ! ನೀನು ಯಾವ ದೀಪ್ತಿಯಿಂದ ಪ್ರಾಣಿಗಳ ಪಾಲಕನಾಗಿ ಜಗತ್ತನ್ನು ನೋಡುತ್ತೀಯೋ, ನಾವು ಅದೇ ದೀಪ್ತಿಯನ್ನು ಪ್ರಾರ್ಥಿಸುತ್ತೇವೆ. ॥ ೬ ॥

೫೯೩. ವಿ ದ್ಯಾಮೇಷಿ ರಜಸ್ಪೃಥ್ವ—ಹಾ ಮಿಮಾನೋ ಅಕ್ತುಭಿಃ ।
ಪಶ್ಯಂಜನ್ಮಾನಿ ಸೂರ್ಯ ॥ ೭ ॥

ಸೂರ್ಯನೇ! ನೀನು ಆ ದೀಪ್ತಿಯ ಮೂಲಕ, ರಾತ್ರಿಯ ಜೊತೆಯಲ್ಲಿ ದಿವಸವನ್ನು ಹುಟ್ಟಿಸಿ ಮತ್ತು ಪ್ರಾಣಿಗಳ ಅವಲೋಕನವನ್ನು ಮಾಡಿ, ವಿಸ್ತೃತವಾದ ಅಂತರಿಕ್ಷಲೋಕದಲ್ಲಿ ಭ್ರಮಣಮಾಡುತ್ತೀ. ॥ ೭ ॥

೫೯೪. ಸಪ್ತ ತ್ವಾ ಹರಿತೋ ರಥೇ ವಹಂತಿ ದೇವ ಸೂರ್ಯ ।
ಶೋಚಿಷ್ಕೇಶಂ ವಿಚಕ್ಷಣ ॥ ೮ ॥

ದೀಪ್ತಿಮಂತನಾದ ಮತ್ತು ಸರ್ವ ಪ್ರಕಾಶಕನಾದ ಸೂರ್ಯನೇ! 'ಹರಿತ್' ನಾಮದ ಸಪ್ತಾಶ್ವಗಳು ರಥದಲ್ಲಿ ನಿನ್ನನ್ನು ಒಯ್ಯುತ್ತವೆ. ಕಿರಣಗಳೇ ನಿನ್ನ ಕೇಶಗಳಾಗಿರುವುವು. ॥ ೮ ॥

೫೯೫. ಅಯುಕ್ತ ಸಪ್ತ ಶುಂಧ್ಯುವಃ ಸೂರೋ ರಥಸ್ಯ ನಪ್ತ್ಯಃ ।
ತಾಭಿರ್ಯಾತಿ ಸ್ವಯುಕ್ತಿಭಿಃ ॥ ೯ ॥

ಸೂರ್ಯನ ರಥವನ್ನೆಳೆಯುವ ಏಳು ಹೆಣ್ಣು ಕುದುರೆಗಳು ರಥಕ್ಕೆ ಸಂಯೋಜಿತವಾಗಿವೆ. ಆ ಸಂಯೋಜಿತವಾದ ಹೆಣ್ಣುಕುದುರೆಗಳಿಂದ ಸೂರ್ಯನು ಗಮನವನ್ನು ಮಾಡುತ್ತಾನೆ. ॥ ೯ ॥

೫೯೬. ಉದ್ ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ ।
ದೇವಂ ದೇವತ್ರಾ ಸೂರ್ಯ—ಮಗನ್ಮ ಜ್ಯೋತಿರುತ್ತಮಂ ॥ ೧೦ ॥

ಅಂಧಕಾರದ ಮೇಲೆ ಎದ್ದಿರುವ ಜ್ಯೋತಿಯನ್ನು ನೋಡಿ ನಾವೆಲ್ಲರೂ ದೇವತೆಗಳಲ್ಲಿ ಪ್ರಕಾಶಶಾಲಿಯಾಗಿರುವ ಸೂರ್ಯನ ಬಳಿಗೆ ಹೋಗುತ್ತೇವೆ. ಸೂರ್ಯನೇ ಉತ್ಕೃಷ್ಟವಾದ ಜ್ಯೋತಿಯಾಗಿರುವನು. ॥ ೧೦ ॥

೫೯೭. ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಂ ।
ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥ ೧೧ ॥

ಅನುರೂಪವಾದ ದೀಪ್ತಿಯಿಂದ ಸಂಯುಕ್ತನಾದ ಸೂರ್ಯನೇ! ಇಂದು ಉದಿತನಾಗಿ, ಉನ್ನತವಾದ ಆಕಾಶದಲ್ಲಿ ಏರಿ ನನ್ನ ಹೃದ್ರೋಗ, ಮಾನಸರೋಗ ಮತ್ತು ಹರಿಮಾಣರೋಗ ಅಥವಾ ಶರೀರರೋಗವನ್ನು ನಾಶಗೊಳಿಸಯ್ಯಾ. ॥ ೧೧ ॥

೫೯೮. ಶುಕೇಷು ಮೇ ಹರಿಮಾಣಂ ರೋಪಣಾಕಾಸು ದಧ್ಮಸಿ ।
ಅಥೋ ಹಾರಿದ್ರವೇಷು ಮೇ ಹರಿಮಾಣಂ ನಿ ದಧ್ಮಸಿ ॥ ೧೨ ॥

ನಾನು ನನ್ನ ಹರಿಮಾಣರೋಗವನ್ನು ಶುಕಸಾರಿಕೆಗಳ ಮೇಲೆ ಒತ್ತಿಯಿಡುತ್ತೇನೆ. ನಾನು ನನ್ನ ಹರಿಮಾಣರೋಗವನ್ನು ಹರಿತಾಳ ವೃಕ್ಷಗಳ ಮೇಲೆ ಸ್ಥಾಪಿಸುತ್ತೇನೆ. ॥ ೧೨ ॥

೫೯೯. ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ ।
ದ್ವಿಷಂತಂ ಮಹ್ಯಂ ರಂಧಯನ್ ಮೋ ಅಹಂ ದ್ವಿಷತೇ ರಧಂ ॥ ೧೩ ॥

ಈ ಆದಿತ್ಯನು ನನ್ನ ಅನಿಷ್ಟಕಾರಿಯಾದ ರೋಗಗಳ ವಿನಾಶಕ್ಕಾಗಿಯೇ ಸಮಸ್ತ ತೇಜಸ್ಸನ್ನು ಧರಿಸಿ ಉದಯಿಸಿರುವನು. ಆ ರೋಗದ ವಿನಾಶಕರ್ತಾರನು ನಾನಲ್ಲ; ಆದರೆ ಆದಿತ್ಯನು. ॥ ೧೩ ॥

---

# ಹತ್ತನೇ ಅನುವಾಕ

## ಸೂಕ್ತ: ೫೧

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಅಂಗಿರಸನ ಪುತ್ರನಾದ ಸವ್ಯನು; ಛಂದಸ್ಸು: ಜಗತೀ ಮತ್ತು ತ್ರಿಷ್ಟುಪ್.

[ವರ್ಗ: ೯]

೬೦೦. ಅಭಿ ತ್ಯಂ ಮೇಷಂ ಪುರುಹೂತಮೃಗ್ಮಿಯ—ಮಿಂದ್ರಂ ಗೀರ್ಭಿ-
ರ್ಮದತಾ ವಸ್ವೋ ಅರ್ಣವಂ ।
ಯಸ್ಯ ದ್ಯಾವೋ ನ ವಿಚರಂತಿ ಮಾನುಷಾ ಭುಜೇ ಮಂಹಿಷ್ಠಮಭಿ
ವಿಪ್ರಮರ್ಚತ ॥ ೧ ॥

ಯಾವಾತನನ್ನು ಜನರು ಪ್ರಾರ್ಥಿಸುತ್ತಾರೋ, ಯಾವಾತನು ಸ್ತುತಿಗೆ ಪಾತ್ರನಾಗಿರುವನೋ ಮತ್ತು ಧನದ ಸಾಗರನಾಗಿರುವನೋ, ಅಂಥ ಬಲವಂತನಾಗಿರುವ ಇಂದ್ರನನ್ನು ನಿಮ್ಮ ಸ್ತುತಿಯಿಂದ ಪ್ರಸನ್ನಗೊಳಿಸಿರಿ. ಸೂರ್ಯನ ಕಿರಣಗಳಂತೆ ಯಾವಾತನ ಕೆಲಸವು ಮನುಷ್ಯರ ಹಿತಕ್ಕಾಗಿಯೇ ಇರುವದೋ, ಅಂಥ ಮೇಧಾವಿಯಾದ ಇಂದ್ರನನ್ನು ಧನದ ಸಲುವಾಗಿ ಪ್ರಾರ್ಥಿಸಿರಿ. ॥ ೧ ॥

೬೦೧. ಅಭೀಮವನ್ವಂತ್ಸ್ವಭಿಷ್ಟಿಮೂತಯೋಽಂತರಿಕ್ಷಪ್ರಾಂ ತವಿಷೀಭಿರಾವೃತಂ ।
ಇಂದ್ರಂ ದಕ್ಷಾಸ ಋಭವೋ ಮದಚ್ಯುತಂ ಶತಕ್ರತುಂ ಜವನೀ
ಸೂನೃತಾರುಹತ್ ॥ ೨ ॥

ಇಂದ್ರನ ಆಗಮನವು ಸುಶೋಭಿತವಾಗಿರುವದು. ತನ್ನ ತೇಜಸ್ಸಿನಿಂದ ಇಂದ್ರನು ಅಂತರಿಕ್ಷವನ್ನು ತುಂಬಿಬಿಡುತ್ತಾನೆ. ಅವನು ಬಲಶಾಲಿಯೂ, ದರ್ಪಹರನೂ, ನೂರು ಯಜ್ಞಗಳನ್ನು ಮಾಡಿದಂಥವನೂ ಆಗಿರುತ್ತಾನೆ. ರಕ್ಷಣ-ವರ್ಧನಗಳಲ್ಲಿ ತತ್ಪರರಾಗಿ ಋಭುಗಳು ಅಥವಾ ಮಾರುತರು ಇಂದ್ರನ ಸಮ್ಮುಖದಲ್ಲಿ ಬಂದು ಅವನಿಗೆ ಸಹಾಯವನ್ನು ಮಾಡಿದರು. ಅವರು ತಮ್ಮ ಉತ್ಸಾಹವರ್ಧಿಯಾದ ವಚನಗಳಿಂದ ಇಂದ್ರನನ್ನು ಹುರಿದುಂಬಿಸಿದ್ದರು. ॥ ೨ ॥

೬೦೨. ತ್ವಂ ಗೋತ್ರಮಂಗಿರೋಭ್ಯೋಽವೃಣೋರಪೋ—ತಾತ್ರಯೇ
ಶತದುರೇಷು ಗಾತುವಿತ್ ।
ಸಸೇನ ಚಿದ್ ವಿಮದಾಯಾವಹೋ ವಸ್ವಾ—ಜಾವದ್ರಿಂ
ವಾವಸಾನಸ್ಯ ನರ್ತಯನ್ ॥ ೩ ॥

ನೀನು ಅಂಗಿರಸ ಋಷಿಯ ಸಲುವಾಗಿ ಮೋಡದಿಂದ ಮಳೆಗರೆಸಿದ್ದೀ. ಯಾವಾಗ ಅಸುರರು ಅತ್ರಿಯ ಮೇಲೆ 'ಶತದುರ' ಹೆಸರಿನ ಅಸ್ತ್ರವನ್ನು ಎಸೆದರೋ, ಆ ಕಾಲಕ್ಕೆ ಓಡಿಹೋಗುವದಕ್ಕಾಗಿ ನೀನೇ ಅತ್ರಿ ಋಷಿಗೆ ಮಾರ್ಗವನ್ನು ತೋರಿಸಿದೆ. ನೀನು ವಿಮದನೆಂಬ ಋಷಿಗೆ ಅನ್ನದಿಂದೊಡಗೂಡಿದ ಧನವನ್ನು ಕರುಣಿಸಿದ್ದೀ. ಇದೇ ಪ್ರಕಾರವಾಗಿ ಸಂಗ್ರಾಮದಲ್ಲಿದ್ದ ಸ್ತೋತಾರನನ್ನು, ನಿನ್ನ ವಜ್ರದ ಸಹಾಯದಿಂದ ಕಾಪಾಡಿದ್ದೀ. ॥ ೩ ॥

೬೦೩. ತ್ವಮಪಾಮಪಿಧಾನಾವೃಣೋರಪಾ—ಽಧಾರಯಃ ಪರ್ವತೇ
ದಾನುಮದ್ ವಸು ।
ವೃತ್ರಂ ಯದಿಂದ್ರ ಶವಸಾವಧೀರಹಿ—ಮಾದಿತ್ ಸೂರ್ಯಂ
ದಿವ್ಯಾರೋಹಯೋ ದೃಶೇ ॥ ೪ ॥

ಇಂದ್ರನೇ! ನೀನು ಜಲವಾಹಿಯಾದ ಮೇಘವನ್ನು ಬಹಿರಂಗಗೊಳಿಸಿರುವೆ ಮತ್ತು ಪರ್ವತದ ಮೇಲೆ ವೃತ್ರನೇ ಮೊದಲಾದ ಅಸುರರ ಧನವನ್ನು ಬಚ್ಚಿಟ್ಟಿರುವೆ. ಇಂದ್ರನೇ! ನೀನು ಹಿಂಸಕನಾದ ವೃತ್ರನನ್ನು ವಧಿಸಿದ್ದೀ ಮತ್ತು ಎಲ್ಲ ಸಂಸಾರವು ನೋಡಲೆಂದು ಸೂರ್ಯನನ್ನು ಆಕಾಶದಲ್ಲಿ ಏರಿಸಿಬಿಟ್ಟಿದ್ದೀ. ॥ ೪ ॥

೬೦೪. ತ್ವಂ ಮಾಯಾಭಿರಪ ಮಾಯಿನೋಽಧಮಃ ಸ್ವಧಾಭಿರ್ಯೇ
ಅಧಿ ಶುಪ್ತಾವಜುಹ್ವತ ।
ತ್ವಂ ಪಿಪ್ರೋರ್ನೃಮಣಃ ಪ್ರಾರುಜಃ ಪುರಃ ಪ್ರ ಋಜಿಶ್ವಾನಂ
ದಸ್ಯುಹತ್ಯೇಷ್ವಾವಿಥ ॥ ೫ ॥

ಯಾವ ಅಸುರರು ಯಜ್ಞೀಯ ಅನ್ನವನ್ನು ತಮ್ಮ ಬಾಯಲ್ಲಿ ಹಾಕಿಕೊಂಡಿದ್ದರೋ, ಇಂದ್ರನೇ! ಅಂಥ ಮಾಯಾವಿಗಳನ್ನು ಮಾಯೆಯಿಂದಲೇ ಸೋಲಿಸಿದೆ. ಮಾನವರಿಗೆ ನೀನು ಪ್ರಸನ್ನಚಿತ್ತನಾಗಿರುವೆ. ನೀನು 'ಪಿಪ್ರು' ನಾಮದ ಅಸುರನ ನಿವಾಸಸ್ಥಾನವನ್ನು ಧ್ವಸ್ತಗೊಳಿಸಿದೆ. 'ಋಜಶ್ವಾನ' ಎಂಬ ಹೆಸರುಳ್ಳ ಸ್ತೋತಾರನು ದಸ್ಯುಗಳ ಕೈಯಲ್ಲಿ ಸಿಲುಕಿ ಸಾಯುವದನ್ನು ತಪ್ಪಿಸಿದೆ. ॥ ೫ ॥

## [ವರ್ಗಃ ೧೦]

೬೦೫. ತ್ವಂ ಕುತ್ಸಂ ಶುಷ್ಣಹತ್ಯೇಷ್ವಾವಿಥಾಽರಂಧಯೋಽತಿಥಿಗ್ವಾಯ ಶಂಬರಂ ।
ಮಹಾಂತಂ ಚಿದರ್ಬುದಂ ನಿ ಕ್ರಮೀಃ ಪದಾ ಸನಾದೇವ
ದಸ್ಯುಹತ್ಯಾಯ ಜಜ್ಞಿಷೇ ॥ ೬ ॥

ಶುಷ್ಣ-ಅಸುರನ ಹತ್ತಿರ ಯುದ್ಧಮಾಡುತ್ತಿದ್ದ 'ಕುತ್ಸ' ಋಷಿಯನ್ನು ನೀನು ಕಾಪಾಡಿದೆ ಮತ್ತು ನೀನು ಅತಿಥಿವತ್ಸಲನಾದ ದಿವೋದಾಸನ ರಕ್ಷಣೆಗಾಗಿ ಶಂಬರಾಸುರನನ್ನು ವಧಿಸಿದೆ. ನೀನು 'ಅರ್ಬುದ' ನಾಮಧೇಯವುಳ್ಳ ಮಹಾಸುರನನ್ನು ಪಾದಾಕ್ರಾಂತಗೊಳಿಸಿದೆ. ಈ ಎಲ್ಲ ಕಾರಣಗಳಿಂದ, ನೀನು ದಸ್ಯುನಾಶಕ್ಕಾಗಿಯೇ ಜನ್ಮವನ್ನು ಗ್ರಹಿಸಿರುತ್ತಿರುವೆಯೆಂದು ವಿದಿತವಾಗುವದು. ॥ ೬ ॥

೬೦೬. ತ್ವೇ ವಿಶ್ವಾ ತವಿಷೀ ಸಧ್ರ್ಯಗ್ಘಿತಾ ತವ ರಾಧಃ ಸೋಮಪೀಥಾಯ
ಹರ್ಷತೇ ।
ತವ ವಜ್ರಶ್ಚಿಕಿತೇ ಬಾಹ್ವೋರ್ಹಿತೋ ವೃಶ್ಚಾ ಶತ್ರೋರವ
ವಿಶ್ವಾನಿ ವೃಷ್ಣ್ಯಾ ॥ ೭ ॥

ನಿನ್ನಲ್ಲಿ ಸಮಸ್ತ ಬಲವು ನಿಹಿತವಾಗಿರುವದೆಂಬುದರಲ್ಲಿ ಸಂದೇಹವಿಲ್ಲಾ. ಸೋಮಪಾನವಾದ ಮೇಲೆ ನಿನ್ನ ಮನಸ್ಸು ಪ್ರಸನ್ನವಾಗುತ್ತದೆ. ನಿನ್ನ ಎರಡೂ

ಕೈಗಳಲ್ಲಿ ವಜ್ರವಿರುವದೆಂಬುದನ್ನು ನಾವು ಬಲ್ಲೆವು. ಶತ್ರುವಿನ ಎಲ್ಲ ವೀರ್ಯಗಳನ್ನು ಛಿನ್ನಗೊಳಿಸಯ್ಯಾ. ॥ ೭ ॥

೬೦೭. ವಿ ಜಾನೀಹ್ಯಾರ್ಯಾನ್ ಯೇ ಚ ದಸ್ಯವೋ ಬರ್ಹಿಷ್ಮತೇ
ರಂಧಯಾ ಶಾಸದವ್ರತಾನ್ ।
ಶಾಕೀ ಭವ ಯಜಮಾನಸ್ಯ ಚೋದಿತಾ ವಿಶ್ವೇತ್ ತಾ ತೇ
ಸಧಮಾದೇಷು ಚಾಕನ ॥ ೮ ॥

ಇಂದ್ರನೇ! ಯಾರು ಆರ್ಯರು ಮತ್ತು ಯಾರು ದಸ್ಯುಗಳು, ಎಂಬುದನ್ನು ಚನ್ನಾಗಿ ತಿಳಿದುಕೋ. ಯಜ್ಞದ ವಿರೋಧಿಗಳನ್ನು ಶಿಕ್ಷಿಸಿ ಅವರನ್ನು ಯಜಮಾನರ ವಶದಲ್ಲಿ ತಾರಯ್ಯಾ. ನೀನು ಶಕ್ತಿಶಾಲಿಯಾಗಿರುವೆಯಾದ್ದರಿಂದ ಯಜ್ಞಾನುಷ್ಠಾತರಿಗೆ ಸಹಾಯಮಾಡು. ನಾನು ನಿನಗೆ ಹರ್ಷೋತ್ಪಾದಕವಾದ ಯಜ್ಞದಲ್ಲಿ, ನಿನ್ನ ಆ ಎಲ್ಲ ಉದ್ಯಮಗಳನ್ನು ಪ್ರಶಂಸಿಸುವ ಇಚ್ಛೆಯುಳ್ಳವನಾಗಿರುತ್ತೇನೆ. ॥ ೮ ॥

೬೦೮. ಅನುವ್ರತಾಯ ರಂಧಯನ್ನಪವ್ರತಾ—ನಾಭೂಭಿರಿಂದ್ರಃ
ಶ್ನಥಯನ್ನನಾಭುವಃ ।
ವೃದ್ಧಸ್ಯ ಚಿದ್ ವರ್ಧತೋ ದ್ಯಾಮಿನಕ್ಷತಃ ಸ್ತವಾನೋ ವಮ್ರೋ
ವಿ ಜಘಾನ ಸಂದಿಹಃ ॥ ೯ ॥

ಇಂದ್ರನು ಯಜ್ಞವಿಮುಖರನ್ನು ಯಜ್ಞಪ್ರಿಯರಾದ ಯಜಮಾನರ ವಶದಲ್ಲಿ ತಂದು, ಅಭಿಮುಖರಾದ ಸ್ತೋತಾರರಿಂದ ಸ್ತುತಿ-ಪರಾಙ್ಮುಖರನ್ನು ಧ್ವಂಸಗೊಳಿಸಿ ಅಧಿಷ್ಠಾನವನ್ನು ಮಾಡುತ್ತಾನೆ. 'ವಮ್ರ' ಋಷಿಯು ವರ್ಧನಶೀಲನಾದ ಮತ್ತು ಸ್ವರ್ಗವ್ಯಾಪಿಯಾದ ಇಂದ್ರನ ಸ್ತುತಿಯನ್ನು ಮಾಡುತ್ತ ಮಾಡುತ್ತ ಸಂಚಿತವಾದ ದ್ರವ್ಯಸಮೂಹವನ್ನು ಒಯ್ದಿದ್ದನು. ॥ ೯ ॥

೬೦೯. ತಕ್ಷದ್ ಯತ್ ತ ಉಶನಾ ಸಹಸಾ ಸಹೋ ವಿ ರೋದಸೀ
ಮಜ್ಮನಾ ಬಾಧತೇ ಶವಃ ।
ಆ ತ್ವಾ ವಾತಸ್ಯ ನೃಮಣೋ ಮನೋಯುಜ ಆ ಪೂರ್ಯಮಾಣ-
ಮವಹನ್ನಭಿ ಶ್ರವಃ ॥ ೧೦ ॥

ಇಂದ್ರನೇ! ಯಾವಾಗ್ಗೆ ಉಶನಸ್ಸನ ಬಲದಿಂದ ನಿನ್ನ ಬಲವು ತೀಕ್ಷ್ಣವಾಗಿತ್ತೋ, ಆ ಕಾಲದಲ್ಲಿ ನಿನ್ನ ಬಲವು ವಿಶುದ್ಧವಾದ ತೀಕ್ಷ್ಣತೆಯಿಂದ ದ್ಯುಲೋಕವನ್ನು ಮತ್ತು ಪೃಥಿವೀಲೋಕವನ್ನು ಹೆದರಿಸಿದ್ದಿತ್ತು. ಇಂದ್ರನೇ!

ನಿನ್ನ ಮನಸ್ಸು ಮನುಷ್ಯರ ಮೇಲೆ ಪ್ರಸನ್ನವಾಗುತ್ತದೆ. ನೀನು ಬಲಶಾಲಿಯಾದ ಮೇಲೆ ನಿನ್ನ ಇಚ್ಛಾನುಸಾರವಾಗಿ ಸಂಯೋಜಿತವಾಗುವ ಮತ್ತು ಗಾಳಿಯಂತೆ ಶ್ರೇಷ್ಠವಾದ ವೇಗವುಳ್ಳ ಕುದುರೆಗಳು ನಿನ್ನನ್ನು ನಮ್ಮ ಯಜ್ಞಾನ್ನದ ಕಡೆಗೆ ತರಲಿ. ॥ ೧೦ ॥

## [ವರ್ಗಃ ೧೧]

೬೧೦. ಮಂದಿಷ್ಟ ಯದುಶನೇ ಕಾವ್ಯೇ ಸಚಾ ಇಂದ್ರೋ ವಂಕೂ
ವಂಕುತರಾಧಿ ತಿಷ್ಠತಿ ।
ಉಗ್ರೋ ಯಯಿಂ ನಿರಪಃ ಸ್ರೋತಸಾಸೃಜದ್ ವಿ ಶುಷ್ಣಸ್ಯ
ದೃಂಹಿತಾ ಐರಯತ್ ಪುರಃ ॥ ೧೧ ॥

ಶೋಭಿಸುವ ಉಶನಸ್ಸನು ಇಂದ್ರನನ್ನು ಸ್ತುತಿಸುವಾಗ್ಗೆ, ಇಂದ್ರನು ವಕ್ರಗತಿಯುಳ್ಳ ರಥಕ್ಕೆ ವಕ್ರಗತಿಯುಳ್ಳ ಎರಡು ಕುದುರೆಗಳನ್ನು ಕಟ್ಟಿ, ಆ ರಥದಲ್ಲಿ ಆಸೀನನಾಗಿದ್ದನು. ಉಗ್ರನಾದ ಇಂದ್ರನು ಗಮನಶೀಲವಾದ ಮೋಡಗಳಿಂದ ನೀರನ್ನು, ಪ್ರವಾಹರೂಪಿನಲ್ಲಿ, ಮಳೆಗರೆಸಿದ್ದನು. ಸಂಗಡವೇ, ಶುಷ್ಣಾಸುರನ ವಿಸ್ತೀರ್ಣವಾದ ನಗರಗಳನ್ನೂ ಕೂಡ ಧ್ವಂಸಿಸಿದ್ದನು. ॥ ೧೧ ॥

೬೧೧. ಆ ಸ್ಮಾ ರಥಂ ವೃಷಪಾಣೇಷು ತಿಷ್ಠಸಿ ಶಾರ್ಯಾತಸ್ಯ ಪ್ರಭೃತಾ
ಯೇಷು ಮಂದಸೇ ।
ಇಂದ್ರ ಯಥಾ ಸುತಸೋಮೇಷು ಚಾಕನೋಽನರ್ವಾಣಂ
ಶ್ಲೋಕಮಾ ರೋಹಸೇ ದಿವಿ ॥ ೧೨ ॥

ಇಂದ್ರನೇ! ಸೋಮಪಾನದ ಸಲುವಾಗಿ ರಥದ ಮೇಲೆ ಕುಳಿತುಕೊಂಡು ಗಮನಮಾಡಯ್ಯಾ. ಯಾವ ಸೋಮರಸದಿಂದ ನೀನು ಪ್ರಸನ್ನನಾಗುತ್ತೀಯೋ, ಅದೇ ಸೋಮರಸವನ್ನು 'ಶಾರ್ಯಾತ'ನೆಂಬ ರಾಜರ್ಷಿಯು ತಯಾರಿಸಿರುವನು; ಆದ್ದರಿಂದಲೇ ಅನ್ಯ ಯಜ್ಞಗಳಲ್ಲಿ ನೀನು ಯಾವ ರೀತಿಯಲ್ಲಿ, ತಯಾರಿಸಿದ ಸೋಮರಸವನ್ನು ಕುಡಿಯುತ್ತಿಯೋ, ಅದೇ ತರಹದಲ್ಲಿ 'ಶಾರ್ಯಾತ'ನ ಸೋಮರಸವನ್ನಾದರೂ ಪಾನಮಾಡಯ್ಯಾ. ಹೀಗೆ ಮಾಡುವದರಿಂದ ದಿವ್ಯ ಲೋಕದಲ್ಲಿ ಅವಿಚಲವಾದ ಯಶವನ್ನು ಹೊಂದುವೆ. ॥ ೧೨ ॥

೬೧೨. ಅದದಾ ಅರ್ಭಾಂ ಮಹತೇ ವಚಸ್ಯವೇ ಕಕ್ಷೀವತೇ
ವೃಚಯಾಮಿಂದ್ರ ಸುನ್ವತೇ ।
ಮೇನಾಭವೋ ವೃಷಣಶ್ವಸ್ಯ ಸುಕ್ರತೋ ವಿಶ್ವೇತ್ ತಾ ತೇ
ಸವನೇಷು ಪ್ರವಾಚ್ಯಾ ॥ ೧೩ ॥

ಇಂದ್ರನೇ! ನೀನು ಅಭಿಷವಕಾರಿಯಾದ ಮತ್ತು ಸ್ತುತ್ಯಾಕಾಂಕ್ಷಿಯಾದ ವೃದ್ಧ 'ಕಕ್ಷೀವಂತ' ಅರಸನಿಗೆ 'ವೃಚಯಾ' ಎಂಬ ಹೆಸರಿನ ಯುವತಿಯಾದ ಸ್ತ್ರೀಯನ್ನು ಕೊಟ್ಟೆ. ಶೋಭನಕರ್ಮಿಯಾದ ಇಂದ್ರನೇ! ನೀನು 'ವೃಷಣಶ್ವ' ನೆಂಬ ಅರಸನಿಗೆ 'ಮೇನಾ' ಎಂಬ ಹೆಸರಿನ ಕನ್ಯೆಯಾಗಿ ಹುಟ್ಟಿದೆ. ಅಭಿಷವಣ-ಸಮಯದಲ್ಲಿ ಈ ಎಲ್ಲ ವಿಷಯಗಳನ್ನು ಬಣ್ಣಿಸಬೇಕು. ॥ ೧೩ ॥

೬೧೩. ಇಂದ್ರೋ ಅಶ್ರಾಯಿ ಸುಧ್ಯೋ ನಿರೇಕೇ ಪಜ್ರೇಷು ಸ್ತೋಮೋ
ದುರ್ಯೋ ನ ಯೂಪಃ ।
ಅಶ್ವಯುರ್ಗವ್ಯೂ ರಥಯುರ್ವಸೂಯುರಿಂದ್ರ ಇದ್ರಾಯಃ
ಕ್ಷಯತಿ ಪ್ರಯಂತಾ ॥ ೧೪ ॥

ಶೋಭಿಸುವ ಕೆಲಸಗಳನ್ನು ಮಾಡುವ ಆದರೆ ನಿರ್ಧನರಾಗಿರುವಂಥ ಜನರು ತಮ್ಮ ರಕ್ಷಣೆಗಾಗಿ ಇಂದ್ರನ ಸೇವೆಯನ್ನು ಮಾಡಬೇಕು. 'ಪಜ್ರ' ವಂಶದವರ ಅಥವಾ ಅಂಗಿರಸನ ವಂಶಸ್ಥರ ಈ ಸ್ತೋತ್ರಗಳು, ಬಾಗಿಲಲ್ಲಿ ನಿಂತ ಕಂಬಗಳಂತೆ ಅಚಲವಾಗಿರುವವು. ಧನದಾತಾರನಾದ ಇಂದ್ರನು ಯಜಮಾನರ ಸಲುವಾಗಿ ಕುದುರೆ, ಗೋವು ಮತ್ತು ರಥಗಳ ಇಚ್ಛೆಯನ್ನು ಮಾಡುತ್ತಾನೆ; ಇದೂ ಅಲ್ಲದೆ ವಿಧವಿಧವಾದ ಧನ-ಸಂಪತ್ತಿಗಳ ಕಾಮನೆಯನ್ನೂ ಮಾಡಿ, ಅಧಿಷ್ಠಿತಗೊಳಿಸುತ್ತಾನೆ. ॥ ೧೪ ॥

೬೧೪. ಇದಂ ನಮೋ ವೃಷಭಾಯ ಸ್ವರಾಜೇ ಸತ್ಯಶುಷ್ಮಾಯ ತವಸೇಽವಾಚಿ ।
ಅಸ್ಮಿನ್ನಿಂದ್ರ ವೃಜನೇ ಸರ್ವವೀರಾಃ ಸ್ಮತ್ ಸೂರಿಭಿಸ್ತವ
ಶರ್ಮನ್ತ್ಸ್ಯಾಮ ॥ ೧೫ ॥

ಇಂದ್ರನೇ! ಮಳೆಯನ್ನು ಸುರಿಸಯ್ಯಾ. ನೀನು ಸ್ವತೇಜಸ್ಸಿನಿಂದ ಸ್ವರಾಜ್ಯವನ್ನು ನಡೆಸುವೆ. ನೀನು ಪ್ರಕೃತಬಲಸಂಪನ್ನನೂ, ಅತ್ಯಂತ ದೊಡ್ಡವನೂ ಆಗಿರುವೆ. ನಾವು ನಿನಗಾಗಿಯೇ ಈ ಸ್ತುತಿವಾಕ್ಯಗಳ ಪ್ರಯೋಗವನ್ನು ಮಾಡಿರುತ್ತೇವೆ. ನಾವು ಈ ಯುದ್ಧದಲ್ಲಿ ಎಲ್ಲ ವೀರರಿಂದ ಸಂಯುಕ್ತರಾಗಿ, ನೀನು ಕೊಟ್ಟ ಸುಂದರವಾದ ಮನೆಯಲ್ಲಿ ವಿದ್ವಾಂಸರೊಂದಿಗೆ ವಾಸಮಾಡುವಂತಾಗಲಿ. ॥ ೧೫ ॥

## ಸೂಕ್ತ: ೫೨

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಸವ್ಯನು; ಛಂದಸ್ಸು: ತ್ರಿಷ್ಟುಪ್ ಮತ್ತು ಜಗತೀ.

## [ವರ್ಗಃ ೧೨]

೬೧೫. ತ್ಯಂ ಸು ಮೇಷಂ ಮಹಯಾ ಸ್ವರ್ವಿದಂ ಶತಂ ಯಸ್ಯ ಸುಭ್ವಃ
ಸಾಕಮೀರತೇ ।

ಅತ್ಯಂ ನ ವಾಜಂ ಹವನಸ್ಯದಂ ರಥ—ಮೇಂದ್ರಂ ವವೃತ್ಯಾಮವಸೇ
ಸುವೃಕ್ತಿಭಿಃ ॥ ೧ ॥

ಯಾವಾತನ ಸ್ತುತಿಕಾರ್ಯದಲ್ಲಿ ನೂರು ಸ್ತೋತಾರರು ಒಂದೇ ಸ್ವರದಲ್ಲಿ ಪ್ರವೃತ್ತರಾಗುತ್ತಾರೋ ಮತ್ತು ಯಾವಾತನು ಸ್ವರ್ಗದರ್ಶನವನ್ನು ಮಾಡಿಸುತ್ತಾನೋ, ಅಂಥ ಬಲಶಾಲಿಯಾದ ಇಂದ್ರನನ್ನು ಪೂಜಿಸಿರಿ. ಗತಿಶೀಲವಾದ ಕುದುರೆಯಂತೆ ಇಂದ್ರನ ರಥವು ಯಜ್ಞದ ಕಡೆಗೆ ಧಾವಿಸುತ್ತಿದೆ. ನಾನು ನನ್ನ ರಕ್ಷಣೆಗಾಗಿ ಅದೇ ರಥದ ಮೇಲೆ ಹತ್ತುವದಕ್ಕೆ ಸ್ತುತಿಯ ಮುಖಾಂತರವಾಗಿ ಇಂದ್ರನ ಹತ್ತರ ಅನುರೋಧಮಾಡುತ್ತೇನೆ. ॥ ೧ ॥

೬೧೬. ಸ ಪರ್ವತೋ ನ ಧರುಣೇಷ್ವಚ್ಯುತಃ ಸಹಸ್ರಮೂತಿಸ್ತವಿಷೀಷು
ವಾವೃಧೇ ।
ಇಂದ್ರೋ ಯದ್ ವೃತ್ರಮವಧೀನ್ನದೀವೃತ—ಮುಬ್ಜನ್ನರ್ಣಾಂಸಿ
ಜರ್ಹೃಷಾಣೋ ಅಂಧಸಾ ॥ ೨ ॥

ಯಾವ ಕಾಲದಲ್ಲಿ ಯಜ್ಞಾನ್ನಪ್ರಿಯನಾದ ಇಂದ್ರನು ಜಲವರ್ಷಣವನ್ನು ಮಾಡಿ ನದಿಯನ್ನು ಪ್ರತಿರೋಧಿಸಿದ ವೃತ್ರನನ್ನು ವಧಿಸಿದನೋ, ಆ ಕಾಲದಲ್ಲಿ ಇಂದ್ರನು ಧಾರಾವಾಹಿಯಾದ ಜಲಮಧ್ಯದಲ್ಲಿ ಪರ್ವತದಂತೆ ಅಚಲನಾಗಿ ಮತ್ತು ಪ್ರಜೆಗಳನ್ನು ಸಾವಿರಾರು ರೀತಿಯಲ್ಲಿ ಕಾಪಾಡಿಕೊಂಡು, ಯಥೇಷ್ಟವಾದ ಬಲವನ್ನು ಸಂಚಯಮಾಡಿದನು. ॥ ೨ ॥

೬೧೭. ಸ ಹಿ ದ್ವರೋ ದ್ವರಿಷು ವವ್ರ ಊಧನಿ ಚಂದ್ರಬುಧ್ನೋ
ಮದವೃದ್ಧೋ ಮನೀಷಿಭಿಃ ।
ಇಂದ್ರಂ ತಮಹ್ವೇ ಸ್ವಪಸ್ಯಯಾ ಧಿಯಾ ಮಂಹಿಷ್ಠರಾತಿಂ ಸ ಹಿ
ಪಪ್ರಿರಂಧಸಃ ॥ ೩ ॥

ಇಂದ್ರನು ನಾಲ್ಕು ಬದಿಗಳಿಂದ ಆವರಿಸಿರುವ ಶತ್ರುಗಳನ್ನು ಜಯಿಸಿದನು. ಇಂದ್ರನು ನೀರಿನಂತೆ ಅಂತರಿಕ್ಷದಲ್ಲಿ ವ್ಯಾಪ್ತನಾಗಿರುವನು. ಇಂದ್ರನು ಎಲ್ಲರ ಸಂತೋಷಕ್ಕೆ ಮೂಲನಾಗಿರುವನು. ಅವನು ಸೋಮರಸವನ್ನು ಕುಡಿದು ವರ್ಧಿತನಾಗಿರುವನು. ನಾನು, ವಿದ್ವಾಂಸರಾದ ಋತ್ವಿಜರೊಂದಿಗೆ, ಆ ಪ್ರವೃದ್ಧನಾದ ಮತ್ತು ಧನಸಂಪನ್ನನಾದ ಇಂದ್ರನನ್ನು ಶೋಭಿಸುವ ಕೆಲಸಗಳಿಗೆ ಯೋಗ್ಯವಾದ ಅಂತಃಕರಣವುಳ್ಳವನಾಗಿ ಆಹ್ವಾನಿಸುತ್ತೇನೆ; ಯಾಕೆಂದರೆ ಇಂದ್ರನು ನಮಗೆ ಅನ್ನವನ್ನು ಪೂರಯಿಸುತ್ತಾನೆ. ॥ ೩ ॥

೬೧೮. ಆ ಯಂ ಪೃಣಂತಿ ದಿವಿ ಸದ್ಮಬರ್ಹಿಷಃ ಸಮುದ್ರಂ ನ ಸುಭ್ವಃ
ಸ್ವಾ ಅಭಿಷ್ಟಯಃ ।

ತಂ ವೃತ್ರಹತ್ಯೇ ಅನು ತಸ್ಥುರೂತಯಃ ಶುಷ್ಮಾ ಇಂದ್ರಮವಾತಾ
ಅಹ್ರುತಪ್ಸವಃ ॥ ೪ ॥

ಯಾವ ರೀತಿಯಲ್ಲಿ ಸಮುದ್ರದ ಆತ್ಮಭೂತಗಳಾದ ಮತ್ತು ಅಭಿಮುಖ ಗಾಮಿಗಳಾದ ನದಿಗಳು ಸಮುದ್ರವನ್ನು ಕೂಡುವವೋ, ಅದೇ ರೀತಿಯಲ್ಲಿ ಕುಶಸ್ಥಿತವಾದ ಸೋಮರಸವು ದಿವ್ಯಲೋಕದಲ್ಲಿರುವ ಇಂದ್ರನನ್ನು ಸೇರುವದು. ಶತ್ರುಗಳನ್ನು ಶೋಷಿಸುವ, ಅಪ್ರತಿಹತವಾದ ಗತಿಯುಳ್ಳ ಮತ್ತು ಸುಶೋಭಿಸುವ ಮರುದ್ಗಣವು, ವೃತ್ರಹನನದ ಸಮಯದಲ್ಲಿ ಅದೇ ಇಂದ್ರನ ಸಹಾಯಕವಾಗಿ, ಸಮೀಪದಲ್ಲಿಯೇ ಉಪಸ್ಥಿತವಿತ್ತು. ॥ ೪ ॥

೬೧೯. ಅಭಿ ಸ್ವವೃಷ್ಟಿಂ ಮದೇ ಅಸ್ಯ ಯುಧ್ಯತೋ ರಘ್ವೀರಿವ
ಪ್ರವಣೇ ಸಸ್ರುರೂತಯಃ ।
ಇಂದ್ರೋ ಯದ್ ವಜ್ರೀ ಧೃಷಮಾಣೋ ಅಂಧಸಾ ಭಿನದ್
ವಲಸ್ಯ ಪರಿಧೀರಿವ ತ್ರಿತಃ ॥ ೫ ॥

ಯಾವ ರೀತಿಯಲ್ಲಿ ಗತಿಶೀಲವಾದ ಜಲವು ಕೆಳಗಡೆಗೆ ಹರಿಯುತ್ತಿರುವದೋ, ಅದೇ ರೀತಿಯಲ್ಲಿ ಇಂದ್ರನ ಸಹಾಯಕರಾದ ಮಾರುತರು ಸೋಮಪಾನದಿಂದ ಸಂತೋಷಿತರಾಗಿ ಯುದ್ಧಲಿಪ್ತನಾದ ಇಂದ್ರನ ಸಮ್ಮುಖದಲ್ಲಿಯೇ ವೃಷ್ಟಿಸಂಪನ್ನನಾದ ವೃತ್ರಾಸುರನ ಸಮೀಪಕ್ಕೆ ಧಾವಿಸಿದರು. ಯಾವ ರೀತಿಯಲ್ಲಿ ತ್ರಿತನು ಪರಿಧಿಸಮುದಾಯವನ್ನು ಭೇದಿಸಿದ್ದನೋ, ಅದೇ ರೀತಿಯಲ್ಲಿ ಇಂದ್ರನು ಯಜ್ಞದಲ್ಲಿಯ ಅನ್ನದಿಂದ ಪ್ರೋತ್ಸಾಹಿತನಾಗಿ ಬಲನೆಂಬ ಅಸುರನನ್ನು ಭೇದಿಸಿದ್ದನು. ॥ ೫ ॥

## [ವರ್ಗಃ ೧೩]

೬೨೦. ಪರೀಂ ಘೃಣಾ ಚರತಿ ತಿತ್ವಿಷೇ ಶವೋಽಪೋ ವೃತ್ವೀ ರಜಸೋ
ಬುಧ್ನಮಾಶಯತ್ ।
ವೃತ್ರಸ್ಯ ಯತ್ ಪ್ರವಣೇ ದುರ್ಗೃಭಿಶ್ವನೋ ನಿಜಘಂಥ
ಹನ್ವೋರಿಂದ್ರ ತನ್ಯತುಂ ॥ ೬ ॥

ಜಲವನ್ನು ನಿರೋಧಿಸಿ ಯಾವ ವೃತ್ರಾಸುರನು ಅಂತರಿಕ್ಷದ ಮೇಲೆ ಮಲಗಿದ್ದನೋ ಮತ್ತು ಯಾವಾತನ ಆಸ್ಥಾನದಲ್ಲಿ ನಿಸ್ಸೀಮವಾದ ವ್ಯಾಪ್ತಿಯಿರುವದೋ, ಅಂಥ ವೃತ್ರಾಸುರನ ಮೊಣಕೈಗಳನ್ನು, ಇಂದ್ರನೇ! ನೀನು ನಿನ್ನ ನಿನಾದಮಾಡುತ್ತಿರುವ ವಜ್ರದಿಂದ, ಯಾವ ಕಾಲಕ್ಕೆ ಗಾಯಗೊಳಿಸಿದೆಯೋ, ಆ ವೇಳೆಯಲ್ಲಿ ನಿನ್ನ ಶತ್ರುಗಳನ್ನು ಜಯಿಸುವ ದೀಪ್ತಿಯು ವಿಸ್ತೃತವಾಗಿತ್ತು ಮತ್ತು ನಿನ್ನ ಬಲವು ಪ್ರದೀಪ್ತವಾಗಿತ್ತು. ॥ ೬ ॥

೬೨೧. ಹ್ರದಂ ನ ಹಿ ತ್ವಾ ನ್ಯೃಷಂತ್ಯೂರ್ಮಯೋ ಬ್ರಹ್ಮಾಣೀಂದ್ರ
ತವ ಯಾನಿ ವರ್ಧನಾ ।
ತ್ವಷ್ಟಾ ಚಿತ್ ತೇ ಯುಜ್ಯಂ ವಾವೃಧೇ ಶವ—ಸ್ತತಕ್ಷ
ವಜ್ರಮಭಿಭೂತ್ಯೋಜಸಂ ॥ ೭ ॥

ಇಂದ್ರನೇ! ಯಾವ ರೀತಿಯಲ್ಲಿ ನೀರಿನ ಪ್ರವಾಹವು ಜಲಾಶಯಕ್ಕೆ ಪ್ರಾಪ್ತವಾಗುವದೋ, ಅದೇ ರೀತಿಯಲ್ಲಿ ನಿನ್ನನ್ನನುಲಕ್ಷಿಸಿ ಸ್ತೋತ್ರಗಳು ನಿನಗೆಯೇ ಪ್ರಾಪ್ತವಾಗುತ್ತವೆ. ತ್ವಷ್ಟಾರನು ನಿನಗೆ ಯೋಗ್ಯವಾದ ಬಲವನ್ನು ವೃದ್ಧಿಗೊಳಿಸಿದನು ಮತ್ತು ಆ ಶತ್ರುವಿಜಯಿಯಾದ ಬಲದಿಂದ ಸಂಯುಕ್ತನಾದ ವಜ್ರಾಯುಧವನ್ನು ಅತ್ಯಂತ ತೀಕ್ಷ್ಣಗೊಳಿಸಿದನು. ॥ ೭ ॥

೬೨೨. ಜಘನ್ವಾँ ಉ ಹರಿಭಿಃ ಸಂಭೃತಕ್ರತ—ವಿಂದ್ರ ವೃತ್ರಂ
ಮನುಷೇ ಗಾತುಯನ್ನಪಃ ।
ಅಯಚ್ಛಥಾ ಬಾಹ್ವೋರ್ವಜ್ರಮಾಯಸ—ಮಧಾರಯೋ ದಿವ್ಯಾ
ಸೂರ್ಯಂ ದೃಶೇ ॥ ೮ ॥

ಉದ್ಯಮಗಳಲ್ಲಿ ಸಿದ್ಧಿಯನ್ನು ದೊರಕಿಸಿದ ಇಂದ್ರನೇ! ಮಾನವರ ಸಾನ್ನಿಧ್ಯದಲ್ಲಿ ಬರುವದಕ್ಕಾಗಿ ನೀನು ಅಶ್ವಯುಕ್ತನಾಗಿ ವೃತ್ರವಿನಾಶವನ್ನು ಮಾಡಿದೆ, ವೃಷ್ಟಿಯನ್ನು ಮಾಡಿದೆ, ಎರಡೂ ಕೈಗಳಿಂದ ಆಯಸ್-ವಜ್ರವನ್ನು ಹಿಡಿದಿರುವೆ ಮತ್ತು ನಾವು ನೋಡಲೆಂದು ಆಕಾಶದಲ್ಲಿ ಸೂರ್ಯನನ್ನು ಸ್ಥಾಪಿಸಿರುವೆ. ॥ ೮ ॥

೬೨೩. ಬೃಹತ್ ಸ್ವಶ್ಚಂದ್ರಮಮವದ್ ಯದುಕ್ಥ್ಯ೧—ಮಕೃಣ್ವತ
ಭಿಯಸಾ ರೋಹಣಂ ದಿವಃ ।
ಯನ್ಮಾನುಷಪ್ರಧನಾ ಇಂದ್ರಮೂತಯಃ ಸ್ವರ್ನೃಷಾಚೋ
ಮರುತೋಽಮದನ್ನನು ॥ ೯ ॥

ವೃತ್ರನ ಭೀತಿಯಿಂದ ಸ್ತೋತಾರರು ಸ್ತೋತ್ರಗಳ ಅನುಧ್ಯಾನವನ್ನು ಮಾಡಿದ್ದರು. ಆ ಸ್ತೋತ್ರಗಳು ಬೃಹದಾಕಾರದವೂ, ಆಹ್ಲಾದಸಂಯುಕ್ತವಾದವುಗಳೂ, ಬಲಸಂಪನ್ನವಾದವುಗಳೂ, ಸ್ವರ್ಗದ ಸೋಪಾನಗಳೂ ಆಗಿರುವವು. ಸ್ವರ್ಗರಕ್ಷಕರಾದ ಮಾರುತರು ಆ ಸಮಯದಲ್ಲಿ ಮನುಷ್ಯರ ಸಲುವಾಗಿ ಯುದ್ಧವನ್ನು ಹೂಡಿ ಮತ್ತು ಅದರಲ್ಲಿ ಅವರನ್ನು ಚನ್ನಾಗಿ ಕಾಪಾಡಿಕೊಂಡು, ಇಂದ್ರನನ್ನು ಪ್ರೋತ್ಸಾಹಿಸಿದ್ದರು. ॥ ೯ ॥

೬೨೪. ದ್ಯಾಶ್ಚಿದಸ್ಯಾಮವಾ ಅಹೇಃ ಸ್ವನಾ—ದಯೋಯವೀದ್
ಭಿಯಸಾ ವಜ್ರ ಇಂದ್ರ ತೇ ।
ವೃತ್ರಸ್ಯ ಯದ್ ಬದ್ಬಧಾನಸ್ಯ ರೋದಸೀ ಮದೇ ಸುತಸ್ಯ
ಶವಸಾಭಿನಚ್ಛಿರಃ ॥ ೧೦ ॥

ಇಂದ್ರನೇ! ಅಭಿಷುತವಾದ ಸೋಮರಸವನ್ನು ಕುಡಿದು ನೀನು ಹೃಷ್ಟನಾದ ಮೇಲೆ ಯಾವ ಕಾಲದಲ್ಲಿ ನಿನ್ನ ವಜ್ರವು ದ್ಯುಲೋಕಕ್ಕೆ ಮತ್ತು ಪೃಥಿವೀಲೋಕಕ್ಕೆ ಬಾಧಕನಾದ ವೃತ್ರಾಸುರನ ಮಸ್ತಕವನ್ನು ವೇಗದಿಂದ ಭೇದಿಸಿತ್ತೋ, ಆ ಕಾಲದಲ್ಲಿ ಮಹಾಬಲಶಾಲಿಯಾದ ಆಕಾಶವೂ ಕೂಡ ಆ ಶಬ್ದದ ಭಯದಿಂದ ಕಂಪಿತವಾಗಿತ್ತು. ॥ ೧೦ ॥

## [ವರ್ಗ: ೧೪]

೬೨೫. ಯದಿನ್ನ್ವಿಂದ್ರ ಪೃಥಿವೀ ದಶಭುಜಿ—ರಹಾನಿ ವಿಶ್ವಾ
ತತನಂತ ಕೃಷ್ಟಯಃ ।
ಅತ್ರಾಹ ತೇ ಮಘವನ್ ವಿಶ್ರುತಂ ಸಹೋ ದ್ಯಾಮನು ಶವಸಾ
ಬರ್ಹಣಾ ಭುವತ್ ॥ ೧೧ ॥

ಇಂದ್ರನೇ! ಈ ಪೃಥಿವಿಯು ಈಗಿರುವದಕ್ಕಿಂತಲೂ ಹತ್ತು ಪಟ್ಟು ದೊಡ್ಡದಾಗಿದ್ದರೂ ಸಹ ಮತ್ತು ಮನುಷ್ಯರು ಯಾವಾಗಲೂ ಜೀವಿತರಾಗಿರುತ್ತಿದ್ದರೂ ಕೂಡ, ನಿನ್ನ ಶಕ್ತಿಯು, ಇದೇ ರೂಪಿನಲ್ಲಿ, ಸರ್ವತ್ರವೂ ಪ್ರಸಿದ್ಧವಾಗುತ್ತಿತ್ತು. ನಿನ್ನ ಬಲದಿಂದ ಸಾಧಿತವಾದ ಕ್ರಿಯೆಗಳು ಆಕಾಶದಂತೆ ವಿಶಾಲವಾಗಿರುವವು. ॥ ೧೧ ॥

೬೨೬. ತ್ವಮಸ್ಯ ಪಾರೇ ರಜಸೋ ವ್ಯೋಮನಃ ಸ್ವಭೂತ್ಯೋಜಾ
ಅವಸೇ ಧೃಷನ್ಮನಃ ।
ಚಕೃಷೇ ಭೂಮಿಂ ಪ್ರತಿಮಾನಮೋಜಸೋ—ಽಪಃ ಸ್ವಃ
ಪರಿಭೂರೇಷ್ಯಾ ದಿವಂ ॥ ೧೨ ॥

ಅರಿಮರ್ದನನಾದ ಇಂದ್ರನೇ! ಈ ವ್ಯಾಪಕವಾದ ಅಂತರಿಕ್ಷದ ಮೇಲೆ ವಾಸಮಾಡಿ ನಿನ್ನ ಸ್ವಂತ ಭುಜಬಲದಿಂದ ನೀನು, ನಮ್ಮನ್ನು ಕಾಪಾಡುವದಕ್ಕಾಗಿ, ಭೂಲೋಕವನ್ನು ಸೃಷ್ಟಿಸಿದೆ. ನೀನು ಸ್ವತಃ ಬಲಕ್ಕೆ ಪರಿಮಾಣನಾಗಿರುವೆ. ನೀನು ಸುಗಂತವ್ಯವಾದ ಅಂತರಿಕ್ಷ ಮತ್ತು ಸ್ವರ್ಗಗಳನ್ನು ವ್ಯಾಪಿಸಿರುವೆ. ॥ ೧೨ ॥

೬೨೭. ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಋಷ್ವವೀರಸ್ಯ
ಬೃಹತಃ ಪತಿರ್ಭೂಃ ।

ವಿಶ್ವಮಾಪ್ರಾ ಅಂತರಿಕ್ಷಂ ಮಹಿತ್ವಾ ಸತ್ಯಮದ್ಧಾ ನಕಿರನ್ಯಸ್ತ್ವಾವಾನ್ ॥ ೧೩ ॥

ನೀನು ವಿಪುಲಾಯತನವಾದ ಪೃಥಿವಿಗೆ ಪರಿಮಾಣನಾಗಿರುವೆ, ಸುಂದರವಾದ ದೇವತೆಗಳು ವಾಸಿಸುವ ಮಹಾಸ್ವರ್ಗದ ಪಾಲಕನಾಗಿರುವೆ. ನಿಜವಾಗಿಯೂ ನೀನು ನಿನ್ನ ಅಪಾರವಾದ ಮಹಿಮೆಯಿಂದ ಸಮಸ್ತ ಅಂತರಿಕ್ಷವನ್ನು ವ್ಯಾಪಿಸಿರುವೆ. ಪರಿಣಾಮಸ್ವರೂಪವಾಗಿ ನಿನಗೆ ಸಮಾನರಾದವರು ಯಾರೂ ಇಲ್ಲ. ॥ ೧೩ ॥

೬೨೮. ನ ಯಸ್ಯ ದ್ಯಾವಾಪೃಥಿವೀ ಅನು ವ್ಯಚೋ ನ ಸಿಂಧವೋ
ರಜಸೋ ಅಂತಮಾನಶುಃ ।
ನೋತ ಸ್ವವೃಷ್ಟಿಂ ಮದೇ ಅಸ್ಯ ಯುಧ್ಯತ ಏಕೋ ಅನ್ಯಚ್ಚಕೃಷೇ
ವಿಶ್ವಮಾನುಷಕ್ ॥ ೧೪ ॥

ಯಾವ ಇಂದ್ರನ ವ್ಯಾಪ್ತಿಯನ್ನು ದ್ಯುಲೋಕ ಮತ್ತು ಪೃಥಿವೀಲೋಕಗಳು ದೊರಕಿಸಲಿಲ್ಲವೋ, ಅಂತರಿಕ್ಷದ ಮೇಲಿರುವ ಪ್ರವಾಹಕ್ಕೂ ಯಾವಾತನ ತೇಜಸ್ಸಿನ ಪಾರವು ಸಿಗಲಿಲ್ಲವೋ, ಇಂದ್ರನೇ! ಅಂಥ ನೀನು ಒಬ್ಬಂಟಿಗನಾಗಿ ಉಳಿದೆಲ್ಲ ಪ್ರಾಣಿಗಳನ್ನು ನಿನ್ನ ವಶದಲ್ಲಿ ಮಾಡಿಕೊಂಡಿರುವೆ. ॥ ೧೪ ॥

೬೨೯. ಆರ್ಚನ್ನತ್ರ ಮರುತಃ ಸಸ್ಮಿನ್ನಾಜೌ ವಿಶ್ವೇ ದೇವಾಸೋ
ಅಮದನ್ನನು ತ್ವಾ ।
ವೃತ್ರಸ್ಯ ಯದ್ ಭೃಷ್ಟಿಮತಾ ವಧೇನ ನಿ ತ್ವಮಿಂದ್ರ ಪ್ರತ್ಯಾನಂ
ಜಘಂಥ ॥ ೧೫ ॥

ಈ ಯುದ್ಧದಲ್ಲಿ ಮಾರುತರು ನಿನ್ನನ್ನು ಅರ್ಚಿಸಿದ್ದರು. ಯಾವ ಕಾಲದಲ್ಲಿ ನೀನು ತೀಕ್ಷ್ಣಘಾತಕವಾದ ವಜ್ರದಿಂದ ವೃತ್ರನ ಮುಖಕ್ಕೆ ಆಘಾತ ಮಾಡಿದೆಯೋ, ಆ ಕಾಲದಲ್ಲಿ ಎಲ್ಲ ದೇವತೆಗಳು ಸಂಗ್ರಾಮದಲ್ಲಿ ನೀನು ಆನಂದಿತನಾಗಿರುವದನ್ನು ಕಂಡು ಆಹ್ಲಾದಿತರಾಗಿದ್ದರು. ॥ ೧೫ ॥

## ಸೂಕ್ತ: ೫೩

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಸವ್ಯನು; ಛಂದಸ್ಸು: ಜಗತೀ ಮತ್ತು ತ್ರಿಷ್ಟುಪ್.

### [ವರ್ಗ: ೧೫]

೬೩೦. ನ್ಯೂಷು ವಾಚಂ ಪ್ರ ಮಹೇ ಭರಾಮಹೇ ಗಿರ ಇಂದ್ರಾಯ
ಸದನೇ ವಿವಸ್ವತಃ ।

ನೂ ಚಿದ್ಧಿ ರತ್ನಂ ಸಸತಾಮಿವಾವಿದ—ನ್ನ
ದುಷ್ಟುತಿರ್ದ್ರವಿಣೋದೇಷು ಶಸ್ಯತೇ　　॥ ೧ ॥

ನಾವು ಮಹಾಪುರುಷನಾದ ಇಂದ್ರನ ಉದ್ದೇಶದಿಂದ ಶೋಭನೀಯವಾದ ವಾಕ್ಯದ ಪ್ರಯೋಗವನ್ನು ಮಾಡುತ್ತೇವೆ ಮತ್ತು ಸೇವಾವ್ರತವನ್ನು ಮಾಡುವ ಯಜಮಾನರ ಮನೆಯಲ್ಲಿ ಶೋಭನೀಯವಾದ ಸ್ತುತಿವಾಕ್ಯದ ಪ್ರಯೋಗವನ್ನು ಮಾಡುತ್ತೇವೆ. ನಿದ್ರಿತರಾದ ಮನುಷ್ಯರ ಧನದ ಮೇಲೆ ಬೇರೆಯವರು ಅಧಿಕಾರವನ್ನು ಸ್ಥಾಪಿಸುವಂತೆ, ಅಸುರರ ಧನದ ಮೇಲೆ ಇಂದ್ರನು ತ್ವರಿತವಾಗಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಧನದಾತಾರರಲ್ಲಿ ಅನುಚಿತವಾದ ಸ್ತುತಿಯನ್ನು ಮಾಡಬಾರದು.　　॥ ೧ ॥

೬೩೧. ದುರೋ ಅಶ್ವಸ್ಯ ದುರ ಇಂದ್ರ ಗೋರಸಿ ದುರೋ ಯವಸ್ಯ
ವಸುನ ಇನಸ್ಪತಿಃ ।
ಶಿಕ್ಷಾನರಃ ಪ್ರದಿವೋ ಅಕಾಮಕರ್ಶನಃ ಸಖಾ ಸಖಿಭ್ಯಸ್ತಮಿದಂ
ಗೃಣೀಮಸಿ　　॥ ೨ ॥

ಇಂದ್ರನೇ! ನೀನು ಕುದುರೆ, ಆಕಳು, ಮತ್ತು ಜವೆಗೋದಿಯೇ ಮೊದಲಾದ ಧಾನ್ಯ—ಇವುಗಳನ್ನು ದಾನಮಾಡಯ್ಯಾ. ನೀನು ನಿವಾಸಕ್ಕೆ ಹೇತುವೂ, ವಿಪುಲವಾದ ಧನದ ಸ್ವಾಮಿಯೂ, ರಕ್ಷಕನೂ ಆಗಿರುವೆ. ನೀನು ದಾನಿಗಳಲ್ಲಿ ಶ್ರೇಷ್ಠನೂ, ಪ್ರಾಚೀನತಮನಾದ ದೇವತೆಯೂ ಆಗಿರುವೆ. ನೀನು ಯಾವುದೇ ಮನುಷ್ಯನ ಕಾಮನೆಯನ್ನು ವ್ಯರ್ಥಗೊಳಿಸುವದಿಲ್ಲವಯ್ಯಾ, ನೀನು ಯಾಜಕರಿಗೆ ಗೆಳೆಯನಾಗಿರುವೆ. ಅಂಥ ಇಂದ್ರನನ್ನು ಉದ್ದೇಶಿಸಿ ನಾವು ಈ ಸ್ತುತಿಯನ್ನು ಹಾಡುತ್ತಿದ್ದೇವೆ.　　॥ ೨ ॥

೬೩೨. ಶಚೀವ ಇಂದ್ರ ಪುರುಕೃದ್ ದ್ಯುಮತ್ತಮ ತವೇದಿದಮಭಿತಶ್ಚೇಕಿತೇ
ವಸು ।
ಅತಃ ಸಂಗೃಭ್ಯಾಭಿಭೂತ ಆ ಭರ ಮಾ ತ್ವಾಯತೋ ಜರಿತುಃ
ಕಾಮಮೂನಯೀಃ　　॥ ೩ ॥

ಪ್ರಜ್ಞಾವಂತನಾದ, ಅತ್ಯಧಿಕವಾಗಿ ಉದ್ಯಮಶೀಲನಾದ ಮತ್ತು ಬೆಳಗುವ ದೀಪ್ತಿಯುಳ್ಳ ಇಂದ್ರನೇ! ನಾಲ್ಕೂ ದಿಕ್ಕುಗಳಲ್ಲಿ ಯಾವ ಧನವಿರುತ್ತದೆಯೋ, ಅದೆಲ್ಲವೂ ನಿನಗೇ ಸೇರಿದ್ದೆಂಬುದನ್ನು ನಾವು ಬಲ್ಲೆವು. ಶತ್ರುಗಳನ್ನು ನಾಶಗೊಳಿಸುವ ಇಂದ್ರನೇ! ಅದೇ ಧನವನ್ನು ಗ್ರಹಣಮಾಡಿ ನಮಗೆ ದಾನಮಾಡಯ್ಯಾ. ಯಾವ ಸ್ತೋತಾರರು ನಿನ್ನನ್ನಿಚ್ಛಿಸುವರೋ, ಅವರ ಅಭಿಲಾಷೆಯನ್ನು ವ್ಯರ್ಥಮಾಡಬೇಡಯ್ಯಾ.　　॥ ೩ ॥

೬೩೩. ಏಭಿರ್ದ್ಯುಭಿಃ ಸುಮನಾ ಏಭಿರಿಂದುಭಿರ್ನಿರುಂಧಾನೋ
ಅಮತಿಂ ಗೋಭಿರಶ್ವಿನಾ ।
ಇಂದ್ರೇಣ ದಸ್ಯುಂ ದರಯಂತ ಇಂದುಭಿರ್ಯುತದ್ವೇಷಸಃ
ಸಮಿಷಾ ರಭೇಮಹಿ ॥ ೪ ॥

ಇಂದ್ರನೇ! ಈ ಪ್ರಕಾರವಾಗಿ ಹವ್ಯದಿಂದ ಮತ್ತು ಸೋಮರಸದಿಂದ ಸಂತುಷ್ಟನಾಗಿ, ಆಕಳು ಮತ್ತು ಕುದುರೆಗಳೊಂದಿಗೆ ಧನವನ್ನು ದಾನಮಾಡಿ ಮತ್ತು ನಮ್ಮ ದಾರಿದ್ರ್ಯವನ್ನು ದೂರಗೊಳಿಸಿ, ಪ್ರಸನ್ನಮನಸ್ಸಿನವನಾಗಯ್ಯಾ. ಈ ಸೋಮರಸದಿಂದ ಸಂತುಷ್ಟನಾದ ಇಂದ್ರನ ಸಹಾಯದಿಂದ ನಾವು ದಸ್ಯುಗಳನ್ನು ಧ್ವಂಸಗೊಳಿಸಿ ಮತ್ತು ಶತ್ರುಗಳಿಂದ ನಿರ್ಮುಕ್ತರಾಗಿ ಅನ್ನವನ್ನು ಚೆನ್ನಾಗಿ ಭೋಗಿಸುವೆವು. ॥ ೪ ॥

೬೩೪. ಸಮಿಂದ್ರ ರಾಯಾ ಸಮಿಷಾ ರಭೇಮಹಿ ಸಂ ವಾಜೇಭಿಃ
ಪುರುಶ್ಚಂದ್ರೈರಭಿದ್ಯುಭಿಃ ।
ಸಂ ದೇವ್ಯಾ ಪ್ರಮತ್ಯಾ ವೀರಶುಷ್ಮಯಾ ಗೋಅಗ್ರಯಾಶ್ವಾವತ್ಯಾ
ರಭೇಮಹಿ ॥ ೫ ॥

ಇಂದ್ರನೇ! ನಮಗೆ ಧನವೂ, ಅನ್ನವೂ, ಆಹ್ಲಾದಕರವಾದ ಮತ್ತು ದೀಪ್ತಿಶಾಲಿಯಾದ ಬಲವೂ ದೊರಕಲಿ. ನಿನ್ನ ಬೆಳಗುವ ಬುದ್ಧಿಯು ನಮಗೆ ಸಹಾಯಕವಾಗಲಿ. ಆ ಬುದ್ಧಿಯು ವೀರಶತ್ರುಗಳ ಶೋಷಣೆಯನ್ನು ಮಾಡಲಿ. ಅದು ನಮಗೆ ಆಕಳುಗಳನ್ನು, ಪಶುಗಳನ್ನು ಮತ್ತು ಅಶ್ವಗಳನ್ನು ದಾನಮಾಡಲಿ. ॥ ೫ ॥

## [ವರ್ಗಃ ೧೬]

೬೩೫. ತೇ ತ್ವಾ ಮದಾ ಅಮದನ್ ತಾನಿ ವೃಷ್ಣ್ಯಾ ತೇ ಸೋಮಾಸೋ
ವೃತ್ರಹತ್ಯೇಷು ಸತ್ಪತೇ ।
ಯತ್ ಕಾರವೇ ದಶ ವೃತ್ರಾಣ್ಯಪ್ರತಿ ಬರ್ಹಿಷ್ಮತೇ ನಿ
ಸಹಸ್ರಾಣಿ ಬರ್ಹಯಃ ॥ ೬ ॥

ಸಾಧುರಕ್ಷಕನಾದ ಇಂದ್ರನೇ! ವೃತ್ರಾಸುರನ ವಧೆಯ ಕಾಲಕ್ಕೆ ನಿನಗೆ ಅನ್ನವನ್ನು ಕೊಡುವ ಮಾರುತರು ನಿನ್ನನ್ನು ಪ್ರಸನ್ನಗೊಳಿಸಿದ್ದರು. ವರ್ಷಕನಾದ ಇಂದ್ರನೇ! ಯಾವ ಸಮಯದಲ್ಲಿ ನೀನು ಶತ್ರುಗಳಿಂದ ಅಪ್ರತಿಹತನಾಗಿ ಸ್ತೋತಾರರ ಮತ್ತು ಯಜಮಾನರ ಸಲುವಾಗಿ ಹತ್ತು ಸಾವಿರ ಉಪದ್ರವಗಳ

ವಿನಾಶವನ್ನು ಮಾಡಿದೆಯೋ, ಆ ಸಮಯದಲ್ಲಿ ವಿಧವಿಧವಾದ ಹವ್ಯ ಮತ್ತು ಸೋಮರಸ—ಇವೆಲ್ಲವೂ ಕೂಡಿ ನಿನ್ನನ್ನು ಹೃಷ್ಟಗೊಳಿಸಿದವು. ॥ ೬ ॥

೬೩೬. ಯುಧಾ ಯುಧಮುಪ ಘೇದೇಷಿ ಧೃಷ್ಣುಯಾ ಪುರಾ ಪುರಂ
ಸಮಿದಂ ಹಂಸ್ಯೋಜಸಾ ।
ನಮ್ಯಾ ಯದಿಂದ್ರ ಸಖ್ಯಾ ಪರಾವತಿ ನಿಬರ್ಹಯೋ ನಮುಚಿಂ
ನಾಮ ಮಾಯಿನಂ ॥ ೭ ॥

ಇಂದ್ರನೇ! ನೀನು ಶತ್ರುಗಳೊಂದಿಗೆ ಘರ್ಷಣವನ್ನು ಮಾಡುತ್ತೀ. ನೀನು ಸ್ವಂತ ಬಲದಿಂದ ಒಂದೊಂದಾಗಿ ಶತ್ರುನಗರಗಳನ್ನು ಧ್ವಂಸಗೊಳಿಸುತ್ತೀ. ಇಂದ್ರನೇ! ನೀನು, ನಿನ್ನ ವಜ್ರದ ಸಹಾಯದಿಂದ 'ನಮುಚಿ'ಯೆಂಬ ಮಾಯಾವಿಯನ್ನು ದೂರದೇಶದಿಂದಲೇ ತುಂಡರಿಸಿದೆ. ॥ ೭ ॥

೬೩೭. ತ್ವಂ ಕರಂಜಮುತ ಪರ್ಣಯಂ ವಧೀಸ್ತೇಜಿಷ್ಠಯಾತಿಥಿಗ್ವಸ್ಯ
ವರ್ತನೀ ।
ತ್ವಂ ಶತಾ ವಂಗೃದಸ್ಯಾಭಿನತ್ ಪುರೋಽನಾನುದಃ ಪರಿಷೂತಾ
ಋಜಿಶ್ವನಾ ॥ ೮ ॥

'ಅತಿಥಿಗ್ವ'ನೆಂಬ ನಿನ್ನ ಭಕ್ತನಾದ ಅರಸನ ಸಲುವಾಗಿ 'ಕರಂಜ' ಮತ್ತು 'ಪರ್ಣಯ' ನಾಮದ ಅಸುರರನ್ನು, ನೀನು ನಿನ್ನ ಶತ್ರುನಾಶಕವಾದ ಅಸ್ತ್ರದಿಂದ, ವಧಿಸಿದ್ದೀ. ತರುವಾಯ ನೀನೊಬ್ಬನೇ ಒಬ್ಬಂಟಿಗನಾಗಿ 'ಋಜಿಷ್ವಾನ್' ಎಂಬ ಅರಸನಿಂದ ನಾಲ್ಕೂ ಬದಿಗಳಿಂದ ಮುತ್ತಲ್ಪಟ್ಟ 'ವಂಗೃದ'ನೆಂಬ ಅಸುರನ ನೂರು ನಗರಗಳನ್ನು ಉದ್ಭಿನ್ನಗೊಳಿಸಿದ್ದೀ. ॥ ೮ ॥

೬೩೮. ತ್ವಮೇತಾಂಜನರಾಜ್ಞೋ ದ್ವಿರ್ದಶಾಬಂಧುನಾ
ಸುಶ್ರವಸೋಪಜಗ್ಮುಷಃ ।
ಷಷ್ಟಿಂ ಸಹಸ್ರಾ ನವತಿಂ ನವ ಶ್ರುತೋ ನಿ ಚಕ್ರೇಣ ರಥ್ಯಾ
ದುಷ್ಪದಾವೃಣಕ್ ॥ ೯ ॥

ನಿಸ್ಸಹಾಯಕನಾದ 'ಸುಶ್ರವಾ' ಎಂಬ ಅರಸನ ಹತ್ತಿರ ಯುದ್ಧಮಾಡುವದಕ್ಕಾಗಿ ಯಾವ ಇಪ್ಪತ್ತು ನೃಪತಿಗಳು ಮತ್ತು ಅವರ ಆರವತ್ತು ಸಾವಿರದ ತೊಂಬತ್ತೊಂಬತ್ತು ಸೈನಿಕರು ಬಂದಿದ್ದರೋ, ಪ್ರಸಿದ್ಧನಾದ ಇಂದ್ರನೇ! ಅವರೆಲ್ಲರನ್ನು ನೀನು ಅಲಂಘ್ಯವಾದ ನಿನ್ನ ರಥಚಕ್ರದಿಂದ ಸೋಲಿಸಿದೆ. ॥ ೯ ॥

೬೩೯. ತ್ವಮಾವಿಥ ಸುಶ್ರವಸಂ ತವೋತಿಭಿಸ್ತವ ತ್ರಾಮಭಿರಿಂದ್ರ
ತೂರ್ವಯಾಣಂ ।
ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ
ಅರಂಧನಾಯಃ ॥ ೧೦ ॥

ನೀನು ಸುಶ್ರವಸ್ಸೆಂಬ ಅರಸನನ್ನು ನಿನ್ನ ಪರಿತ್ರಾಣಶಕ್ತಿಯಿಂದ ರಕ್ಷಿಸಿದೆ. ನೀನು ಕುತ್ಸ, ಅತಿಥಿಗ್ವ ಮತ್ತು 'ಆಯು' — ಈ ನೃಪತಿಗಳನ್ನು ಮಹಾಯುವಕನಾದ ಸುಶ್ರವಸ್ಸನ ವಶದಲ್ಲಿ ಕೊಟ್ಟಿರುವೆ. ॥ ೧೦ ॥

೬೪೦. ಯ ಉದೃಚೀಂದ್ರ ದೇವಗೋಪಾಃ ಸಖಾಯಸ್ತೇ ಶಿವತಮಾ ಅಸಾಮ ।
ತ್ವಾಂ ಸ್ತೋಷಾಮ ತ್ವಯಾ ಸುವೀರಾ ದ್ರಾಘೀಯ ಆಯುಃ
ಪ್ರತರಂ ದಧಾನಾಃ ॥ ೧೧ ॥

ಇಂದ್ರನೇ! ಯಜ್ಞದ ಸಮಾಪ್ತಿಯ ಕಾಲಕ್ಕೆ ಕಲ್ಯಾಣಕಾರಿಗಳೂ, ದೇವತೆಗಳಿಂದ ಪಾಲಿಸಲ್ಪಟ್ಟವರೂ ಆದ ನಾವು ನಿನ್ನ ಗೆಳೆಯರಾಗಿ ವಿದ್ಯಮಾನರಾಗಿದ್ದೇವೆ. ನಾವು ನಿನ್ನನ್ನು ಸ್ತುತಿಸುತ್ತೇವೆ. ನಿನ್ನ ಕೃಪೆಯಿಂದ ನಾವು ಸುಪುತ್ರರನ್ನು ಸಂಪಾದಿಸಿ, ಉತ್ತಮ ರೀತಿಯಿಂದ, ದೀರ್ಘವಾದ ಜೀವನವನ್ನು ಧರಿಸುವವರಾಗುತ್ತೇವೆ. ॥ ೧೧ ॥

## ಸೂಕ್ತ: ೫೪

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಸವ್ಯನು; ಛಂದಸ್ಸು: ಜಗತೀ ಮತ್ತು ತ್ರಿಷ್ಟುಪ್.

### [ವರ್ಗ: ೧೭]

೬೪೧. ಮಾ ನೋ ಅಸ್ಮಿನ್ ಮಘವನ್ ಪೃತ್ಸ್ವಂಹಸಿ ನಹಿ ತೇ
ಅಂತಃ ಶವಸಃ ಪರೀಣಶೇ ।
ಅಕ್ರಂದಯೋ ನದ್ಯೋ೩ ರೋರುವದ್ ವನಾ ಕಥಾ ನ
ಕ್ಷೋಣೀರ್ಭಿಯಸಾ ಸಮಾರತ ॥ ೧ ॥

ಮಘವನೇ! ಈ ಪಾಪದಲ್ಲಿ, ಈ ಯುದ್ಧಸಮುದಾಯದಲ್ಲಿ ನಮ್ಮನ್ನೆಸೆಯಬೇಡವಯ್ಯಾ. ನಿನ್ನ ಬಲವು ಅಂತಹೀನವಾಗಿರುವದು. ನೀನು ಅಂತರಿಕ್ಷದಲ್ಲಿದ್ದುಕೊಂಡು ಮತ್ತು ಘನಗರ್ಜನೆಯನ್ನು ಮಾಡಿ, ನದಿಯ ನೀರನ್ನು ಶಬ್ದಾಯಮಾನವಾಗುವಂತೆ ಮಾಡುತ್ತೀ. ಇಂಥ ಪ್ರಭಾವವುಳ್ಳ ನಿನಗೆ ಪೃಥಿವಿಯು ಭೀತಿಗೊಂಡರೆ, ಅದರಲ್ಲಿ ಆಶ್ಚರ್ಯವೇನು? ॥ ೧ ॥

೬೪೨. ಅರ್ಚಾ ಶಕ್ರಾಯ ಶಾಕಿನೇ ಶಚೀವತೇ ಶೃಣ್ವಂತಮಿಂದ್ರಂ
ಮಹಯನ್ನಭಿ ಷ್ಟುಹಿ ।

ಯೋ ಧೃಷ್ಣುನಾ ಶವಸಾ ರೋದಸೀ ಉಭೇ ವೃಷಾ ವೃಷತ್ವಾ
ವೃಷಭೋ ನ್ಯೃಂಜತೇ ॥ ೨ ॥

ಮಾನವನೇ! ಶಕ್ತಿಶಾಲಿಯಾದ ಮತ್ತು ಬುದ್ಧಿವಂತನಾದ ಇಂದ್ರನನ್ನು ಪೂಜಿಸು. ಅವನು ಸ್ತುತಿಯನ್ನು ಪ್ರೀತಿಯಿಂದ ಕೇಳುತ್ತಾನೆ. ಅವನನ್ನು ಚನ್ನಾಗಿ ಅರ್ಚಿಸಿ, ಸ್ತುತಿಸು. ಯಾವ ಇಂದ್ರನು ತನ್ನ ಶತ್ರುಜಯಿಯಾದ ಬಲದಿಂದ ದ್ಯುಲೋಕವನ್ನು ಮತ್ತು ಪೃಥಿವೀಲೋಕವನ್ನು ಶೋಭಿಸುತ್ತಾನೋ, ಅವನು ವರ್ಷಾ-ವಿಧಾತನಾಗಿರುವದರಿಂದ, ತನ್ನ ವರ್ಷಣಶಕ್ತಿಯಿಂದ ಮಳೆಗರೆಸುತ್ತಾನೆ. ॥ ೨ ॥

೬೪೩. ಅರ್ಚಾ ದಿವೇ ಬೃಹತೇ ಶೂಷ್ಯಂ೧ ವಚಃ ಸ್ವಕ್ಷತ್ರಂ ಯಸ್ಯ
ಧೃಷತೋ ಧೃಷನ್ಮನಃ ।
ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ
ವೃಷಭೋ ರಥೋ ಹಿ ಷಃ ॥ ೩ ॥

ಮಾನವನೇ! ಯಾವ ಇಂದ್ರನು ಶತ್ರುಗಳನ್ನು ಜಯಿಸಿ ತನ್ನ ಶಕ್ತಿಯಲ್ಲಿಯೇ ಅಚಲವಾದ ವಿಶ್ವಾಸವುಳ್ಳವನಾಗಿರುವನೋ, ಅಂಥ ಮಹಾದೀಪ್ತಿಯುಳ್ಳ ಇಂದ್ರನನ್ನು ಲಕ್ಷಿಸಿ ಸುಖಕರವಾದ ಸ್ತುತಿವಾಕ್ಯಗಳನ್ನು ಉಚ್ಚರಿಸು; ಯಾಕಂದರೆ ಇಂದ್ರನು ಅಚಲವಾದ ಯಶವುಳ್ಳವನೂ, ಬಲಶಾಲಿಯೂ ಆಗಿರುವನು. ಇಂದ್ರನು ಶತ್ರುಗಳನ್ನು ದೂರಮಾಡುತ್ತಾನೆ. ಇಂದ್ರನು ಅಶ್ವಸೇವಿತನೂ, ಅಭೀಷ್ಟವರ್ಷಿಯೂ ಅತ್ಯಂತ ವೇಗಶಾಲಿಯೂ ಆಗಿರುವನು. ॥ ೩ ॥

೬೪೪. ತ್ವಂ ದಿವೋ ಬೃಹತಃ ಸಾನು ಕೋಪಯೋಽವ ತ್ಮನಾ ಧೃಷತಾ
ಶಂಬರಂ ಭಿನತ್ ।
ಯನ್ಮಾಯಿನೋ ವ್ರಂದಿನೋ ಮಂದಿನಾ ಧೃಷ—ಚ್ಛಿತಾಂ
ಗಭಸ್ತಿಮಶನಿಂ ಪೃತನ್ಯಸಿ ॥ ೪ ॥

ಇಂದ್ರನೇ! ನೀನು ಮಹಾಕಾಶದ ಮೇಲಿನ ಪ್ರದೇಶವನ್ನು ಕಂಪಿಸಿದೆ; ನೀನು ನಿನ್ನ ಶತ್ರು-ವಿಧ್ವಂಸಿಯಾದ ಶಕ್ತಿಯಿಂದ ಶಂಬರಾಸುರನ ವಧೆಯನ್ನು ಮಾಡಿದೆ. ನೀನು ಹೃಷ್ಟವಾದ ಮತ್ತು ಉಲ್ಲಾಸಗೊಂಡ ಮನಸ್ಸಿನಿಂದ ತೀಕ್ಷ್ಣವಾದ ಮತ್ತು ರಶ್ಮಿಯುಕ್ತವಾದ ವಜ್ರವನ್ನು ದಲಬದ್ಧವಾಗಿದ್ದ ಮಾಯಾವಿಗಳ ವಿರುದ್ಧ ಎಸೆದೆ. ॥ ೪ ॥

೬೪೫. ನಿ ಯದ್ ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್
ವ್ರಂದಿನೋ ರೋರುವದ್ ವನಾ ।
ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್
ಕೃಣವಃ ಕಸ್ತ್ವಾ ಪರಿ ॥ ೫ ॥

ಇಂದ್ರನೇ! ನೀನು ಘನಗರ್ಜನದಿಂದ ಸಪ್ಪಳಮಾಡಿ ಗಾಳಿಯ ಮೇಲೆ ಮತ್ತು ಜಲಶೋಷಕನೂ, ಜಲಪರಿಪಾಕಕಾರಿಯೂ ಆದ ಸೂರ್ಯನ ಮಸ್ತಕದ ಮೇಲೆ ನೀರಿನ ಮಳೆಗರೆಸಿದೆ. ನಿನ್ನ ಮನಸ್ಸು ಅಪರಿವರ್ತನಶಾಲಿಯೂ, ಶತ್ರುವಿನಾಶಪರಾಯಣವೂ ಆಗಿರುವದು. ನೀನು ಈ ಹೊತ್ತು ಯಾವ ಉದ್ಯಮವನ್ನು ಮಾಡಿರುವೆಯೋ, ಆ ಉದ್ಯಮದ ಮೂಲಕ ಜಗತ್ತಿನಲ್ಲೆಲ್ಲ ನೀನೇ ಸರ್ವಶ್ರೇಷ್ಠನಾಗಿರುವೆ. ॥ ೫ ॥

## [ವರ್ಗಃ ೧೮]

೬೪೬. ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ
ವಯ್ಯಂ ಶತಕ್ರತೋ ।
ತ್ವಂ ರಥಮೇತಶಂ ಕೃತ್ವ್ಯೇ ಧನೇ ತ್ವಂ ಪುರೋ ನವತಿಂ
ದಂಭಯೋ ನವ ॥ ೬ ॥

ನೀನು 'ನರ್ಯ', 'ತುರ್ವಶ', ಮತ್ತು 'ಯದು' ಎಂಬ ಅರಸರನ್ನು ಕಾಪಾಡಿದ್ದೀ. ನೂರು ಯಜ್ಞಗಳನ್ನು ಮಾಡಿದ ಇಂದ್ರನೇ! ನೀನು 'ವಯ್ಯ' ವೆಂಬ ಕುಲದಲ್ಲಿ ಹುಟ್ಟಿದ 'ತುರ್ವೀತಿ' ನಾಮದ ಅರಸನನ್ನು ರಕ್ಷಿಸಿದ್ದೀ. ನೀನು 'ರಥ' ಮತ್ತು 'ಏತಶ'ರೆಂಬ ಋಷಿಗಳನ್ನು ಅವಶ್ಯವಾಗಿರುವ ಧನದ ಸಲುವಾಗಿ ಯುದ್ಧದಲ್ಲಿ ರಕ್ಷಿಸಿದ್ದೀ. ನೀನು ಶಂಬರಾಸುರನ ತೊಂಬತ್ತೊಂಬತ್ತು ನಗರಗಳನ್ನು ನಾಶಗೊಳಿಸಿದ್ದೀ. ॥ ೬ ॥

೬೪೭. ಸ ಘಾ ರಾಜಾ ಸತ್ಪತಿಃ ಶೂಶುವಜ್ಜನೋ ರಾತಹವ್ಯಃ
ಪ್ರತಿ ಯಃ ಶಾಸಮಿನ್ವತಿ ।
ಉಕ್ಥಾ ವಾ ಯೋ ಅಭಿಗೃಣಾತಿ ರಾಧಸಾ ದಾನುರಸ್ಮಾ ಉಪರಾ
ಪಿನ್ವತೇ ದಿವಃ ॥ ೭ ॥

ಯಾವ ಮಾನವನು ಇಂದ್ರನಿಗೆ ಹವ್ಯದಾನವನ್ನು ಕೊಟ್ಟು ಇಂದ್ರನ ಸ್ತುತಿಯ ಪ್ರಚಾರಮಾಡುವನೋ, ಅಥವಾ ಹವ್ಯದೊಂದಿಗೆ ಮಂತ್ರದ ಪಾಠವನ್ನು ಮಾಡುವನೋ, ಅವನೇ ಸ್ವರಾಜ್ಯವನ್ನು ಮಾಡುತ್ತಾನೆ, ಸಾಧು ಜನರನ್ನು ಕಾಪಾಡುತ್ತಾನೆ ಮತ್ತು ತನ್ನ ತಾನೇ ಕಲ್ಯಾಣವನ್ನು ಮಾಡಿಕೊಳ್ಳುತ್ತಾನೆ. ಫಲದಾತಾರನಾದ ಇಂದ್ರನು ಅಂಥವನ ಸಲುವಾಗಿಯೇ ಆಕಾಶದಿಂದ ಮೇಘಜಲವನ್ನು ವೃಷ್ಟಿಸುತ್ತಾನೆ. ॥ ೭ ॥

೬೪೮. ಅಸಮಂ ಕ್ಷತ್ರಮಸಮಾ ಮನೀಷಾ ಪ್ರ ಸೋಮಪಾ
ಅಪಸಾ ಸಂತು ನೇಮೇ ।
ಯೇ ತ ಇಂದ್ರ ದದುಷೋ ವರ್ಧಯಂತಿ ಮಹಿ ಕ್ಷತ್ರಂ
ಸ್ಥವಿರಂ ವೃಷ್ಣ್ಯಂ ಚ ॥ ೮ ॥

ಇಂದ್ರನ ಬಲವು ಅತುಲವಾಗಿರುವದು; ಅವನ ಬುದ್ಧಿಯಾದರೂ ಅತುಲನೀಯವಾಗಿರುವದು. ಇಂದ್ರನೇ! ನಿನಗೆ ಹವ್ಯದಾನ ಮಾಡಿ ಯಾರು ನಿನ್ನ ಮಹಾಬಲ ಮತ್ತು ಸ್ಥೂಲ—ಪೌರುಷ—ಇವುಗಳನ್ನು ವರ್ಧಿಸುತ್ತಾರೋ, ಅಂಥ ಸೋಮಪಾಯಿಗಳಾದ ಜನರೇ ಯಜ್ಞಕರ್ಮದಿಂದ ಪ್ರವೃದ್ಧರಾಗಲಿ. ॥ ೮ ॥

೬೪೯. ತುಭ್ಯೇದೇತೇ ಬಹುಲಾ ಅದ್ರಿದುಗ್ಧಾ—ಶ್ಚಮೂಷದಶ್ಚಮಸಾ
ಇಂದ್ರಪಾನಾಃ ।
ವ್ಯಶ್ನುಹಿ ತರ್ಪಯಾ ಕಾಮಮೇಷಾ—ಮಥಾ ಮನೋ
ವಸುದೇಯಾಯ ಕೃಷ್ವ ॥ ೯ ॥

ಈ ಸೋಮರಸವು ಕಲ್ಲುಗಳಿಂದ ಜಜ್ಜಿ, ಹಿಂಡಲ್ಪಟ್ಟು ಸಿದ್ಧವಾಗಿರುವದು, ಪಾತ್ರೆಯಲ್ಲಿ ಇಡಲ್ಪಟ್ಟಿರುವದು ಮತ್ತು ಇಂದ್ರನಿಗೆ ಪಾನಮಾಡಲು ಯೋಗ್ಯವಾಗಿರುವದು. ಇಂದ್ರನೇ! ಇದೆಲ್ಲವೂ ನಿನ್ನ ಸಲುವಾಗಿಯೇ ಇರುವದರಿಂದ ನೀನಿದನ್ನು ಗ್ರಹಣಮಾಡಿ, ನಿನ್ನ ಇಚ್ಛೆಯನ್ನು ತೃಪ್ತಿಗೊಳಿಸು. ತರುವಾಯ ನಮಗೆ ಧನದಾನಮಾಡುವದರಲ್ಲಿ ಮನಸ್ಸುಮಾಡು. ॥ ೯ ॥

೬೫೦. ಅಪಾಮತಿಷ್ಠದ್ಧರುಣಹ್ವರಂ ತಮೋಽಂತರ್ವೃತ್ರಸ್ಯ
ಜಠರೇಷು ಪರ್ವತಃ ।
ಅಭೀಮಿಂದ್ರೋ ನದ್ಯೋ ವವ್ರಿಣಾ ಹಿತಾ ವಿಶ್ವಾ ಅನುಷ್ಠಾಃ
ಪ್ರವಣೇಷು ಜಿಘ್ನತೇ ॥ ೧೦ ॥

ಅಂಧಕಾರವು ವೃಷ್ಟಿಯ ಧಾರೆಯನ್ನು ತಡೆದಿತ್ತು. ವೃತ್ರಾಸುರನ ಹೊಟ್ಟೆಯೊಳಗೆ ಮೇಘವಿತ್ತು. ವೃತ್ರನಿಂದ ನಿರೋಧಿಸಲ್ಪಟ್ಟ ಆ ಸಮಸ್ತವಾದ ಜಲವನ್ನು ಇಂದ್ರನು ಕೆಳಗಡೆಗಿರುವ ಭೂಪ್ರದೇಶದಲ್ಲಿ ಅನುಕ್ರಮವಾಗಿ ಪ್ರವಹಿಸಿದ್ದನು. ॥ ೧೦ ॥

೬೫೧. ಸ ಶೇವೃಧಮಧಿ ಧಾ ದ್ಯುಮ್ನಮಸ್ಮೇ ಮಹಿ ಕ್ಷತ್ರಂ
ಜನಾಷಾಳಿಂದ್ರ ತವ್ಯಂ ।
ರಕ್ಷಾ ಚ ನೋ ಮಘೋನಃ ಪಾಹಿ ಸೂರೀನ್ ರಾಯೇ ಚ ನಃ
ಸ್ವಪತ್ಯಾ ಇಷೇ ಧಾಃ ॥ ೧೧ ॥

ಇಂದ್ರನೇ! ನಮಗೆ ವರ್ಧಮಾನವಾದ ಯಶಸ್ಸನ್ನು ದಯೆಪಾಲಿಸಯ್ಯಾ. ಮಹಾಶತ್ರುಗಳನ್ನು ಸೋಲಿಸುವಂಥ ವಿಪುಲವಾದ ಬಲವನ್ನು ಕರುಣಿಸಯ್ಯಾ. ನಮ್ಮನ್ನು ಧನವಂತರನ್ನಾಗಿ ಮಾಡಿ ಕಾಪಾಡು. ವಿದ್ವಾಂಸರನ್ನು ಪಾಲಿಸಯ್ಯಾ. ನಮಗೆ ಧನ, ಸುಂದರವಾದ ಸಂತಾನ ಮತ್ತು ವಿಪುಲವಾದ ಅನ್ನವನ್ನು ಅನುಗ್ರಹಿಸಿ ಸಲಹಯ್ಯಾ. ॥ ೧೧ ॥

## ಸೂಕ್ತ: ೫೫

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಸವ್ಯನು; ಛಂದಸ್ಸು: ಜಗತೀ.

### [ವರ್ಗಃ ೧೯]

೬೫೨. ದಿವಶ್ಚಿದಸ್ಯ ವರಿಮಾ ವಿ ಪಪ್ರಥ ಇಂದ್ರಂ ನ ಮಹ್ನಾ
ಪೃಥಿವೀ ಚ ನ ಪ್ರತಿ ।
ಭೀಮಸ್ತುವಿಷ್ಮಾಂಚರ್ಷಣಿಭ್ಯ ಆತಪಃ ಶಿಶೀತೇ ವಜ್ರಂ
ತೇಜಸೇ ನ ವಂಸಗಃ　　|| ೧ ||

ಇಂದ್ರನ ಪ್ರಭಾವವು ಆಕಾಶಕ್ಕಿಂತಲೂ ವಿಸ್ತೀರ್ಣವಾಗಿರುವದು. ಮಹತ್ವದಲ್ಲಿ ಪೃಥಿವಿಯೂ ಕೂಡ ಇಂದ್ರನ ಬರಾಬರಿಯನ್ನು ಮಾಡಲಾರದು. ಭಯಾವಹನೂ, ಬಲಶಾಲಿಯೂ ಆದ ಇಂದ್ರನು ಮಾನವರ ಸಲುವಾಗಿ ಶತ್ರುಗಳನ್ನು ದಹಿಸಿಬಿಡುತ್ತಾನೆ. ಗೂಳಿಯು ತನ್ನ ಕೋಡುಗಳನ್ನು ತಿಕ್ಕುವಂತೆ ಇಂದ್ರನಾದರೂ ತನ್ನ ವಜ್ರವನ್ನು ತೀಕ್ಷ್ಣಗೊಳಿಸುವದ್ದಾಗಿ ಮಸೆಯುತ್ತಾನೆ. || ೧ ||

೬೫೩. ಸೋ ಅರ್ಣವೋ ನ ನದ್ಯಃ ಸಮುದ್ರಿಯಃ ಪ್ರತಿ ಗೃಭ್ಣಾತಿ
ವಿಶ್ರಿತಾ ವರೀಮಭಿಃ ।
ಇಂದ್ರಃ ಸೋಮಸ್ಯ ಪೀತಯೇ ವೃಷಾಯತೇ ಸನಾತ್ ಸ
ಯುಧ್ಮ ಓಜಸಾ ಪನಸ್ಯತೇ　　|| ೨ ||

ಅಂತರಿಕ್ಷವ್ಯಾಪಿಯಾದ ಇಂದ್ರನು, ಸಮುದ್ರದಂತೆ, ತನ್ನ ವ್ಯಾಪಕತೆಯಿಂದ ಬಹುವ್ಯಾಪಿಯಾದ ಜಲವನ್ನು ಗ್ರಹಣಮಾಡುತ್ತಾನೆ. ಇಂದ್ರನು ಸೋಮಪಾನದ ಸಲುವಾಗಿ ಗೂಳಿಯಂತೆ ವೇಗದಿಂದ ಧಾವಿಸಿ ಬರುತ್ತಾನೆ ಮತ್ತು ಅದೇ ಯೋದ್ಧನಾದ ಇಂದ್ರನು ಯಾವಾಗಲೂ ತನ್ನ ವೀರತ್ವದ ಪ್ರಶಂಸೆಯನ್ನು ಮೆಚ್ಚುತ್ತಾನೆ. || ೨ ||

೬೫೪. ತ್ವಂ ತಮಿಂದ್ರ ಪರ್ವತಂ ನ ಭೋಜಸೇ ಮಹೋ ನೃಮ್ಣಸ್ಯ
ಧರ್ಮಣಾಮಿರಜ್ಯಸಿ ।
ಪ್ರ ವೀರ್ಯೇಣ ದೇವತಾತಿ ಚೇಕಿತೇ ವಿಶ್ವಸ್ಮಾ ಉಗ್ರಃ
ಕರ್ಮಣೇ ಪುರೋಹಿತಃ　　|| ೩ ||

ಇಂದ್ರನೇ! ನೀನು ನಿನ್ನ ಸ್ವಂತದ ಭೋಗದ ಸಲುವಾಗಿ ಮೇಘವನ್ನು ಭೇದಿಸುವದಿಲ್ಲಾ. ನೀನು ಮಹಾ ಧನಾಢ್ಯರ ಮೇಲೆ ಅಧಿಕಾರವನ್ನು ನಡೆಸುತ್ತೀ.

ಇಂದ್ರದೇವನು ತನ್ನ ಸುಕಾರ್ಯದಿಂದ ಚೆನ್ನಾಗಿ ಎಲ್ಲರಿಗೂ ಪರಿಚಿತನಾಗಿರುವನು. ಎಲ್ಲ ದೇವತೆಗಳು ಉಗ್ರಕರ್ಮಗಳ ಸಲುವಾಗಿ ಇಂದ್ರನನ್ನು ತಮ್ಮ ಪುರೋಹಿತನನ್ನಾಗಿ ಮಾಡಿಡುತ್ತಾರೆ. ॥ ೩ ॥

೬೫೫. ಸ ಇದ್ ವನೇ ನಮಸ್ಯುಭಿರ್ವಚಸ್ಯತೇ ಚಾರು ಜನೇಷು
ಪ್ರಬ್ರುವಾಣ ಇಂದ್ರಿಯಂ ।
ವೃಷಾ ಛಂದುರ್ಭವತಿ ಹರ್ಯತೋ ವೃಷಾ ಕ್ಷೇಮೇಣ ಧೇನಾಂ
ಮಘವಾ ಯದಿನ್ವತಿ ॥ ೪ ॥

ಇಂದ್ರನು ವನದಲ್ಲಿ ಸ್ತೋತಾರರಾದ ಋಷಿಗಳಿಂದ ಸ್ತುತಿಸಲ್ಪಡುತ್ತಾನೆ. ಅವನು ಮಾನವರ ಮಧ್ಯದಲ್ಲಿ ತನ್ನ ಶೌರ್ಯವನ್ನು ಪ್ರಕಟಿಸಿರುತ್ತಾನೆ. ಯಾವ ಕಾಲದಲ್ಲಿ ಹವ್ಯದಾತನೂ, ಧನಿಕನೂ ಆಗಿರುವ ಯಜಮಾನನು ಇಂದ್ರನಿಂದ ಸುರಕ್ಷಿತನಾಗಿ ಸ್ತುತಿವಾಕ್ಯದ ಉಚ್ಚಾರಣೆಯನ್ನು ಮಾಡುತ್ತಾನೋ, ಆ ಕಾಲದಲ್ಲಿ ಅಭೀಷ್ಟವರ್ಷಿಯಾದ ಇಂದ್ರನು ಆ ಯಜ್ಞೇಚ್ಛುವನ್ನು ಯಜ್ಞದಲ್ಲಿ ತತ್ಪರನನ್ನಾಗಿ ಮಾಡುತ್ತಾನೆ. ॥ ೪ ॥

೬೫೬. ಸ ಇನ್ಮಹಾನಿ ಸಮಿಥಾನಿ ಮಜ್ಮನಾ ಕೃಣೋತಿ ಯುಧ್ಮ
ಓಜಸಾ ಜನೇಭ್ಯಃ ।
ಅಧಾ ಚನ ಶ್ರದ್ ದಧತಿ ತ್ವಿಷೀಮತ ಇಂದ್ರಾಯ ವಜ್ರಂ
ನಿಘನಿಘ್ನತೇ ವಧಂ ॥ ೫ ॥

ಯುದ್ಧಮಾಡುವ ಇಂದ್ರನು ಮನುಷ್ಯರ ಸಲುವಾಗಿ ತನ್ನ ಓಜಸ್ಸಿನಿಂದ ಮಹಾಸಂಗ್ರಾಮಗಳಲ್ಲಿ ಸಂಲಗ್ನನಾಗುತ್ತಾನೆ. ಯಾವ ಕಾಲದಲ್ಲಿ ಇಂದ್ರನು ವಧಿಸುವ ವಜ್ರವನ್ನು ಎಸೆಯುತ್ತಾನೋ, ಆ ಕಾಲದಲ್ಲಿ ದೀಪ್ತಿಮಂತನಾದ ಇಂದ್ರನೇ ಮಹಾಬಲಶಾಲಿಯೆಂದು ಹೇಳಿ, ಎಲ್ಲರೂ ಇಂದ್ರನನ್ನು ಆದರಿಸುತ್ತಾರೆ. ॥ ೫ ॥

## [ವರ್ಗಃ ೨೦]

೬೫೭. ಸ ಹಿ ಶ್ರವಸ್ಯುಃ ಸದನಾನಿ ಕೃತ್ರಿಮಾ ಕ್ಷ್ಮಯಾ ವೃಧಾನ
ಓಜಸಾ ವಿನಾಶಯನ್ ।
ಜ್ಯೋತೀಂಷಿ ಕೃಣ್ವನ್ನವೃಕಾಣಿ ಯಜ್ಯವೇ ಽವ ಸುಕ್ರತುಃ
ಸರ್ತವಾ ಅಪಃ ಸೃಜತ್ ॥ ೬ ॥

ಇಂದ್ರನು ಯಶಃಕಾಮನೆಯನ್ನು ಮಾಡಿ, ತನ್ನ ಮಹಾಓಜಸ್ಸಿನಿಂದ, ಸುನಿರ್ಮಿತವಾದ ದಸ್ಯುಗಳ ಮನೆಗಳನ್ನು ಧ್ವಂಸಗೊಳಿಸಿ, ಪೃಥ್ವಿಯಲ್ಲಿ ತನಗೆ

ಅನುರೂಪವಾದ ವೃದ್ಧಿಯನ್ನು ಪ್ರಾಪ್ತಮಾಡಿ ಮತ್ತು ಜ್ಯೋತಿರ್ಗಣಗಳನ್ನು ಅಥವಾ ನಕ್ಷತ್ರಗಳನ್ನು ನಿರಾವರಣ ಮಾಡಿ, ಯಜಮಾನನ ಉಪಕಾರದ ಸಲುವಾಗಿ ಹರಿಯುವ ವೃಷ್ಟಿಜಲವನ್ನು ದಾನಮಾಡುತ್ತಾನೆ. ॥ ೬ ॥

೬೫೮. ದಾನಾಯ ಮನಃ ಸೋಮಪಾವನ್ನಸ್ತು ತೇ ऽರ್ವಾಂಚಾ ಹರೀ
ವಂದನಶ್ರುದಾ ಕೃಧಿ ।
ಯಮಿಷ್ಠಾಸಃ ಸಾರಥಯೋ ಯ ಇಂದ್ರ ತೇ ನ ತ್ವಾ ಕೇತಾ
ಆ ದಭ್ನುವಂತಿ ಭೂರ್ಣಯಃ ॥ ೭ ॥

ಸೋಮಪಾಯಿಯಾದ ಇಂದ್ರನೇ! ನಿನ್ನ ಮನವು ದಾನದಲ್ಲಿ ಮಗ್ನವಾಗಿರಲಿ. ಸ್ತುತಿಪ್ರಿಯನೇ! ನಿನ್ನ ಹರಿನಾಮಧೇಯವುಳ್ಳ ಅಶ್ವಗಳನ್ನು ನಮ್ಮ ಯಜ್ಞಾಭಿಮುಖವಾಗಿ ತಿರುಗಿಸಯ್ಯಾ. ಇಂದ್ರನೇ! ನಿನ್ನ ಸಾರಥಿಗಳು ಕುದುರೆಗಳನ್ನು ತಮ ವಶದಲ್ಲಿಡುವದರಲ್ಲಿ ಮಹಾದಕ್ಷರಾಗಿರುವರು. ಆದ್ದರಿಂದಲೇ ನಿನಗೆ ವಿರೋಧಿಗಳೂ, ಶಸ್ತ್ರಧಾರಿಗಳೂ ಆದ ಶತ್ರುಗಳು ನಿನ್ನನ್ನು ಸೋಲಿಸಲಾರರು. ॥ ೭ ॥

೬೫೯. ಅಪ್ರಕ್ಷಿತಂ ವಸು ಬಿಭರ್ಷಿ ಹಸ್ತಯೋ—ರಷಾಳ್ಹಂ
ಸಹಸ್ತನ್ವಿ ಶ್ರುತೋ ದಧೇ ।
ಆವೃತಾಸೋऽವತಾಸೋ ನ ಕರ್ತೃಭಿ—ಸ್ತನೂಷು ತೇ ಕ್ರತವ
ಇಂದ್ರ ಭೂರಯಃ ॥ ೮ ॥

ಇಂದ್ರನೇ! ನೀನು ಎರಡೂ ಕೈಗಳಲ್ಲಿ ಅಪಾರವಾದ ಧನವನ್ನು ಧರಿಸಿರುವೆ. ನೀನು ವಿಮಲವಾದ ಯಶದಿಂದ ಸಂಯುಕ್ತನಾಗಿರುವೆ. ನಿನ್ನ ದೇಹದಲ್ಲಿ ಅಪರಾಜೇಯವಾದ ಬಲವನ್ನು ಧಾರಣಮಾಡಿಕೊಂಡಿರುವೆ. ಜಲಾರ್ಥಿಯಾದ ಮಾನವರು ಬಾವಿಯನ್ನು ನಾಲ್ಕೂ ಬದಿಗಳಿಂದ ಸುತ್ತುವರಿಸಿ ನಿಲ್ಲುವಂತೆ, ನಿನ್ನ ಎಲ್ಲ ಅಂಗಾಂಗಗಳು ಶೌರ್ಯಯುಕ್ತವಾದ ಕರ್ಮಗಳಿಂದ ಆವೃತವಾಗಿವೆ. ನಿನ್ನ ದೇಹದಲ್ಲಿ ಅನೇಕ ಉದ್ಯಮಗಳು ವಿಕಾಸಮಾನವಾಗಿವೆ. ॥ ೮ ॥

## ಸೂಕ್ತ: ೫೬

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಸವ್ಯನು; ಛಂದಸ್ಸು: ಜಗತೀ.

### [ವರ್ಗ: ೨೧]

೬೬೦. ಏಷ ಪ್ರ ಪೂರ್ವೀರವ ತಸ್ಯ ಚಮ್ರಿಷೋऽತ್ಯೋ ನ
ಯೋಷಾಮುದಯಂಸ್ತ ಭುರ್ವಣಿಃ ।

ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ
ಹರಿಯೋಗಮೃಭ್ವಸಂ ॥ ೧ ॥

ಯಾವ ರೀತಿಯಲ್ಲಿ ಗಂಡು ಕುದುರೆಯು ಹೆಣ್ಣು ಕುದುರೆಯ ಕಡೆಗೆ ಧಾವಿಸುವದೋ, ಅದೇ ರೀತಿಯಲ್ಲಿ ಪ್ರಭೂತಾಹಾರಿಯಾದ ಇಂದ್ರನು ಯಜಮಾನನ ಯಥೇಷ್ಟವಾದ ಮತ್ತು ಪಾತ್ರೆಯಲ್ಲಿದ್ದ ಸೋಮರಸದ ಕಡೆಗೆ ಧಾವಿಸಿ ಬರುತ್ತಾನೆ. ಕಾರ್ಯಕುಶಲನಾದ ಇಂದ್ರನು ಸ್ವರ್ಣಮಯವೂ, ಅಶ್ವಯುಕ್ತವೂ, ರಶ್ಮಿಯುಕ್ತವೂ ಆದ ರಥವನ್ನು ನಿಲ್ಲಿಸಿ ಸೋಮಪಾನವನ್ನು ಮಾಡುತ್ತಾನೆ. ॥ ೧ ॥

೬೬೧. ತಂ ಗೂರ್ತಯೋ ನೇಮನ್ನಿಷಃ ಪರೀಣಸಃ ಸಮುದ್ರಂ ನ
ಸಂಚರಣೇ ಸನಿಷ್ಯವಃ ।
ಪತಿಂ ದಕ್ಷಸ್ಯ ವಿದಥಸ್ಯ ನೂ ಸಹೋ ಗಿರಿಂ ನ ವೇನಾ
ಅಧಿ ರೋಹ ತೇಜಸಾ ॥ ೨ ॥

ಯಾವ ರೀತಿಯಲ್ಲಿ ಧನಾಭಿಲಾಷೆಯುಳ್ಳ ವ್ಯಾಪಾರಿಗಳು ಸಮುದ್ರದ ನಾಲ್ಕೂ ಬದಿಯಲ್ಲಿ ಸಂಚರಿಸುವರೋ, ಅದೇ ರೀತಿಯಲ್ಲಿ ಹವ್ಯವಾಹಕರಾದ ಸ್ತೋತಾರರು ಇಂದ್ರನ ನಾಲ್ಕೂ ಬದಿಯಲ್ಲಿ ನಿಂತಿರುವರು. ಯಾವ ರೀತಿಯಲ್ಲಿ ಲಲನೆಯರು ಹೂವನ್ನಾರಿಸುವದಕ್ಕಾಗಿ ಕೈಗೋಲಿನ ಸಹಾಯದಿಂದ ಗುಡ್ಡದ ಮೇಲೆ ಹತ್ತುವರೋ, ಅದೇ ರೀತಿಯಲ್ಲಿ, ಸ್ತೋತಾರನೇ! ಒಂದೇ ಒಂದು ತೇಜಸ್ಪೂರ್ಣವಾದ ಸ್ತೋತ್ರದಿಂದ ಮೇಲೇರಿ ಪ್ರಬುದ್ಧನೂ, ಯಜ್ಞರಕ್ಷಕನೂ, ಬಲವಂತನೂ ಆಗಿರುವ ಇಂದ್ರನ ಹತ್ತರ ಹೋಗು. ॥ ೨ ॥

೬೬೨. ಸ ತುರ್ವಣಿರ್ಮಹಾँ ಅರೇಣು ಪೌಂಸ್ಯೇ ಗಿರೇರ್ಭೃಷ್ಟಿರ್ನ
ಭ್ರಾಜತೇ ತುಜಾ ಶವಃ ।
ಯೇನ ಶುಷ್ಣಂ ಮಾಯಿನಮಾಯಸೋ ಮದೇ ದುಧ್ರ
ಆಭೂಷು ರಾಮಯನ್ನಿ ದಾಮನಿ ॥ ೩ ॥

ಇಂದ್ರನು ಶತ್ರುನಾಶಕನೂ, ಮಹಂತನೂ ಆಗಿರುತ್ತಾನೆ. ಇಂದ್ರನ ನಿರ್ದೋಷಿಯಾದ ಮತ್ತು ಶತ್ರುನಾಶಕವಾದ ಬಲವು ಪುರುಷೋಚಿತವಾದ ಸಂಗ್ರಾಮದಲ್ಲಿ ಪರ್ವತದ ಶಿಖರದಂತೆ ವಿರಾಜಮಾನವಾಗಿರುತ್ತದೆ. ಶತ್ರುಮರ್ದಕನಾದ ಮತ್ತು ಕಬ್ಬಿಣದ ಕವಚವನ್ನು ಧರಿಸಿದ ದೇಹವುಳ್ಳ ಇಂದ್ರನು ಸೋಮಪಾನದಿಂದ ಹೃಷ್ಟನಾಗಿ ಸ್ವಪರಾಕ್ರಮದಿಂದ, ಮಾಯಾವಿಯಾದ ಶುಷ್ಣನನ್ನು ಸಂಕೋಲೆಯಲ್ಲಿ ಬಿಗಿದು ಕಾರಾಗೃಹದಲ್ಲಿ ಬಂದಿಯನ್ನಾಗಿ ಮಾಡಿದ್ದನು. ॥ ೩ ॥

೬೬೩. ದೇವೀ ಯದಿ ತವಿಷೀ ತ್ವಾವೃಧೋತಯ ಇಂದ್ರಂ
ಸಿಷಕ್ತ್ಯುಷಸಂ ನ ಸೂರ್ಯಃ ।
ಯೋ ಧೃಷ್ಣುನಾ ಶವಸಾ ಬಾಧತೇ ತಮ ಇಯರ್ತಿ ರೇಣುಂ
ಬೃಹದರ್ಹರಿಷ್ವಣಿಃ　　॥ ೪ ॥

ಯಾವ ರೀತಿಯಲ್ಲಿ ಸೂರ್ಯನು ಉಷಸ್ಸನ್ನು ಸೇವಿಸುವನೋ, ಅದೇ ರೀತಿಯಲ್ಲಿ ನಿನ್ನ ಬೆಳಗುವ ಬಲವು, ನಿನ್ನ ರಕ್ಷಣೆಯ ಸಲುವಾಗಿ ನಿನ್ನ ಸ್ತೋತ್ರಗಳಿಂದ ಬೆಳೆದ ಇಂದ್ರನನ್ನು ಸೇವಿಸುತ್ತದೆ. ಅದೇ ಇಂದ್ರನು ತನ್ನ ಜಯಶಾಲಿಯಾದ ಬಲದಿಂದ ಅಂಧಕಾರರೂಪಿನ ವೃತ್ರನನ್ನು ದಮನಮಾಡುತ್ತಾನೆ ಮತ್ತು ಶತ್ರುಗಳನ್ನು ರೋಧಿಸಿ ಅವರನ್ನು ಚೆನ್ನಾಗಿ ಧ್ವಂಸಗೊಳಿಸುತ್ತಾನೆ.　　॥ ೪ ॥

೬೬೪. ವಿ ಯತ್ ತಿರೋ ಧರುಣಮಚ್ಯುತಂ ರಜೋಽತಿಷ್ಠಿಪೋ
ದಿವ ಆತಾಸು ಬರ್ಹಣಾ ।
ಸ್ವರ್ಮೀಳ್ಹೇ ಯನ್ಮದ ಇಂದ್ರ ಹರ್ಷ್ಯಾಹನ್ ವೃತ್ರಂ
ನಿರಪಾಮೌಬ್ಜೋ ಅರ್ಣವಂ　　॥ ೫ ॥

ಶತ್ರುಹಂತಕನಾದ ಇಂದ್ರನೇ! ಯಾವ ಕಾಲದಲ್ಲಿ ನೀನು ವೃತ್ರನಿಂದ ಅವರುದ್ಧವಾದ, ಜೀವನರಕ್ಷಕವಾದ ಮತ್ತು ವಿನಾಶರಹಿತವಾದ ಜಲವನ್ನು ಆಕಾಶದಿಂದ ನಾಲ್ಕು ಬದಿಗೆ ವಿತರಣಮಾಡಿದೆಯೋ, ಆ ಕಾಲದಲ್ಲಿ ಸೋಮಪಾನದಿಂದ ಹರ್ಷಯುಕ್ತನಾಗಿ ನೀನು ಯುದ್ಧದಲ್ಲಿ ವೃತ್ರನ ವಧೆಯನ್ನು ಮಾಡಿದೆ ಮತ್ತು ಜಲದ ಸಾಗರದಂತೆ ಮೇಘವನ್ನು ನಿಮ್ನಮುಖಿಯನ್ನಾಗಿ ಮಾಡಿದೆ. ॥ ೫ ॥

೬೬೫. ತ್ವಂ ದಿವೋ ಧರುಣಂ ಧಿಷ ಓಜಸಾ ಪೃಥಿವ್ಯಾ ಇಂದ್ರ
ಸದನೇಷು ಮಾಹಿನಃ ।
ತ್ವಂ ಸುತಸ್ಯ ಮದೇ ಅರಿಣಾ ಅಪೋ ವಿ ವೃತ್ರಸ್ಯ
ಸಮಯಾ ಪಾಷ್ಯಾರುಜಃ　　॥ ೬ ॥

ಇಂದ್ರನೇ! ನೀನು ದೊಡ್ಡವನಾಗಿರುವೆ. ಸ್ವಪರಾಕ್ರಮದಿಂದ ಜಗದ್ಧಾರಕವಾದ ವೃಷ್ಟಿಜಲವನ್ನು ಆಕಾಶದಿಂದ ಪೃಥಿವಿಯ ಪ್ರದೇಶಗಳ ಮೇಲೆ ಸ್ಥಾಪಿಸುತ್ತೀ. ನೀನು ಸೋಮಪಾನದಿಂದ ಹೃಷ್ಟನಾಗಿ ಮೋಡದಿಂದ ನೀರನ್ನು ಹೊರಚಿಮ್ಮಿರುವೆ ಮತ್ತು ವಿಶಾಲವಾದ ಪಾಷಾಣದಿಂದ ವೃತ್ರನನ್ನು ಧ್ವಸ್ತಗೊಳಿಸಿರುವೆ.　　॥ ೬ ॥

## ಸೂಕ್ತ: ೫೭

ಈ ಸೂಕ್ತದ ದೇವತೆ: ಇಂದ್ರನು; ಋಷಿ: ಸವ್ಯನು; ಛಂದಸ್ಸು: ಜಗತೀ.

### [ವರ್ಗ: ೨೨]

೬೬೬. ಪ್ರ ಮಂಹಿಷ್ಠಾಯ ಬೃಹತೇ ಬೃಹದ್ರಯೇ ಸತ್ಯಶುಷ್ಮಾಯ
ತವಸೇ ಮತಿಂ ಭರೇ ।
ಅಪಾಮಿವ ಪ್ರವಣೇ ಯಸ್ಯ ದುರ್ಧರಂ ರಾಧೋ ವಿಶ್ವಾಯು
ಶವಸೇ ಅಪಾವೃತಂ ॥ ೧ ॥

ಅತೀವ ದಾನಿಯಾದ, ದೊಡ್ಡವನಾದ, ಪ್ರಭೂತಧನಶಾಲಿಯಾದ, ಅಮೋಘಬಲಸಂಪನ್ನನಾದ ಮತ್ತು ವಿಶಿಷ್ಟಪ್ರಕಾರದ ಪ್ರಕಾಂಡದೇಹಿಯಾದ ಇಂದ್ರನನ್ನು ಉದ್ದೇಶಿಸಿ ನಾನು ಮನನೀಯವಾದ ಸ್ತುತಿಯನ್ನು ಸಂಪಾದಿತಗೊಳಿಸುತ್ತೇನೆ. ಕೆಳಗಡೆಗೆ ಹರಿಯುತ್ತಿರುವ ಜಲಧಾರೆಯಂತೆ ಇರುವ ಇಂದ್ರನ ಬಲವನ್ನು ಯಾರೂ ಧಾರಣಮಾಡಲಾರರು. ಸ್ತೋತಾರರ ಬಲಸಾಧನೆಯ ಸಲುವಾಗಿ ಇಂದ್ರನು ಸರ್ವವ್ಯಾಪಿಯಾದ ಐಶ್ವರ್ಯವನ್ನು ಪ್ರಕಾಶಿಸಿರುವನು. ॥ ೧ ॥

೬೬೭. ಅಧ ತೇ ವಿಶ್ವಮನು ಹಾಸದಿಷ್ಟಯ ಆಪೋ ನಿಮ್ನೇವ
ಸವನಾ ಹವಿಷ್ಮತಃ ।
ಯತ್ ಪರ್ವತೇ ನ ಸಮಶೀತ ಹರ್ಯತ ಇಂದ್ರಸ್ಯ ವಜ್ರಃ
ಶ್ನಥಿತಾ ಹಿರಣ್ಯಯಃ ॥ ೨ ॥

ಇಂದ್ರನೇ! ಈ ಎಲ್ಲ ವಿಶ್ವವು ನಿನ್ನ ಯಜ್ಞದ ಕಡೆಗೆ ಮತ್ತು ಈ ಹವ್ಯದಾತಾರರಿಂದ ಅಭಿಷುತವಾದ ಸೋಮರಸವು ನಿನ್ನ ಕಡೆಗೆ ಪ್ರವಾಹಿತವಾಗಿತ್ತು. ಇಂದ್ರನ ಶೋಭನೀಯವಾದ, ಹಿರಣ್ಮಯವಾದ ಮತ್ತು ಹನನಶೀಲವಾದ ವಜ್ರವು ಪರ್ವತದ ಮೇಲೆ ನಿದ್ರಾಮಗ್ನವಾಗದೆ ಸದಾ ಜಾಗ್ರತವಾಗಿತ್ತು. ॥ ೨ ॥

೬೬೮. ಅಸ್ಮೈ ಭೀಮಾಯ ನಮಸಾ ಸಮಧ್ವರ ಉಷೋ ನ ಶುಭ್ರ
ಆ ಭರಾ ಪನೀಯಸೇ ।
ಯಸ್ಯ ಧಾಮ ಶ್ರವಸೇ ನಾಮೇಂದ್ರಿಯಂ ಜ್ಯೋತಿರಕಾರಿ
ಹರಿತೋ ನಾಯಸೇ ॥ ೩ ॥

ಶುಭ್ರೆಯಾದ ಉಷಾದೇವಿಯೇ! ಶತ್ರುಗಳಿಗೆ ಭಯಾವಹನಾದ ಮತ್ತು ಅತ್ಯಂತವಾದ ಸ್ತುತಿಗೆ ಪಾತ್ರನಾದ ಇಂದ್ರನಿಗೆ ಈ ಯಜ್ಞದಲ್ಲಿ ಈಗ ಯಜ್ಞಾನ್ನ

ವನ್ನು ಕೊಡು. ಅವನ ವಿಶ್ವಧಾರಕವಾದ, ಪ್ರಸಿದ್ಧವಾದ ಮತ್ತು ಇಂದ್ರತ್ವಚಿಹ್ನ ದಿಂದ ಸಂಯುಕ್ತವಾದ ಜ್ಯೋತಿಯು ಕುದುರೆಯಂತೆ ಅವನನ್ನು ಯಜ್ಞಾನ್ನ ಪ್ರಾಪ್ತ್ಯರ್ಥವಾಗಿ ನಾಲ್ಕೂ ಬದಿಗೆ ಒಯ್ಯುತ್ತಿದೆ. ॥ ೩ ॥

೬೬೯. ಇಮೇ ತ ಇಂದ್ರ ತೇ ವಯಂ ಪುರುಷ್ಟುತ ಯೇ ತ್ವಾರಭ್ಯ
ಚರಾಮಸಿ ಪ್ರಭೂವಸೋ ।
ನಹಿ ತ್ವದನ್ಯೋ ಗಿರ್ವಣೋ ಗಿರಃ ಸಘತ್ ಕ್ಷೋಣೀರಿವ
ಪ್ರತಿ ನೋ ಹರ್ಯ ತದ್ ವಚಃ ॥ ೪ ॥

ಅತ್ಯಧಿಕವಾಗಿ ಧನಶಾಲಿಯಾದ ಮತ್ತು ಸರ್ವಲೋಕದಿಂದ ಸ್ತುತಿಸಲ್ಪಟ್ಟ ಇಂದ್ರನೇ! ನಾವು ನಿನ್ನನ್ನೇ ನಂಬಿ ಯಜ್ಞಸಂಪಾದನೆಯನ್ನು ಮಾಡುತ್ತೇವೆ. ನಾವು ನಿನ್ನವರೇ ಆಗಿರುವೆವು. ಸ್ತುತಿಪಾತ್ರನೇ! ನಿನ್ನ ಹೊರತು ಬೇರೆ ಯಾವನೂ ಈ ಸ್ತುತಿಯನ್ನು ದೊರಕಿಸಲಾರನು. ಈ ಪೃಥಿವಿಯು ತನ್ನ ಪ್ರಾಣಿಗಳನ್ನು ಧಾರಣಮಾಡುವಂತೆ, ನೀನಾದರೂ ಈ ಸ್ತುತಿವಚನಗಳನ್ನು ಸ್ವೀಕರಿಸಯ್ಯಾ. ॥ ೪ ॥

೬೭೦. ಭೂರಿ ತ ಇಂದ್ರ ವೀರ್ಯಂ೧ ತವ ಸ್ಮಸ್ಯ—ಸ್ಯ
ಸ್ತೋತುರ್ಮಘವನ್ ಕಾಮಮಾ ಪೃಣ ।
ಅನು ತೇ ದ್ಯೌರ್ಬೃಹತೀ ವೀರ್ಯಂ ಮಮ ಇಯಂ ಚ ತೇ
ಪೃಥಿವೀ ನೇಮ ಓಜಸೇ ॥ ೫ ॥

ಇಂದ್ರನೇ! ನಿನ್ನ ಶೌರ್ಯವು ದೊಡ್ಡದಾಗಿರುವದು. ನಾವು ನಿನ್ನವರೇ ಆಗಿರುವೆವು. ಮಘವನೇ! ಈ ಸ್ತೋತಾರನ ಕಾಮನೆಗಳನ್ನು ಪೂರ್ಣಗೊಳಿ ಸಯ್ಯಾ. ನಿನ್ನ ವೀರ್ಯವು ಆಕಾಶಕ್ಕಿಂತಲೂ ವಿಶಾಲವಾದದ್ದು. ಈ ಪೃಥಿವಿ ಯಾದರೂ ನಿನ್ನ ಓಜಸ್ಸಿನ ಮುಂದೆ ನಮ್ರವಾಗಿ ತಲೆಬಾಗಿಸಿರುತ್ತದೆ. ॥ ೫ ॥

೬೭೧. ತ್ವಂ ತಮಿಂದ್ರ ಪರ್ವತಂ ಮಹಾಮುರುಂ ವಜ್ರೇಣ ವಜ್ರಿನ್
ಪರ್ವಶಶ್ಚಕರ್ತಿಥ ।
ಅವಾಸೃಜೋ ನಿವೃತಾಃ ಸರ್ತವಾ ಅಪಃ ಸತ್ರಾ ವಿಶ್ವಂ
ದಧಿಷೇ ಕೇವಲಂ ಸಹಃ ॥ ೬ ॥

ವಜ್ರಧಾರಿಯಾದ ಇಂದ್ರನೇ! ನೀನು ಆ ವಿಸ್ತೀರ್ಣವಾದ ಮೇಘವನ್ನು ವಜ್ರದಿಂದ ತುಂಡು-ತುಂಡಾಗಿ ಕತ್ತರಿಸಿದೆ. ಆ ಮೇಘದಿಂದ ಆವೃತವಾದ ಜಲ ವನ್ನು ಹೊಳೆಯುವದಕ್ಕಾಗಿ, ನೀನು ಕೆಳಗಡೆಗೆ ಬಿಟ್ಟುಬಿಟ್ಟೆ. ನೀನು ಮಾತ್ರವೇ ವಿಶ್ವವ್ಯಾಪಿಯಾದ ಬಲವನ್ನು ಧಾರಣಮಾಡಿಕೊಂಡಿರುವೆ. ॥ ೬ ॥

---

# ಹನ್ನೊಂದನೇ ಅನುವಾಕ

## ಸೂಕ್ತ: ೫೮

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಗೌತಮ-ಪುತ್ರನಾದ ನೋಧಾಋಷಿಯು;
ಛಂದಸ್ಸು: ಜಗತೀ ಮತ್ತು ತ್ರಿಷ್ಟುಪ್.

### [ವರ್ಗ: ೨೩]

೬೭೨. ನೂ ಚಿತ್ ಸಹೋಜಾ ಅಮೃತೋ ನಿ ತುಂದತೇ ಹೋತಾ
ಯದ್ ದೂತೋ ಅಭವದ್ ವಿವಸ್ವತಃ ।
ವಿ ಸಾಧಿಷ್ಠೇಭಿಃ ಪಥಿಭೀ ರಜೋ ಮಮ ಆ ದೇವತಾತಾ
ಹವಿಷಾ ವಿವಾಸತಿ ॥ ೧ ॥

ಮಹಾಬಲದಿಂದ ಹುಟ್ಟಿರುವ ಮತ್ತು ಅಮರನಾಗಿರುವ ಅಗ್ನಿಯು ಸದಾ ಜಾಗೃತನಾಗಿದ್ದು ಜ್ವಲನಕಾರ್ಯದಲ್ಲಿ ಸಮರ್ಥನಾಗಿರುವನು. ಯಾವ ಸಮಯದಲ್ಲಿ ದೇವಾಹ್ವಾನಕಾರಿಯಾದ ಅಗ್ನಿಯು ಯಜಮಾನನ ಹವ್ಯವಾಹಕನಾದ ದೂತನಾಗಿದ್ದನೋ, ಆ ಸಮಯದಲ್ಲಿ ಉಚಿತವಾದ ಮಾರ್ಗದಿಂದ ಗಮನಮಾಡಿ ಅಗ್ನಿಯು ಅಂತರಿಕ್ಷವನ್ನು ನಿರ್ಮಿಸಿದ್ದನು. ಅಗ್ನಿಯು ಯಜ್ಞದಲ್ಲಿ ಹವ್ಯದಿಂದ ದೇವತೆಗಳ ಪರಿಚರ್ಯೆಯನ್ನು ಮಾಡುತ್ತಾನೆ. ॥ ೧ ॥

೬೭೩. ಆ ಸ್ವಮದ್ಮ ಯುವಮಾನೋ ಅಜರ-ಸ್ತೃಷ್ವವಿಷ್ಯನ್ನ
ತಸೇಷು ತಿಷ್ಠತಿ ।
ಅತ್ಯೋ ನ ಪೃಷ್ಠಂ ಪ್ರುಷಿತಸ್ಯ ರೋಚತೇ ದಿವೋ ನ ಸಾನು
ಸ್ತನಯನ್ನಚಿಕ್ರದತ್ ॥ ೨ ॥

ಅಜರನಾದ ಅಗ್ನಿಯು ತೃಣ-ಗುಲ್ಮ ಮುಂತಾದ ತನ್ನ ಖಾದ್ಯವನ್ನು ಜ್ವಲನಶಕ್ತಿಯಿಂದ ಸೇರಿಸಿಕೊಂಡು ಭಕ್ಷಣ ಮಾಡಿ, ಶೀಘ್ರವಾಗಿ ಕಾಷ್ಠವನ್ನೇರುತ್ತಾನೆ. ದಹಿಸುವದಕ್ಕಾಗಿ ಅಲ್ಲಿಂದಿಲ್ಲಿಗೆ ಸಂಚರಿಸುವ ಅಗ್ನಿಯ ಪೃಷ್ಠದಲ್ಲಿರುವ ಜ್ವಾಲೆಯು ಗತಿಶೀಲವಾದ ಕುದುರೆಯಂತೆ ಶೋಭಿಸುತ್ತದೆ; ಜೊತೆಯಲ್ಲಿ ಆಕಾಶದ ಉನ್ನತವಾದ ಮತ್ತು ಶಬ್ದಾಯಮಾನವಾದ ಮೇಘದಂತೆ ಗಂಭೀರವಾದ ಶಬ್ದವನ್ನೂ ಮಾಡುತ್ತಿದೆ. ॥ ೨ ॥

೬೭೪. ಕ್ರಾಣಾ ರುದ್ರೇಭಿರ್ವಸುಭಿಃ ಪುರೋಹಿತೋ ಹೋತಾ
ನಿಷತ್ತೋ ರಯಿಷಾಳಮರ್ತ್ಯಃ ।

ರಥೋ ನ ವಿಕ್ಷ್ವೃಂಜಸಾನ ಆಯುಷು ವ್ಯಾನುಷಗ್ವಾರ್ಯಾ
ದೇವ ಋಣ್ವತಿ ॥ ೩ ॥

ಅಗ್ನಿಯು ಹವ್ಯವಾಹಿಯಾಗಿ ರುದ್ರರ ಮತ್ತು ವಸುಗಳ ಸಮ್ಮುಖದಲ್ಲಿ ಸ್ಥಾನವನ್ನು ದೊರಕಿಸಿರುತ್ತಾನೆ. ಅಗ್ನಿಯು ದೇವಾಹ್ವಾನಕಾರಿಯಾಗಿ ಯಜ್ಞ ಸ್ಥಾನಗಳಲ್ಲಿ ಉಪಸ್ಥಿತನಾಗಿರುತ್ತಾನೆ. ಅಗ್ನಿಯು ಧನವನ್ನು ಜಯಿಸುವವನೂ, ಅಮರನೂ ಆಗಿರುತ್ತಾನೆ. ಬೆಳಗುವ ಅಗ್ನಿಯು ಯಜಮಾನರ ಸ್ತುತಿಯನ್ನು ಗಳಿಸಿ ಮತ್ತು ರಥದಂತೆ ಸಂಚರಿಸಿ ಪ್ರಜೆಗಳ ಮನೆಯಲ್ಲಿ ತಿರುಗಿ ತಿರುಗಿ ಶ್ರೇಷ್ಠ ವಾದ ಧನಪ್ರದಾನವನ್ನು ಮಾಡುತ್ತಾನೆ. ॥ ೩ ॥

೬೭೫. ವಿ ವಾತಜೂತೋ ಅತಸೇಷು ತಿಷ್ಠತೇ ವೃಥಾ ಜುಹೂಭಿಃ
ಸೃಣ್ಯಾ ತುವಿಷ್ವಣಿಃ ।
ತೃಷು ಯದಗ್ನೇ ವನಿನೋ ವೃಷಾಯಸೇ ಕೃಷ್ಣಂ ತ ಏಮ
ರುಶದೂರ್ಮೇ ಅಜರ ॥ ೪ ॥

ಅಗ್ನಿಯು, ಗಾಳಿಯಿಂದ ಪ್ರೇರಿತನಾಗಿ, ಮಹಾಶಬ್ದದೊಂದಿಗೆ, ಜ್ವಲಂತ ವಾದ ಜಿಹ್ವೆಯೊಂದಿಗೆ ಮತ್ತು ತನ್ನ ತೇಜಸ್ಸಿನೊಡಗೂಡಿ ಅನಾಯಾಸವಾಗಿ ವೃಕ್ಷ ಗಳನ್ನು ದಹಿಸಿಬಿಡುತ್ತಾನೆ. ಅಗ್ನಿಯೇ! ಯಾವ ಕಾಲದಲ್ಲಿ ನೀನು ವನ್ಯ-ವೃಕ್ಷ ಗಳನ್ನು ಶೀಘ್ರವಾಗಿ ದಹಿಸುವದಕ್ಕಾಗಿ ಹೋರಿಯಂತೆ ವ್ಯಗ್ರನಾಗುತ್ತೀಯೋ, ಆ ಕಾಲದಲ್ಲಿ ನಿನ್ನ ಗಮನಮಾರ್ಗವು ಕೃಷ್ಣವರ್ಣದ್ದಾಗಿ ಹೋಗುವದು. ॥ ೪ ॥

೬೭೬. ತಪುರ್ಜಂಭೋ ವನ ಆ ವಾತಚೋದಿತೋ ಯೂಥೇ ನ
ಸಾಹ್ವಾ ಅವ ವಾತಿ ವಂಸಗಃ ।
ಅಭಿವ್ರಜನ್ನಕ್ಷಿತಂ ಪಾಜಸಾಃ ರಜಃ ಸ್ಥಾತುಶ್ಚರಥಂ ಭಯತೇ
ಪತತ್ರಿಣಃ ॥ ೫ ॥

ಅಗ್ನಿಯು, ಗಾಳಿಯಿಂದ ಪ್ರೇರಿತನಾಗಿ, ತನ್ನ ಶಿಖೆಯೆಂಬ ಆಯುಧವನ್ನು ಧಾರಣಮಾಡಿ, ಮಹಾತೇಜಸ್ಸಿನಿಂದ ಅಶುಷ್ಕವಾದ ವೃಕ್ಷರಸವನ್ನು ಆಕ್ರಮಣ ಗೊಳಿಸುತ್ತಾನೆ ಮತ್ತು ಗೋವೃಂದದಲ್ಲಿಯ ಮದವೇರಿದ ವೃಷಭದಂತೆ ಎಲ್ಲರನ್ನೂ ಪರಾಭೂತಗೊಳಿಸಿ ನಾಲ್ಕೂ ದಿಕ್ಕುಗಳನ್ನು ವ್ಯಾಪಿಸಿಬಿಡುತ್ತಾನೆ. ಎಲ್ಲ ಸ್ಥಾವರ ಜಂಗಮಗಳು, ಅದರಲ್ಲಿಯೂ ಪಕ್ಷಿಗಳು, ಅಗ್ನಿಗೆ ಹೆದರುತ್ತವೆ. ॥ ೫ ॥

## [ವರ್ಗ: ೨೪]

೬೭೭. ದಧುಷ್ಟ್ವಾ ಭೃಗವೋ ಮಾನುಷೇಷ್ವಾ ರಯಿಂ ನ ಚಾರುಂ
ಸುಹವಂ ಜನೇಭ್ಯಃ ।

ಹೋತಾರಮಗ್ನೇ ಅತಿಥಿಂ ವರೇಣ್ಯಂ ಮಿತ್ರಂ ನ ಶೇವಂ
ದಿವ್ಯಾಯ ಜನ್ಮನೇ ॥ ೬ ॥

ಅಗ್ನಿಯೇ! ಮನುಷ್ಯರ ಮಧ್ಯದಲ್ಲಿ ಭೃಗುಜನರು, ದಿವ್ಯವಾದ ಜೀವನವನ್ನು ಗಳಿಸುವದಕ್ಕಾಗಿ, ನಿನ್ನನ್ನು ಶೋಭಿಸುವ ಧನದಂತೆ ಧಾರಣಮಾಡಿದ್ದರು. ನೀನು ಅನಾಯಾಸವಾಗಿ ಜನತೆಯ ಆಹ್ವಾನವನ್ನು ಕೇಳುತ್ತೀ ಮತ್ತು ನೀನು ಸ್ವತಃ ದೇವತೆಗಳ ಆಹ್ವಾನವನ್ನು ಮಾಡುತ್ತೀ. ನೀನು ಯಜ್ಞಸ್ಥಾನದಲ್ಲಿ ಅತಿಥಿಯ ರೂಪಿನಲ್ಲಿ, ಉತ್ತಮನಾದ ಗೆಳೆಯನಂತೆ, ಸುಖದಾಯಕನಾಗಿರುವೆ. ॥ ೬ ॥

೬೭೮. ಹೋತಾರಂ ಸಪ್ತ ಜುಹ್ವೋ೩ ಯಜಿಷ್ಠಂ ಯಂ ವಾಘತೋ
ವೃಣತೇ ಅಧ್ವರೇಷು ।
ಅಗ್ನಿಂ ವಿಶ್ವೇಷಾಮರತಿಂ ವಸೂನಾಂ ಸಪರ್ಯಾಮಿ ಪ್ರಯಸಾ
ಯಾಮಿ ರತ್ನಂ ॥ ೭ ॥

ಏಳು ಆಹ್ವಾನಕಾರಿಗಳಾದ ಋತ್ವಿಜರು ಯಜ್ಞಗಳಲ್ಲಿ ಪರಮಯಜ್ಞಾರ್ಹನಾದ ಮತ್ತು ದೇವಾಹ್ವಾನಕಾರಿಯಾದ ಯಾವ ಅಗ್ನಿಯನ್ನು ವರಿಸುತ್ತಾರೋ, ಆ ಸರ್ವಧನದಾತಾರನಾದ ಅಗ್ನಿಯನ್ನು ನಾನು ಯಜ್ಞಾನ್ನದಿಂದ ಪೂಜಿಸುತ್ತೇನೆ, ಮತ್ತು ರಮಣೀಯವಾದ ಧನದ ಸಲುವಾಗಿ ಆ ಅಗ್ನಿಯನ್ನು ಯಾಚಿಸುತ್ತೇನೆ. ॥ ೭ ॥

೬೭೯. ಅಚ್ಛಿದ್ರಾ ಸೂನೋ ಸಹಸೋ ನ ಅದ್ಯ ಸ್ತೋತೃಭ್ಯೋ
ಮಿತ್ರಮಹಃ ಶರ್ಮ ಯಚ್ಛ ।
ಅಗ್ನೇ ಗೃಣಂತಮಂಹಸ ಉರುಷ್ಯೋ—ರ್ಜೋ ನಪಾತ್
ಪೂರ್ಭಿರಾಯಸೀಭಿಃ ॥ ೮ ॥

ಬಲಪುತ್ರನಾದ ಮತ್ತು ತದನುರೂಪಿನ ದೀಪ್ತಿಯುಕ್ತನಾದ ಅಗ್ನಿಯೇ! ಇಂದು ನಮಗೆ ಅಚ್ಛಿದ್ರವಾದ ಸುಖದ ದಾನಮಾಡಯ್ಯಾ. ಅನ್ನಪುತ್ರನೇ! ನಿನ್ನ ಸ್ತೋತಾರನನ್ನು, ಕಬ್ಬಿಣದ ಕವಚದಂತೆ, ದೃಢವಾಗಿ ರಕ್ಷಿಸುತ್ತ ಪಾಪದಿಂದ ಕಾಪಾಡಯ್ಯಾ. ॥ ೮ ॥

೬೮೦. ಭವಾ ವರೂಥಂ ಗೃಣತೇ ವಿಭಾವೋ ಭವಾ ಮಘವನ್
ಮಘವದ್ಭ್ಯಃ ಶರ್ಮ ।
ಉರುಷ್ಯಾಗ್ನೇ ಅಂಹಸೋ ಗೃಣಂತಂ ಪ್ರಾತರ್ಮಕ್ಷೂ
ಧಿಯಾವಸುರ್ಜಗಮ್ಯಾತ್ ॥ ೯ ॥

ಪ್ರಭೆಯುಳ್ಳ ಅಗ್ನಿಯೇ! ನೀನು ಸ್ತೋತಾರನಿಗೆ ಗೃಹರೂಪನಾಗು. ಧನವಂತನಾದ ಅಗ್ನಿಯೇ! ಧನವಂತರಿಗೆ ಕಲ್ಯಾಣಸ್ವರೂಪದವನಾಗು. ಅಗ್ನಿಯೇ!

ಸ್ತೋತಾರರನ್ನು ಪಾಪದಿಂದ ಕಾಪಾಡಯ್ಯಾ, ಪ್ರಜ್ಞಾರೂಪದ ಧನದಿಂದ ಸಂಪನ್ನನಾದ ಅಗ್ನಿಯೇ! ಇಂದು ಪ್ರಾತಃಕಾಲದಲ್ಲಿ ಶೀಘ್ರವಾಗಿ ಬಾರಯ್ಯಾ ॥ ೯ ॥

## ಸೂಕ್ತ: ೫೯

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ಗೌತಮ ಪುತ್ರನಾದ ನೋಧಾಋಷಿಯು; ಛಂದಸ್ಸು: ತ್ರಿಷ್ಟುಪ್.

### [ವರ್ಗ: ೨೫]

೬೮೧. ವಯಾ ಇದಗ್ನೇ ಅಗ್ನಯಸ್ತೇ ಅನ್ಯೇ ತ್ವೇ ವಿಶ್ವೇ
ಅಮೃತಾ ಮಾದಯಂತೇ ।
ವೈಶ್ವಾನರ ನಾಭಿರಸಿ ಕ್ಷಿತೀನಾಂ ಸ್ಥೂಣೇವ ಜನಾ
ಉಪಮಿದ್ ಯಯಂಥ ॥ ೧ ॥

ಅಗ್ನಿದೇವನೇ! ಅನ್ಯಾನ್ಯವಾದ ಯಾವ ಅಗ್ನಿಗಳಿರುವವೋ, ಅವೆಲ್ಲವೂ ನಿನ್ನ ಶಾಖೆಗಳೇ ಆಗಿರುವವು. ನಿನ್ನಲ್ಲಿಯೇ ಎಲ್ಲ ಅಮರ ದೇವತೆಗಳು ಕಾಣ ಬರುತ್ತವೆ. ವೈಶ್ವಾನರನೇ! ನೀನು ಮನುಷ್ಯರ ನಾಭಿಯಾಗಿರುವೆ. ನೀನು ಕಂಬದಂತೆ ಪೃಥಿವಿಯನ್ನು ಧರಿಸಿರುವೆ. ॥ ೧ ॥

೬೮೨. ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಅಥಾಭವದರತೀ
ರೋದಸ್ಯೋಃ ।
ತಂ ತ್ವಾ ದೇವಾಸೋಽಜನಯಂತ ದೇವಂ ವೈಶ್ವಾನರ
ಜ್ಯೋತಿರಿದಾರ್ಯಾಯ ॥ ೨ ॥

ಅಗ್ನಿಯು ಸ್ವರ್ಗದ ಮಸ್ತಕವೂ, ಪೃಥಿವಿಯ ನಾಭಿಯೂ, ದ್ಯುಲೋಕ-ಭೂಲೋಕಗಳ ಅಧಿಪತಿಯೂ ಆಗಿದ್ದಾನೆ. ವೈಶ್ವಾನರನೇ! ನೀನು ದೇವತೆಯಾಗಿರುವೆ. ದೇವತೆಗಳು ಆರ್ಯರಿಗಾಗಿ ಜ್ಯೋತಿಸ್ವರೂಪನಾದ ನಿನ್ನನ್ನು ಹುಟ್ಟಿಸಿದ್ದರು. ॥ ೨ ॥

೬೮೩. ಆ ಸೂರ್ಯೇ ನ ರಶ್ಮಯೋ ಧ್ರುವಾಸೋ ವೈಶ್ವಾನರೇ
ದಧಿರೇಽಗ್ನಾ ವಸೂನಿ ।
ಯಾ ಪರ್ವತೇಷ್ವೋಷಧೀಷ್ವಪ್ಸು ಯಾ ಮಾನುಷೇಷ್ವಸಿ
ತಸ್ಯ ರಾಜಾ ॥ ೩ ॥

ಯಾವ ರೀತಿಯಲ್ಲಿ ನಿಶ್ಚಲವಾದ ಕಿರಣಗಳು ಸೂರ್ಯನಲ್ಲಿ ಸ್ಥಾಪಿತವಾಗಿರುವವೋ, ಅದೇ ರೀತಿಯಲ್ಲಿ ವೈಶ್ವಾನರರೂಪದಲ್ಲಿರುವ ಅಗ್ನಿಯೊಳಗೆ ಎಲ್ಲ

ತರಹದ ಸಂಪತ್ತುಗಳು ಸ್ಥಾಪಿತವಾಗಿವೆ. ಅಗ್ನಿಯೇ! ಪರ್ವತಗಳಲ್ಲಿ, ಔಷಧಿಗಳಲ್ಲಿ, ಜಲಗಳಲ್ಲಿ ಮತ್ತು ಮನುಷ್ಯರಲ್ಲಿ ಯಾವ ಧನಗಳಿರುವವೋ, ಅವೆಲ್ಲವಕ್ಕೆ ನೀನು ಅರಸನಾಗಿರುವೆ. ॥ ೩ ॥

೬೮೪. ಬೃಹತೀ ಇವ ಸೂನವೇ ರೋದಸೀ ಗಿರೋ ಹೋತಾ

ಮನುಷ್ಯೋ೩ ನ ದಕ್ಷಃ ।

ಸ್ವರ್ವತೇ ಸತ್ಯಶುಷ್ಮಾಯ ಪೂರ್ವೀರ್—ವೈಶ್ವಾನರಾಯ

ನೃತಮಾಯ ಯಹ್ವೀಃ ॥ ೪ ॥

ದ್ಯಾವಾಪೃಥಿವಿಗಳು ವೈಶ್ವಾನರನಿಗಾಗಿಯೇ ವಿಸ್ತೃತವಾಗಿದ್ದವು. ವಂದಿಗಳು ಪ್ರಭುವಾದವನನ್ನು ಸ್ತುತಿಸುವಂತೆ ಈ ನಿಪುಣನಾದ ಹೋತಾರನು ಸುಗತಿ ಸಂಪನ್ನನೂ, ಪ್ರಕೃತಬಲಶಾಲಿಯೂ, ನೇತಾರರಲ್ಲಿ ಶ್ರೇಷ್ಠನೂ ಆಗಿರುವ ವೈಶ್ವಾನರನನ್ನು ಉದ್ದೇಶಿಸಿ, ಬಹುವಿಧವಾದ ಮಹಾಸ್ತುತಿವಾಕ್ಯಗಳನ್ನು ಪ್ರಯೋಗಿಸುತ್ತಾನೆ. ॥ ೪ ॥

೬೮೫. ದಿವಶ್ಚಿತ್ ತೇ ಬೃಹತೋ ಜಾತವೇದೋ ವೈಶ್ವಾನರ

ಪ್ರರಿರಿಚೇ ಮಹಿತ್ವಂ

ರಾಜಾ ಕೃಷ್ಟೀನಾಮಸಿ ಮಾನುಷೀಣಾಂ ಯುಧಾ

ದೇವೇಭ್ಯೋ ವರಿವಶ್ಚಕರ್ಥ ॥ ೫ ॥

ವೈಶ್ವಾನರನೇ! ನೀನು ಪ್ರಾಣಿಗಳನ್ನೆಲ್ಲ ಬಲ್ಲವನಾಗಿರುವೆ. ಆಕಾಶಕ್ಕಿಂತಲೂ ನಿನ್ನ ಮಾಹಾತ್ಮ್ಯವು ಅಧಿಕವಾದದ್ದು. ನೀನು ಮಾನವರೆಂಬ ಪ್ರಜೆಗಳಿಗೆ ಅರಸನಾಗಿರುವೆ. ನೀನು ದೇವತೆಗಳ ಸಲುವಾಗಿ ಯುದ್ಧಮಾಡಿ ಧನವನ್ನು ಗಳಿಸಿದೆ. ॥ ೫ ॥

೬೮೬. ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ

ವೃತ್ರಹಣಂ ಸಚಂತೇ ।

ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾ ಅಧೂನೋತ್ ಕಾಷ್ಠಾ

ಅವ ಶಂಬರಂ ಭೇತ್ ॥ ೬ ॥

ಮನುಷ್ಯರು ಯಾವ ವೃತ್ರಹಂತಾ ಅಥವಾ ಮೇಘಭೇದನಕಾರಿಯಾದ ವೈಶ್ವಾನರ ಅಥವಾ ವಿದ್ಯುದಗ್ನಿಯನ್ನು, ಮಳೆಗಾಗಿ, ಅರ್ಚಿಸುವರೋ, ಅದೇ ಜಲವರ್ಷಿಯಾದ ವೈಶ್ವಾನರನ ಮಹಾತ್ಮೆಯನ್ನು ನಾನು ಬಣ್ಣಿಸುತ್ತೇನೆ. ವೈಶ್ವಾನರಾಗ್ನಿಯು ದಸ್ಯುಗಳನ್ನು ವಧಿಸಿರುವನು, ಮಳೆಯ ನೀರನ್ನು ಕೆಳಗೆ ಉರುಳಿಸಿರುವನು ಮತ್ತು ಶಂಬರನನ್ನು ಭಿನ್ನಮಾಡಿರುವನು. ॥ ೬ ॥

೬೮೭. ವೈಶ್ವಾನರೋ ಮಹಿಮ್ನಾ ವಿಶ್ವಕೃಷ್ಟಿ—ರ್ಭರದ್ವಾಜೇಷು
ಯಜತೋ ವಿಭಾವಾ ।
ಶಾತವನೇಯೇ ಶತಿನೀಭಿರಗ್ನಿಃ ಪುರುಣೀಥೇ ಜರತೇ
ಸೂನೃತಾವಾನ್ ॥ ೭ ॥

ತನ್ನ ಮಹಾತ್ಮೆಯಿಂದ ವೈಶ್ವಾನರನು ಎಲ್ಲ ಮನುಷ್ಯರ ಅಧಿಪತಿಯಾಗಿರುವನು ಮತ್ತು ಪುಷ್ಟಿಕರವೂ, ಅನ್ನಶಾಲಿಯೂ ಆದ ಯಜ್ಞದಲ್ಲಿ ಯಜನೀಯನಾಗಿರುವನು. ವೈಶ್ವಾನರನು ಪ್ರಭಾಸಂಪನ್ನನೂ, ಸುಕೃತ-ವಾಕ್ಯಶಾಲಿಯೂ ಆಗಿರುವನು. 'ಶಾತವನಿ'ಯ ಪುತ್ರನಾದ ಪುರುಣೀ ಅರಸನು, ಅನೇಕ ಸ್ತುತಿಗಳಿಂದ, ಆ ಅಗ್ನಿಯನ್ನು ಸ್ತುತಿಸಿರುವನು. ॥ ೭ ॥

## ಸೂಕ್ತ: ೬೦

ಈ ಸೂಕ್ತದ ದೇವತೆ: ಅಗ್ನಿಯು; ಋಷಿ: ನೋಧಾಋಷಿಯು; ಛಂದಸ್ಸು: ತ್ರಿಷ್ಟುಪ್.

### [ವರ್ಗ: ೨೬]

೬೮೮. ವಹ್ನಿಂ ಯಶಸಂ ವಿದಥಸ್ಯ ಕೇತುಂ ಸುಪ್ರಾವ್ಯಂ ದೂತಂ
ಸದ್ಯೋಅರ್ಥಂ ।
ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ ಭೃಗವೇ
ಮಾತರಿಶ್ವಾ ॥ ೧ ॥

ಅಗ್ನಿಯು ಹವ್ಯವಾಹಕನೂ, ಯಶಸ್ವಿಯೂ, ಯಜ್ಞಪ್ರಕಾಶಕನೂ, ಸಮ್ಯಗ್ರಕ್ಷಣಶೀಲನೂ, ದೇವತೆಗಳ ದೂತನೂ ಆಗಿರುತ್ತಾನೆ. ಅವನು ಹವ್ಯಗಳನ್ನು ಹಿಡಿದುಕೊಂಡು ದೇವತೆಗಳ ಹತ್ತಿರ ಹೋಗುತ್ತಾನೆ. ಅವನು ಎರಡು ಕಾಷ್ಠಗಳಿಂದ, ಅರಣಿಮಂಥನದಿಂದ, ಉತ್ಪನ್ನನಾಗಿ ಧನದಂತೆ ಪ್ರಶಂಸಿತನಾಗಿರುತ್ತಾನೆ. ಮಾತರಿಶ್ವನು ಅದೇ ಅಗ್ನಿಯನ್ನು, ಮಿತ್ರನಂತೆ, ಭೃಗುವಂಶಿಗಳ ಬಳಿಗೆ ತಕ್ಕೊಂಡು ಬರಲಿ. ॥ ೧ ॥

೬೮೯. ಅಸ್ಯ ಶಾಸುರುಭಯಾಸಃ ಸಚಂತೇ ಹವಿಷ್ಮಂತ ಉಶಿಜೋ
ಯೇ ಚ ಮರ್ತಾಃ ।
ದಿವಶ್ಚಿತ್ ಪೂರ್ವೋ ನ್ಯಸಾದಿ ಹೋತಾಪೃಚ್ಛ್ಯೋ
ವಿಶ್ಪತಿರ್ವಿಕ್ಷು ವೇಧಾಃ ॥ ೨ ॥

ಹವ್ಯಗ್ರಾಹಿಗಳಾದ ದೇವತೆಗಳು ಮತ್ತು ಮಾನವರು—ಇವರಿಬ್ಬರೂ ಈ ಶಾಸನಕರ್ತಾರನಾದ ಅಗ್ನಿಯನ್ನು ಸೇವಿಸುತ್ತಾರೆ. ಈ ಪೂಜ್ಯನೂ, ಪ್ರಜಾ

ಪಾಲಕನೂ, ಫಲದಾತಾರನೂ ಆಗಿರುವ ಅಗ್ನಿಯು ಸೂರ್ಯೋದಯಕ್ಕಿಂತ ಮುಂಚಿತವಾಗಿಯೇ ಯಜಮಾನರ ಮಧ್ಯದಲ್ಲಿ ಸ್ಥಾಪಿತವಾಗಿರುತ್ತಾನೆ. ॥ ೨ ॥

೬೯೦. ತಂ ನವ್ಯಸೀ ಹೃದ ಆ ಜಾಯಮಾನ—ಮಸ್ಮತ್
ಸುಕೀರ್ತಿರ್ಮಧುಜಿಹ್ವಮಶ್ಯಾಃ ।
ಯಮೃತ್ವಿಜೋ ವೃಜನೇ ಮಾನುಷಾಸಃ ಪ್ರಯಸ್ವಂತ
ಆಯವೋ ಜೀಜನಂತ ॥ ೩ ॥

ಪ್ರಾಣದಿಂದ ಉತ್ಪನ್ನನಾದ ಮತ್ತು ಸಿಹಿಯಾದ ನಾಲಿಗೆಯುಳ್ಳ ಅಗ್ನಿಯ ಸಮ್ಮುಖದಲ್ಲಿಯೇ ನಮ್ಮ ಹೊಸದಾದ ಸ್ತುತಿಯು ವ್ಯಾಪ್ತವಾಗಲಿ. ಮಾನವರು ಯಥಾಸಮಯದಲ್ಲಿ ಯಜ್ಞಸಂಪಾದನ ಮತ್ತು ಯಜ್ಞಾನ್ನಪ್ರದಾನಮಾಡಿ ಈ ಅಗ್ನಿಯನ್ನು ಯುದ್ಧದ ಸಮಯದಲ್ಲಿ ಹುಟ್ಟಿಸುತ್ತಾರೆ. ॥ ೩ ॥

೬೯೧. ಉಶಿಕ್ ಪಾವಕೋ ವಸುರ್ಮಾನುಷೇಷು ವರೇಣ್ಯೋ
ಹೋತಾಧಾಯಿ ವಿಕ್ಷು ।
ದಮೂನಾ ಗೃಹಪತಿರ್ದಮ ಆँ ಅಗ್ನಿರ್ಭುವದ್ ರಯಿಪತೀ
ರಯೀಣಾಂ ॥ ೪ ॥

ಅಗ್ನಿಯು ಕಾಮನಾಪಾತ್ರನೂ, ವಿಶುದ್ಧಕಾರಿಯೂ, ನಿವಾಸಕ್ಕೆ ಕಾರಣನೂ, ವರೇಣ್ಯನೂ, ದೇವಾಹ್ವಾನಕಾರಿಯೂ ಆಗಿರುವನು. ಯಜ್ಞದಲ್ಲಿ ಪ್ರವಿಷ್ಟರಾದ ಮಾನವರ ಮಧ್ಯದಲ್ಲಿ ಅಗ್ನಿಯು ಸ್ಥಾಪಿಸಲ್ಪಡುತ್ತಾನೆ. ಅಗ್ನಿಯೇ! ನೀನು ಶತ್ರುದಮನದಲ್ಲಿ ಕೃತಸಂಕಲ್ಪನೂ, ನಮ್ಮ ಮನೆಗಳಲ್ಲಿ ಪಾಲನಕರ್ತಾರನೂ ಆಗಯ್ಯಾ. ಯಜ್ಞಭವನದಲ್ಲಿ ನೀನು ಧನಾಧಿಪತಿಯಾಗಿರುವೆ. ॥ ೪ ॥

೬೯೨. ತಂ ತ್ವಾ ವಯಂ ಪತಿಮಗ್ನೇ ರಯೀಣಾಂ ಪ್ರ ಶಂಸಾಮೋ
ಮತಿಭಿರ್ಗೋತಮಾಸಃ ।
ಆಶುಂ ನ ವಾಜಂಭರಂ ಮರ್ಜಯಂತಃ ಪ್ರಾತರ್ಮಕ್ಷೂ
ಧಿಯಾವಸುರ್ಜಗಮ್ಯಾತ್ ॥ ೫ ॥

ಅಗ್ನಿಯೇ! ನಾವು ಗೋತಮಗೋತ್ರದಲ್ಲಿ ಹುಟ್ಟಿರುವೆವು. ನೀನು ಧನಾಧಿಪತಿಯೂ, ರಕ್ಷಣಶೀಲನೂ, ಯಜ್ಞಾನ್ನದ ಕರ್ತಾರನೂ ಆಗಿರುವೆ. ಸ್ವಾರನು ತನ್ನ ಕೈಯಿಂದ ಕುದುರೆಯನ್ನು ಸ್ವಚ್ಛಗೊಳಿಸುವಂತೆ, ನಾವಾದರೂ ನಿನ್ನನ್ನು ಮಾರ್ಜಿತಮಾಡಿ ಮನನೀಯವಾದ ಸ್ತೋತ್ರಗಳಿಂದ ಪ್ರಶಂಸಿಸುತ್ತೇವೆ. ತನ್ನ ಪ್ರಜ್ಞೆಯಿಂದ ಅಗ್ನಿಯು ಧನವನ್ನು ಪ್ರಾಪ್ತಗೊಳಿಸಿರುತ್ತಾನೆ. ಈ ಪ್ರಾತಃಕಾಲದಲ್ಲಿ ತ್ವರಿತವಾಗಿ ಬಾರಯ್ಯಾ. ॥ ೫ ॥

## ಸೂಕ್ತ: ೬೧

ಈ ಸೂಕ್ತದ ದೇವತೆ: ಇಂದ್ರನು; ಋಷಿ: ನೋಧಾಋಷಿಯು; ಛಂದಸ್ಸು: ತ್ರಿಷ್ಟುಪ್.

### [ವರ್ಗ: ೨೭]

೬೯೩. ಅಸ್ಮಾ ಇದು ಪ್ರ ತವಸೇ ತುರಾಯ ಪ್ರಯೋ ನಹರ್ಮಿ
ಸ್ತೋಮಂ ಮಾಹಿನಾಯ ।
ಋಚೀಷಮಾಯಾಧ್ರಿಗವ ಓಹ—ಮಿಂದ್ರಾಯ ಬ್ರಹ್ಮಾಣಿ
ರಾತತಮಾ ॥ ೧ ॥

ಇಂದ್ರನು ಬಲಶಾಲಿಯೂ, ಶೀಘ್ರಗಾಮಿಯೂ, ಗುಣದಿಂದ ದೊಡ್ಡವನೂ, ಸ್ತುತಿಪಾತ್ರನೂ, ಅಬಾಧಿತಗತಿಯೂ ಆಗಿರುವನು. ಹಸಿವೆಯಿಂದ ಬಳಲುವವನಿಗೆ ಅನ್ನದಾನಮಾಡಲ್ಪಡುವಂತೆ, ನಾನು ಇಂದ್ರನಿಗೆ ಗ್ರಹಣಯೋಗ್ಯವಾದ ಸ್ತುತಿಯನ್ನೂ, ಪೂರ್ವವರ್ತಿಯಾದ ಯಜಮಾನನಿಂದ ಅರ್ಪಿತವಾದ ಯಜ್ಞಾನ್ನವನ್ನೂ, ಪ್ರದಾನಮಾಡುತ್ತೇನೆ. ॥ ೧ ॥

೬೯೪. ಅಸ್ಮಾ ಇದು ಪ್ರಯ ಇವ ಪ್ರ ಯಂಸಿ ಭರಾಮ್ಯಾಂಗೂಷಂ
ಬಾಧೇ ಸುವೃಕ್ತಿ ।
ಇಂದ್ರಾಯ ಹೃದಾ ಮನಸಾ ಮನೀಷಾ ಪ್ರತ್ನಾಯ
ಪತ್ಯೇ ಧಿಯೋ ಮರ್ಜಯಂತ ॥ ೨ ॥

ಇಂದ್ರನಿಗೆ ಹವ್ಯವನ್ನರ್ಪಿಸುತ್ತೇನೆ. ಶತ್ರುಪರಾಜಯಕ್ಕೆ ಸಾಧನಸ್ವರೂಪವಾದ ಸ್ತುತಿವಾಕ್ಯಗಳ ಸಂಪಾದನವನ್ನು ನಾನು ಮಾಡಿರುತ್ತೇನೆ. ಬೇರೆ ಸ್ತೋತಾರರೂ ಆ ಪುರಾತನಸ್ವಾಮಿಯಾದ ಇಂದ್ರನ ಸಲುವಾಗಿ ಹೃದಯಪೂರ್ವಕವಾಗಿ, ಮನಸ್ಪೂರ್ವಕವಾಗಿ ಮತ್ತು ತಮ್ಮ ಶಕ್ತಿಜ್ಞಾನಗಳಿಗನುಸಾರವಾಗಿ ಸ್ತುತಿಸಂಪಾದನೆ ಮಾಡುತ್ತಾರೆ. ॥ ೨ ॥

೬೯೫. ಅಸ್ಮಾ ಇದು ತ್ಯಮುಪಮಂ ಸ್ವರ್ಷಾಂ ಭರಾಮ್ಯಾಂಗೂಷ—
ಮಾಸ್ಯೇನ ।
ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ
ವಾವೃಧಧ್ಯೈ ॥ ೩ ॥

ಅದೇ ಉಪಮಾನಭೂತನಾದ, ವರಣೀಯ ಧನದಾತನಾದ ಮತ್ತು ವಿಜ್ಞನಾದ ಇಂದ್ರನನ್ನು ಬೆಳಿಸುವದಕ್ಕಾಗಿ ನಾನು ಮುಖದಿಂದ ಉತ್ಕೃಷ್ಟವೂ, ನಿರ್ಮಲಸ್ತುತಿವಚನಗಳಿಂದ ಸಂಯುಕ್ತವೂ ಆದ ಮಹಾಶಬ್ದವನ್ನು ಮಾಡುತ್ತೇನೆ. ॥ ೩ ॥

೬೯೬. ಅಸ್ಮಾ ಇದು ಸ್ತೋಮಂ ಸಂ ಹಿನೋಮಿ ರಥಂ ನ ತಷ್ಟೇವ
ತತ್ಸಿನಾಯ ।
ಗಿರಶ್ಚ ಗಿರ್ವಾಹಸೇ ಸುವೃಕ್ತೀ—ಂದ್ರಾಯ ವಿಶ್ವಮಿನ್ವಂ
ಮೇಧಿರಾಯ ॥ ೪ ॥

ಯಾವ ರೀತಿಯಲ್ಲಿ ರಥವನ್ನು ನಿರ್ಮಿಸುವವನು ರಥಸ್ವಾಮಿಯ ಮುಂದೆ ರಥವನ್ನು ನಡೆಸುತ್ತಾನೋ, ಅದೇ ರೀತಿಯಲ್ಲಿ ನಾನಾದರೂ ಇಂದ್ರನ ಉದ್ದೇಶದಿಂದ ಸ್ತೋತ್ರವನ್ನು ಮಾಡುತ್ತೇನೆ. ಸ್ತುತಿಪಾತ್ರನಾದ ಇಂದ್ರನ ಸಲುವಾಗಿ ವಿಶ್ವವನ್ನು ವ್ಯಾಪಿಸಿದ ಹವಿಸ್ಸಿನ ಪ್ರೇರಣೆಮಾಡುತ್ತೇನೆ. ॥ ೪ ॥

೬೯೭. ಅಸ್ಮಾ ಇದು ಸಪ್ತಿಮಿವ ಶ್ರವಸ್ಯೇ—ಂದ್ರಾಯಾರ್ಕಂ ಜುಹ್ವಾ
ಸಮಂಜೇ ।
ವೀರಂ ದಾನೌಕಸಂ ವಂದಧ್ಯೈ ಪುರಾಂ ಗೂರ್ತಶ್ರವಸಂ
ದರ್ಮಾಣಂ ॥ ೫ ॥

ಕುದುರೆಗಳನ್ನು ರಥಕ್ಕೆ ಸಂಯೋಜಿಸುವಂತೆ, ನಾನಾದರೂ ಅನ್ನಪ್ರಾಪ್ತಿಯ ಇಚ್ಛೆಯಿಂದ ಸ್ತುತಿರೂಪಿನ ಮಂತ್ರಗಳ ಉಚ್ಚಾರಣವನ್ನು ಮಾಡುತ್ತೇನೆ. ಆ ವೀರನೂ, ದಾನಶೀಲನೂ, ಶ್ರೇಷ್ಠವಾದ ಅನ್ನದಿಂದ ಕೂಡಿದವನೂ, ಅಸುರನಗರ-ವಿದಾರಕನೂ ಆಗಿರುವ ಇಂದ್ರನ ವಂದನೆಯಲ್ಲಿ ಪ್ರವೃತ್ತನಾಗುತ್ತೇನೆ. ॥ ೫ ॥

## [ವರ್ಗಃ ೨೮]

೬೯೮. ಅಸ್ಮಾ ಇದು ತ್ವಷ್ಟಾ ತಕ್ಷದ್ ವಜ್ರಂ ಸ್ವಪಸ್ತಮಂ
ಸ್ವರ್ಯಂ೧ ರಣಾಯ ।
ವೃತ್ರಸ್ಯ ಚಿದ್ ವಿದದ್ ಯೇನ ಮರ್ಮ ತುಜನ್ನೀಶಾನಸ್ತುಜತಾ
ಕಿಯೇಧಾಃ ॥ ೬ ॥

ಇಂದ್ರನ ಸಲುವಾಗಿ, ತ್ವಷ್ಟಾರನು, ಯುದ್ಧನಿಮಿತ್ತವಾದ, ಶೋಭನೀಯ-ಕರ್ಮಕಾರಕವಾದ ಮತ್ತು ಸುಪ್ರೇರಣೀಯವಾದ ವಜ್ರದ ನಿರ್ಮಾಣವನ್ನು ಮಾಡಿದ್ದನು. ಶತ್ರುನಾಶದ ಸಲುವಾಗಿ ಸಿದ್ಧನಾಗಿ, ಐಶ್ವರ್ಯಶಾಲಿಯೂ, ಅಪರಿಮಿತ ಪರಾಕ್ರಮಿಯೂ ಆದ ಇಂದ್ರನು ತನ್ನ ವಧಿಸುವ ವಜ್ರದಿಂದ ವೃತ್ರನ ಮರ್ಮವನ್ನು ತುಂಡರಿಸಿದ್ದನು. ॥ ೬ ॥

೬೯೯. ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ
ಪಪಿವಾಂಚಾರ್ವನ್ನಾ ।

ಮುಷಾಯದ್ ವಿಷ್ಣುಃ ಪಚತಂ ಸಹೀಯಾನ್ ವಿಧ್ಯದ್

ವರಾಹಂ ತಿರೋ ಅದ್ರಿಮಸ್ತಾ ॥ ೭ ॥

ಜಗತ್ತಿನ ನಿರ್ಮಾಣಕಾರಕನಾದ ಇಂದ್ರನನ್ನು ಈ ಮಹಾಯಜ್ಞದಲ್ಲಿ ಯಾವ ಮೂರು ಅಭಿಷವಗಳು ಕೊಡಲ್ಪಟ್ಟಿರುವವೋ, ಇಂದ್ರನು ಅವುಗಳಲ್ಲಿ ಶೀಘ್ರವಾಗಿಯೇ ಸೋಮರೂಪದ ಅನ್ನವನ್ನು ಪಾನಮಾಡಿದ್ದನು. ಸಂಗಡವೇ, ಶೋಭನೀಯವಾದ ಹವ್ಯರೂಪವಾದ ಅನ್ನವನ್ನೂ ಭಕ್ಷಣಮಾಡಿದ್ದನು. ಸರ್ವಸಂಸಾರದಲ್ಲಿ ಇಂದ್ರನು ವ್ಯಾಪಕನಾಗಿರುತ್ತಾನೆ. ಅವನು ಅಸುರರ ಧನವನ್ನು ಹರಣಮಾಡಿದ್ದನು. ಅವನು ಶತ್ರುಂಜಯನೂ, ವಜ್ರಧಾರಿಯೂ ಆಗಿರುವನು. ಅವನು ಮೇಘವನ್ನು ಸಂಧಿಸಿ ತುಂಡರಿಸಿದ್ದನು. ॥ ೭ ॥

೨೦೦. ಅಸ್ಮಾ ಇದು ಗ್ನಾಶ್ಚಿದ್ ದೇವಪತ್ನೀ—ರಿಂದ್ರಾಯಾರ್ಕ—

ಮಹಿಹತ್ಯ ಊವುಃ ।

ಪರಿ ದ್ಯಾವಾಪೃಥಿವೀ ಜಭ್ರ ಉರ್ವೀ ನಾಸ್ಯ ತೇ

ಮಹಿಮಾನಂ ಪರಿ ಷ್ಟಃ ॥ ೮ ॥

ಇಂದ್ರನಿಂದ ವೃತ್ರಾಸುರನ ವಿನಾಶವಾದ ಮೇಲೆ ಗಮನಶೀಲರಾದ ದೇವಪತ್ನಿಯರು ಇಂದ್ರನನ್ನು ಸ್ತುತಿಸಿದ್ದರು. ಇಂದ್ರನು ವಿಸ್ತೃತವಾದ ಆಕಾಶ ಮತ್ತು ಪೃಥಿವಿಗಳನ್ನು ಅತಿಕ್ರಮಿಸಿದ್ದನು. ಆದರೂ ಭೂವ್ಯಾಕಾಶಗಳು ಇಂದ್ರನನ್ನು ಅತಿಕ್ರಮಿಸಲಾರವು. ॥ ೮ ॥

೨೦೧. ಅಸ್ಯೇದೇವ ಪ್ರ ರಿರಿಚೇ ಮಹಿತ್ವಂ ದಿವಸ್ಪೃಥಿವ್ಯಾಃ

ಪರ್ಯಂತರಿಕ್ಷಾತ್ ।

ಸ್ವರಾಳಿಂದ್ರೋ ದಮ ಆ ವಿಶ್ವಗೂರ್ತಃ ಸ್ವರಿರಮತ್ರೋ

ವವಕ್ಷೇ ರಣಾಯ ॥ ೯ ॥

ದ್ಯುಲೋಕ, ಭೂಲೋಕ, ಮತ್ತು ಅಂತರಿಕ್ಷ–ಇವಕ್ಕಿಂತಲೂ ಇಂದ್ರನ ಮಹಿಮೆಯು ಅಧಿಕವಾಗಿರುವದು. ತನ್ನ ಅಧಿವಾಸದಲ್ಲಿ ಇಂದ್ರನು ಸ್ವತೇಜಸ್ಸಿನಿಂದ ಸ್ವರಾಜ್ಯವನ್ನು ನಡೆಯಿಸುತ್ತಾನೆ. ಇಂದ್ರನು ಸರ್ವಕಾರ್ಯಕ್ಷಮನಾಗಿರುವನು. ಇಂದ್ರನು ಯುದ್ಧದಲ್ಲಿ ನಿಪುಣನಾಗಿರುವನು. ಇಂದ್ರನು ಮೇಘರೂಪ ಶತ್ರುಗಳನ್ನು ಯುದ್ಧದಲ್ಲಿ ಕರೆಯುತ್ತಾನೆ. ॥ ೯ ॥

೨೦೨. ಅಸ್ಯೇದೇವ ಶವಸಾ ಶುಷಂತಂ ವಿ ವೃಶ್ಚದ್ ವಜ್ರೇಣ

ವೃತ್ರಮಿಂದ್ರಃ ।

ಗಾ ನ ವ್ರಾಣಾ ಅವನೀರಮುಂಚ—ದಭಿ ಶ್ರವೋ ದಾವನೇ

ಸಚೇತಾಃ ॥ ೧೦ ॥

ತನ್ನ ವಜ್ರದಿಂದ ಇಂದ್ರನು ಜಲಶೋಷಕನಾದ ವೃತ್ರನನ್ನು ತುಂಡರಿಸಿದ್ದನು; ಮತ್ತು ಕಳ್ಳರಿಂದ ಅಪಹೃತವಾದ ದನಗಳಂತೆ ವೃತ್ರಾಸುರನಿಂದ ಅವರುದ್ಧವಾದ ಸಂಸಾರರಕ್ಷಕ ಜಲವನ್ನು ಬಿಡುಗಡೆಮಾಡಿದ್ದನು. ಹವ್ಯದಾತಾರನಿಗೆ ಇಂದ್ರನು ಅವನ ಇಚ್ಛಾನುಸಾರವಾಗಿ ಅನ್ನವನ್ನು ಕೊಡುತ್ತಾನೆ. ॥ ೧೦ ॥

## [ವರ್ಗಃ ೨೯]

೭೦೩. ಅಸ್ಯೇದು ತ್ವೇಷಸಾ ರಂತ ಸಿಂಧವಃ ಪರಿ ಯದ್
ವಜ್ರೇಣ ಸೀಮಯಚ್ಛತ್ ।
ಈಶಾನಕೃದ್ ದಾಶುಷೇ ದಶಸ್ಯನ್ ತುರ್ವೀತಯೇ ಗಾಧಂ
ತುರ್ವಣಿಃ ಕಃ ॥ ೧೧ ॥

ಇಂದ್ರನ ದೀಪ್ತಿಯಿಂದಲೇ ನದಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ಶೋಭಿಸುತ್ತವೆ; ಯಾಕಂದರೆ ಅವನು ತನ್ನ ವಜ್ರದಿಂದ ಅವುಗಳ ಸೀಮೆಯನ್ನು ನಿರ್ದಿಷ್ಟಗೊಳಿಸಿರುವನು. ಸ್ವತಃ ತನ್ನನ್ನೇ ಐಶ್ವರ್ಯವಂತನನ್ನಾಗಿ ಮಾಡಿ ಮತ್ತು ಹವ್ಯಹಾತಾರನಿಗೆ ಯೋಗ್ಯಪ್ರತಿಫಲವನ್ನು ಕೊಟ್ಟು, ಇಂದ್ರನು ತ್ವರಿತವಾಗಿ ತುರ್ವೀತಿಋಷಿಗೆ ನಿವಾಸಯೋಗ್ಯವಾದ ಒಂದು ಸ್ಥಾನವನ್ನು ನಿರ್ಮಿಸಿದನು. ॥ ೧೧ ॥

೭೦೪. ಅಸ್ಮಾ ಇದು ಪ್ರ ಭರಾ ತೂತುಜಾನೋ ವೃತ್ರಾಯ
ವಜ್ರಮೀಶಾನಃ ಕಿಯೇಧಾಃ ।
ಗೋರ್ನ ಪರ್ವ ವಿ ರದಾ ತಿರಶ್ಚೇ—ಷ್ಯನ್ನರ್ಣಾಂಸ್ಯಪಾಂ
ಚರಧ್ಯೈ ॥ ೧೨ ॥

ಇಂದ್ರನು ಶೀಘ್ರಗಾಮಿಯೂ, ಸರ್ವೇಶ್ವರನೂ, ಅಪರಿಮಿತ ಶಕ್ತಿಶಾಲಿಯೂ ಆಗಿರುವನು. ಇಂದ್ರನೇ! ನೀನು ಈ ವೃತ್ರನ ಮೇಲೆ ವಜ್ರಪ್ರಹಾರ ಮಾಡಯ್ಯಾ. ಪಶುವಿನಂತಿರುವ ವೃತ್ರನ ಶರೀರದ ಸಂಧಿಗಳನ್ನು ತಿರ್ಯಗ್ಭಾವದಿಂದ ಅವಸ್ಥಿತವಾದ ವಜ್ರದಿಂದ ತುಂಡರಿಸಿ, ವೃತ್ರನ ಹೊಟ್ಟೆಯೊಳಗಿದ್ದ ವೃಷ್ಟಿಯನ್ನು ಹೊರಗೆ ಹಾಕಿ, ಪೃಥಿವಿಯ ಮೇಲೆ ಜಲವು ವಿಚರಿಸುವಂತೆ ಮಾಡಯ್ಯಾ. ॥ ೧೨ ॥

೭೦೫. ಅಸ್ಯೇದು ಪ್ರ ಬ್ರೂಹಿ ಪೂರ್ವ್ಯಾಣಿ ತುರಸ್ಯ ಕರ್ಮಾಣಿ
ನವ್ಯ ಉಕ್ಥೈಃ ।
ಯುಧೇ ಯದಿಷ್ಣಾನ ಆಯುಧಾ—ನ್ಯೃಘಾಯಮಾಣೋ
ನಿರಿಣಾತಿ ಶತ್ರೂನ್ ॥ ೧೩ ॥

ಮಂತ್ರಗಳಿಂದ ಸ್ತುತ್ಯನಾದ, ಯುದ್ಧಾರ್ಥಕ್ಷಿಪ್ರಗಾಮಿಯಾದ ಇಂದ್ರನ ಪೂರ್ವಕರ್ಮಗಳನ್ನು ವರ್ಣಿಸಿರಿ. ಇಂದ್ರನು ಯುದ್ಧದಸಲುವಾಗಿ ತಿರುಗಿ ತಿರುಗಿ

ಎಲ್ಲ ಶಸ್ತ್ರಗಳನ್ನು ಒಗೆದು, ಶತ್ರುಗಳ ಸಮ್ಮುಖದಲ್ಲಿ ಹೋಗಿ ಅವರನ್ನು ವಧಿಸುತ್ತಾನೆ. ॥ ೧೩ ॥

೭೦೬. ಅಸ್ಯೇದು ಭಿಯಾ ಗಿರಯಶ್ಚ ದೃಳ್ಹಾ ದ್ಯಾವಾ ಚ
ಭೂಮಾ ಜನುಷಸ್ತುಜೇತೆ ।
ಉಪೋ ವೇನಸ್ಯ ಜೋಗುವಾನ ಓಣಿಂ ಸದ್ಯೋ ಭುವದ್
ವೀರ್ಯಾಯ ನೋಧಾಃ ॥ ೧೪ ॥

ಇದೇ ಇಂದ್ರನ ಭಯದಿಂದ ಪರ್ವತಗಳು ನಿಶ್ಚಲವಾಗಿ ಬಿಡುತ್ತವೆ ಮತ್ತು ಇಂದ್ರನು ಪ್ರಕಟನಾದಮೇಲೆ ಭೂಮ್ಯಾಕಾಶಗಳು ಕಂಪಿಸತೊಡಗುತ್ತವೆ. ನೋಧಾ ಋಷಿಯು ಇದೇ ಕಮನೀಯನಾದ ಇಂದ್ರನ ರಕ್ಷಣಶಕ್ತಿಯ, ತನ್ನ ಸೂಕ್ತಗಳಿಂದ, ತಿರುಗಿ ತಿರುಗಿ ಪ್ರಾರ್ಥನೆಮಾಡಿ ತ್ವರಿತವಾಗಿ ಶಕ್ತಿಯನ್ನು ದೊರಕಿಸಿದ್ದನು. ॥ ೧೪ ॥

೭೦೭. ಅಸ್ಮಾ ಇದು ತ್ಯದನು ದಾಯ್ಯೇಷಾಮೇಕೋ ಯದ್
ವವ್ನೇ ಭೂರೇರೀಶಾನಃ
ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ
ಸುಷ್ವಿಮಾವದಿಂದ್ರಃ ॥ ೧೫ ॥

ಇಂದ್ರನು ಒಬ್ಬನೇ ಒಬ್ಬಂಟಿಗನಾಗಿ ಶತ್ರುವಿಜಯವನ್ನು ಮಾಡುತ್ತಾನೆ. ಅವನು ವಿಧವಿಧವಾದ ಧನಗಳ ಸ್ವಾಮಿಯಾಗಿರುವನು. ಸ್ತೋತಾರನ ಹತ್ತಿರ ಇಂದ್ರನು ಯಾವ ಸ್ತೋತ್ರವನ್ನು, ಇಚ್ಛಿಸಿದ್ದನೋ, ಅದನ್ನೇ ಅವನು ಇಂದ್ರನಿಗೆ ಅರ್ಪಿಸಿದನು. ಸ್ವಶ್ವಪುತ್ರನಾದ ಸೂರ್ಯನ ಹತ್ತರ ಹೆಣಗಾಡುವಾಗ್ಗೆ ಸೋಮಾಭಿಷವಕಾರಿಯಾದ ಏತಶಋಷಿಯನ್ನು ಇಂದ್ರನು ಕಾಪಾಡಿದ್ದನು. ॥ ೧೫ ॥

೭೦೮. ಏವಾ ತೇ ಹಾರಿಯೋಜನಾ ಸುವೃಕ್ತೀ—ಂದ್ರ ಬ್ರಹ್ಮಾಣಿ
ಗೋತಮಾಸೊ ಅಕ್ರನ್ ।
ಐಷು ವಿಶ್ವಪೇಶಸಂ ಧಿಯಂ ಧಾಃ ಪ್ರಾತರ್ಮಕ್ಷೂ
ಧಿಯಾವಸುರ್ಜಗಮ್ಯಾತ್ ॥ ೧೬ ॥

ಕುದುರೆಗಳಿಂದ ಕೂಡಿದ ರಥದ ಸ್ವಾಮಿಯಾದ ಇಂದ್ರನೇ! ನೀನು ಯಜ್ಞದಲ್ಲಿ ಉಪಸ್ಥಿತನಾಗಬೇಕೆಂದು ಗೋತಮಗೋತ್ರೀಯ ಋಷಿಗಳು ಸ್ತುತಿರೂಪ ಮಂತ್ರಗಳನ್ನು ಸ್ಮರಿಸಿದ್ದರು. ಆ ಗೋತಮಗೋತ್ರೀಯ ಋಷಿಗಳಿಗೆ ಸುಬುದ್ಧಿಯನ್ನು ಕರುಣಿಸಯ್ಯಾ. ಸ್ವಬುದ್ಧಿಬಲದಿಂದ ಧನವನ್ನು ಸಂಪಾದಿಸಿದ ಇಂದ್ರನು ಪ್ರಾತಃಕಾಲದಲ್ಲಿ ಶೀಘ್ರವಾಗಿ ಬರಲಿ. ॥ ೧೬ ॥

ನಾಲ್ಕನೆಯ ಅಧ್ಯಾಯವು ಮುಗಿದುದು

---